# ಗದಗ ಪರಿಸರದ ಜೈನ ಪರಂಪರೆ : ಒಂದು ಅಧ್ಯಯನ

(ಪಿಎಚ್.ಡಿ. ಪದವಿಗಾಗಿ ಹಂಪಿ ಕನ್ನಡ ವಿಶ್ವವಿದ್ಯಾಲಯಕ್ಕೆ
ಸಾದರ ಪಡಿಸಿದ ಮಹಾಪ್ರಬಂಧದ ಪ್ರತಿ)


ಸಂಶೋಧಕರು

ಪರಸಪ್ಪ ಹ. ಬಾರಕೇರ

ಮಾರ್ಗದರ್ಶಕರು

ಡಾ. ವೀಣಾ ಹೂಗಾರ

ಎಮ್.ಎ.ಪಿಎಚ್.ಡಿ. ಡಿಪ್. ಇನ್ ಬಸವ ಅಧ್ಯಯನ
ಸಹ ಪ್ರಾಧ್ಯಾಪಕರು, ಕನ್ನಡ ವಿಭಾಗ
ಕೆ.ಎಲ್.ಇ. ಸಂಸ್ಥೆಯ
ಶ್ರೀ ಜಗದ್ಗುರು ತೋಂಟದಾರ್ಯ ಮಹಾವಿದ್ಯಾಲಯ, ಗದಗ





ಅಧ್ಯಯನಾಂಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ - ೫೮೩ ೨೭೬

ಲಿಂಗಾಯತ ಅಧ್ಯಯನ ಸಂಸ್ಥೆ
ಸಂಶೋಧನಾ ಕೇಂದ್ರ
ಶ್ರೀ ಜಗದ್ಗುರು ತೋಂಟದಾರ್ಯ ಸಂಸ್ಥಾನ ಮಠ,
ಗದಗ-೫೮೨೧೦೧



೨೦೧೮

# ಗದಗ ಪರಿಸರದ ಜೈನ ಪರಂಪರೆ : ಒಂದು ಅಧ್ಯಯನ

(ಪಿಎಚ್.ಡಿ. ಪದವಿಗಾಗಿ ಹಂಪಿ ಕನ್ನಡ ವಿಶ್ವವಿದ್ಯಾಲಯಕ್ಕೆ
ಸಾದರ ಪಡಿಸಿದ ಮಹಾಪ್ರಬಂಧದ [illegible] ಪ್ರತಿ)


ಸಂಶೋಧಕರು

**ಪರಸಪ್ಪ ಹ. ಬಾರಕೇರ**

ಮಾರ್ಗದರ್ಶಕರು

**ಡಾ. ವೀಣಾ ಹೂಗಾರ**

ಎಮ್.ಎ.ಪಿಎಚ್.ಡಿ. ಡಿಪ್. ಇನ್ ಬಸವ ಅಧ್ಯಯನ
ಸಹ ಪ್ರಾಧ್ಯಾಪಕರು, ಕನ್ನಡ ವಿಭಾಗ
ಕೆ.ಎಲ್.ಇ. ಸಂಸ್ಥೆಯ
ಶ್ರೀ ಜಗದ್ಗುರು ತೋಂಟದಾರ್ಯ ಮಹಾವಿದ್ಯಾಲಯ, ಗದಗ





ಅಧ್ಯಯನಾಂಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ - ೫೮೩ ೨೭೬

ಲಿಂಗಾಯತ ಅಧ್ಯಯನ ಸಂಸ್ಥೆ
ಸಂಶೋಧನಾ ಕೇಂದ್ರ
**ಶ್ರೀ ಜಗದ್ಗುರು ತೋಂಟದಾರ್ಯ ಸಂಸ್ಥಾನ ಮಠ,**
ಗದಗ-೫೮೨೧೦೧

೨೦೧೮

# ದೃಢೀಕರಣ ಪತ್ರ

ಶ್ರೀ ಪರಸಪ್ಪ ಹನುಮಂತಪ್ಪ ಬಾರಕೇರ ಅವರು ಬರೆದು ಸಾದರಪಡಿಸಿದ "ಗದಗ ಪರಿಸರದ ಜೈನ ಪರಂಪರೆ : ಒಂದು ಅಧ್ಯಯನ" ಎಂಬ ವಿಷಯ ಕುರಿತು ಸಿದ್ಧಪಡಿಸಿದ ಮಹಾಪ್ರಬಂಧ ಮೂಲ ಸಂಶೋಧನಾ ಕೃತಿ ಆಗಿದೆ. ಇವರು ನನ್ನ ಮಾರ್ಗದರ್ಶನದಲ್ಲಿ ಹಂಪಿಯ ಕನ್ನಡ ವಿಶ್ವವಿದ್ಯಾಲಯದ ಲಿಂಗಾಯತ ಅಧ್ಯಯನ ಸಂಸ್ಥೆಯ ಸಂಶೋಧನಾ ಕೇಂದ್ರದಲ್ಲಿ ಸಂಶೋಧನೆ ಕೈಗೊಂಡಿದ್ದಾರೆ. ಈ ಮಹಾಪ್ರಬಂಧವು ಇಡಿಯಾಗಿ ಇಲ್ಲವೇ ಬಿಡಿಯಾಗಿ ಈ ಮೊದಲು ಎಲ್ಲಿಯೂ ಪ್ರಕಟವಾಗಿಲ್ಲವೆಂದು ಈ ಮೂಲಕ ದೃಢೀಕರಿಸುತ್ತೇನೆ.

ಸ್ಥಳ : ವಿದ್ಯಾರಣ್ಯ ಹಂಪಿ

ದಿನಾಂಕ

(ಡಾ. ವೀಣಾ ಹೂಗಾರ)
ಮಾರ್ಗದರ್ಶಕರು
ಲಿಂಗಾಯತ ಅಧ್ಯಯನ ಸಂಸ್ಥೆ,
ಶ್ರೀ ತೋಂಟದಾರ್ಯ ಮಠ, ಗದಗ

# ಪ್ರಮಾಣ ಪತ್ರ

ನಾನು ಶ್ರೀ ಪರಸಪ್ಪ ಹನುಮಂತಪ್ಪ ಬಾರಕೇರ "ಗದಗ ಪರಿಸರದ ಜೈನ ಪರಂಪರೆ : ಒಂದು ಅಧ್ಯಯನ" ಎಂಬ ವಿಷಯ ಕುರಿತು ಸಿದ್ಧಪಡಿಸಿದ ಮಹಾಪ್ರಬಂಧವನ್ನು ಡಾ. ವೀಣಾ ಹೂಗಾರ ಅವರ ಮಾರ್ಗದರ್ಶನದಲ್ಲಿ ಲಿಂಗಾಯತ ಅಧ್ಯಯನ ಸಂಸ್ಥೆ ಮೂಲಕ ಹಂಪಿಯ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸುತ್ತಿದ್ದೇನೆ. ಪ್ರಸ್ತುತ ಮಹಾಪ್ರಬಂಧವು ನನ್ನ ಸ್ವಂತ ಪರಿಶ್ರಮದ ಫಲವಾಗಿದ್ದು ಇಡಿಯಾಗಿ ಇಲ್ಲವೇ ಬಿಡಿಯಾಗಿ ಈ ಮೊದಲು ಎಲ್ಲಿಯೂ ಪ್ರಕಟವಾಗಿಲ್ಲವೆಂದು ಪ್ರಮಾಣಿಕರಿಸುತ್ತೇನೆ.

ಸ್ಥಳ : ವಿದ್ಯಾರಣ್ಯ ಹಂಪಿ
ದಿನಾಂಕ

**(ಶ್ರೀ ಪರಸಪ್ಪ ಹನುಮಂತಪ್ಪ ಬಾರಕೇರ)**
ಸಂಶೋಧಕರು
ಲಿಂಗಾಯತ ಅಧ್ಯಯನ ಸಂಸ್ಥೆ,
ಶ್ರೀ ತೋಂಟದಾರ್ಯ ಮಠ, ಗದಗ

# ಪರಿವಿಡಿ

# ಅಧ್ಯಾಯ – ೧
# ಅಧ್ಯಯನದ ಉದ್ದೇಶ, ವ್ಯಾಪ್ತಿ, ಸ್ವರೂಪ

೧) ಪ್ರಸ್ತಾವನೆ

೨) ಅಧ್ಯಯನದ ಉದ್ದೇಶ

೩) ಅಧ್ಯಯನದ ವ್ಯಾಪ್ತಿ

೪) ಅಧ್ಯಯನದ ಸ್ವರೂಪ

೫) ಅಧ್ಯಯನದ ಮಹತ್ವ

ಅಧ್ಯಾಯ ೧

# ಅಧ್ಯಯನದ ಉದ್ದೇಶ, ವ್ಯಾಪ್ತಿ, ಸ್ವರೂಪ

## ೧. ಪ್ರಸ್ತಾವನೆ

'ಧರ್ಮ' ಎಂಬ ಪದ ಅನೇಕ ದೃಷ್ಟಿಕೋನಗಳಿಂದ ಪ್ರಯೋಗಗೊಂಡಿದ್ದು ನಾನಾರ್ಥಗಳನ್ನೊಳಗೊಂಡಿದೆ[೧]. ಮತ ಅಥವಾ ದರ್ಶನವಾಡಿಕೆಯಾಗಿ ಬಂದ ಮತ ಸಂಬಂಧವಾದ ಕಟ್ಟಳೆ, ವಿಧಿ, ಆಚಾರ ಎಂಬೀ ಅರ್ಥಗಳೇ ಅಲ್ಲದೆ ಕರ್ತವ್ಯ ದಾನಾದಿ ಸತ್ಕಾರ್ಯ, ದಯೆ, ಕರುಣೆ, ಸಧ್ಭಾವ ಎಂಬೀ ಮಾನವೀಯ ಮೌಲ್ಯಗಳ ವಿಶಾಲಾರ್ಥವನ್ನು ಇದು ಪಡೆದುಕೊಂಡಿದೆ. ಆಯಾ ಮತೀಯ ದೃಷ್ಟಿಕೋನದಿಂದ ಧರ್ಮವೆಂದು ಕರೆಸಿಕೊಳ್ಳುವ ಆಚಾರ ವಿಚಾರಗಳು ತಮ್ಮ ವಿಶಾಲಾರ್ಥದಲ್ಲಿ ಮಾನವೀಯ ಮೌಲ್ಯಗಳನ್ನು ಒಳಗೊಂಡಿದ್ದು ಸಾರ್ವತ್ರಿಕವೆನಿಸಿ, ಕಾಲ ದೇಶಾತೀತವಾದಾಗ ತಮ್ಮ ಸಾರ್ಥಕತೆಯನ್ನು ಪಡೆದುಕೊಳ್ಳುವಂತಾಗುತ್ತವೆ.

ಯಾವುದು ಸಹಜ ಸ್ವಭಾವವಾಗಿದೆಯೋ ಅದೇ ಧರ್ಮ. ಜೀವಿಯ ಸ್ವಭಾವ ಆನಂದ. ಅದು ಇಂದ್ರೀಯಾನಂದವಲ್ಲ, ಅತೀಂದ್ರಿಯಾನಂದ. ಯಾವ ಅನುಷ್ಠಾನದಿಂದ ಆ ಆನಂದವು ಪ್ರಸ್ತಾವಾಗುತ್ತದೋ ಅದನ್ನು ಧರ್ಮವೆಂದು ಹೇಳಲಾಗಿದೆ. ರಾಗ ದ್ವೇಷಗಳನ್ನು ಬಿಟ್ಟು ನಿಜಾತ್ಮನಲ್ಲಿ ನೆಲೆಸುವುದೇ ಧರ್ಮ. ರಾಗ-ದ್ವೇಷಗಳಿದ್ದು ಮನೆ-ಮಠ ತ್ಯಾಗದಿಂದಷ್ಟೇ ಧರ್ಮವಾಗದು. ಆಚಾರ-ವಿಚಾರಗಳು ನಿಷ್ಠಾಪೂರ್ವಕವಾಗಿ ಬೆರೆತಿರಬೇಕು.[೨]

ಧರ್ಮ, ಅರ್ಥ, ಕಾಮ, ಮೋಕ್ಷ ನಾಲ್ಕು ಪುರುಷಾರ್ಥಗಳಲ್ಲಿ ಧರ್ಮವು ಸಮಾಜದ ಎಲ್ಲಾ ಕ್ಷೇತ್ರಗಳಲ್ಲಿ ತನ್ನದೇ ಆದ ಪ್ರಭಾವವನ್ನು ಬೀರಿದೆ, ಬೀರುತ್ತಿದೆ ಎಂಬುದನ್ನು ಚಾರಿತ್ರಿಕ, ಸಾಮಾಜಿಕ ದಾಖಲೆಗಳ ಮೂಲಕವೇ ಗ್ರಹಿಸಬಹುದು. ಭಾರತದಲ್ಲಿ ಹುಟ್ಟಿ ಪ್ರಸಾರ ಹೊಂದಿದ ಪ್ರಾಚೀನ ಧರ್ಮಗಳಲ್ಲಿ ಜೈನ ಧರ್ಮವು ಒಂದು.

---

೧. ಕನ್ನಡ ಸಾಹಿತ್ಯ ಪರಿಷತ್ತಿನ ಕನ್ನಡ ನಿಘಂಟು, ಸಂಪುಟ-೪, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು-೧೯೭೬, ಪುಟ-೪/೯೨, ೪/೯೪

೨. ಜೈನೇಂದ್ರ ಸಿದ್ಧಾಂತ ಕೋಶ, ಭಾಗ-೨, ಜೈನೇಂದ್ರವರ್ಣಿ, ಭಾರತೀಯ ಜ್ಞಾನಪೀಠ ಪ್ರಕಾಶನ-೧೯೪೪.

ಜೈನ ಧರ್ಮವು ಭಾರತದಲ್ಲಿ, ಕರ್ನಾಟಕದಲ್ಲಿ, ಗದಗ ಪರಿಸರದಲ್ಲಿ ಪ್ರಸಾರ ಹೊಂದಿದ ಬಗೆ ಹಾಗೂ ಅದು ಇಂದಿನ ಕಾಲಮಾನದಲ್ಲಿ ಅದರ ಸ್ಥಿತಿಗತಿಯನ್ನು ಕುರಿತು ಪ್ರಸ್ತುತ ಮಹಾಪ್ರಬಂಧದ ಮೂಲ ಉದ್ದೇಶವಾಗಿದೆ. ಅಲ್ಲದೆ ಈ ಅಧ್ಯಯನವು ಒಂದು ಪರಂಪರೆಯು ಒಂದು ಪರಿಸರದಲ್ಲಿ ಯಾವ ರೀತಿಯಾಗಿ ಬೆಳವಣಿಗೆ ಹೊಂದಿತು ಮತ್ತು ಆ ಪರಂಪರೆಯ ಈ ಪರಿಸರದಲ್ಲಿ ಸದ್ಯ ಯಾವ ರೀತಿಯಲ್ಲಿದೆ ಎಂಬುದನ್ನು ಈ ಅಧ್ಯಯನಕ್ಕೆ ಒಳಪಡಿಸಲಾಗಿದೆ. ಗದಗ ಪರಿಸರದಲ್ಲಿ ಜೈನ ಪರಂಪರೆಯ ವಿಶಿಷ್ಟತೆ, ಅಧ್ಯಯನದ ಮೂಲ ಉದ್ದೇಶಗಳು, ಪರಿಕಲ್ಪನೆಗಳು, ಅಧ್ಯಯನದ ವಿನ್ಯಾಸ, ಪ್ರಾಮುಖ್ಯತೆ ಹಾಗೂ ಅಧ್ಯಯನದ ಇತಿಮಿತಿಗಳನ್ನು ಕುರಿತು ಪ್ರಸ್ತುತ ಪ್ರಬಂಧದಲ್ಲಿ ವಿವರಣೆಗೊಳಪಡಿಸಲಾಗಿದೆ.

ಜೈನ ಧರ್ಮದ ಜನ್ಮಭೂಮಿ ಭರತ ಖಂಡವೇ ಆಗಿದೆ. ಜೈನ ಧರ್ಮವು ಪ್ರಪಂಚದ ಪ್ರಾಚೀನ ಧರ್ಮಗಳಲ್ಲೊಂದು. ಭಾಗವತ ಪುರಾಣದಲ್ಲಿ ಬರುವ ಋಷಭದೇವನ ಕಥೆಯು ಜೈನ ಧರ್ಮದ ಪ್ರಾಚೀನತೆಗೆ ಜೀವಂತ ಉದಾಹರಣೆ ಎನಿಸುತ್ತದೆ. ಮಹಾರಾಜ ನಾಭಿಯ ಮಗನಾದ ಋಷಭದೇವನು ತನ್ನ ತೇಜಸ್ಸಿನ ಬಲದಿಂದ ಭೂಮಿಗೆ ಮಳೆ ತರಿಸಿದಾಗ ಲಜ್ಜಿತನಾದ ಇಂದ್ರನು ತನ್ನ ಮಗಳಾದ ಜಯಂತಿ ಎಂಬುವಳನ್ನು ಋಷಭದೇವನಿಗೆ ಮದುವೆ ಮಾಡಿಕೊಡುತ್ತಾನೆ. ಋಷಭದೇವನಿಗೆ ನೂರು ಜನ ಮಕ್ಕಳಾದರು. ಅವರಲ್ಲಿ ಅತ್ಯಂತ ಶ್ರೇಷ್ಠನಾದ ಭರತ ಚಕ್ರವರ್ತಿಯ ಹೆಸರಿನಿಂದಲೇ ಈ ದೇಶಕ್ಕೆ 'ಭಾರತ' ಎಂಬ ಅಭಿದಾನ ಪ್ರಾಪ್ತವಾಯಿತು. ಭರತನಿಗೆ ರಾಜ್ಯಾಭಿಷೇಕ ಮಾಡಿ ಅಡವಿಗೆ ನಡೆದ ಋಷಭದೇವನು ದಿಗಂಬರನಾಗಿ ಪ್ರಚಂಡ ತಪಸ್ಸನ್ನು ಆಚರಿಸಿದನು. ಜೈನ ಧರ್ಮವು ಋಷಭದೇವನನ್ನು ಪ್ರಥಮ ತೀರ್ಥಂಕರನೆಂದು ಪರಿಗಣಿಸುತ್ತದೆ. ಋಷಭದೇವನಿಂದ ಮೊದಲಗೊಂಡು ಕ್ರಿ.ಪೂ. ಆರನೇ ಶತಮಾನದಲ್ಲಿದ್ದ ಮಹಾವೀರನವರೆಗೆ ಜೈನ ಧರ್ಮವು ಇಪ್ಪತ್ನಾಲ್ಕು ಮಂದಿ ತೀರ್ಥಂಕರರನ್ನು ತನ್ನ ಧರ್ಮದ ಪ್ರವರ್ತಕರೆಂದು ಪರಿಗಣಿಸಿದೆ.

ಜಿನನಿಗೆ ಸಂಬಂಧಪಟ್ಟ ಮತಕ್ಕೆ ಜೈನ ಮತವೆಂದು, ಜಿನನೆಂದರೆ ಕರ್ಮ ಬಂಧನದಿಂದ ಮುಕ್ತನಾದ ದಿವ್ಯಾತ್ಮನು, ಅಂತರಂಗ ಬಹಿರಂಗಗಳಲ್ಲಿ ಪರವು ಪರಿಶುದ್ಧವಾದ ಪಾವಿತ್ರ್ಯ ಉಳ್ಳವನು. ಇಂತಹ ಜಿನರನ್ನು ಕರ್ಮವನ್ನು ಜಯಸಿದ ಮಹಾತ್ಮರನ್ನು ನಂಬಿ ಅನುಸರಿಸುವ ಭಕ್ತರೇ ಜೈನರು. ಇವರೆ ಅವರಿಗೆ ದೇವರು. ಜೈನ ದೇವರುಗಳು ವೈದಿಕ ದೇವತೆಗಳಂತೆ ವಿಲಕ್ಷಣ ಸ್ವರೂಪದವರಲ್ಲ. ಈ ಕರ್ಮಭೂಮಿಯಲ್ಲಿ ಜನಿಸಿ ಇಲ್ಲಿಯ ಅನಾದಿ ಕರ್ಮದ ಪ್ರವಾಹದ ಜೊತೆಗೆ ಈಜಿ ಅದರಿಂದ ಪಾರಾಗಿ ಬಂದು ಸಾಧನೆಯ ಮೂಲಕ ಅತ್ಯುಚ್ಚ ಸ್ಥಿತಿಯನ್ನು ಸಾಧಿಸಿದ ದಿವ್ಯಸಿದ್ಧರು. ಅಂತೆಯೇ ಜೈನರ ದೇವತಾ ಕಲ್ಪನೆಯು ಹೆಚ್ಚ ಹೃದಯ ಗ್ರಾಹಿಯಾಗಿದೆ.

ಜೈನ ಧರ್ಮವು ಭಾಷೆ, ಸಂಸ್ಕೃತಿ, ಸಾಹಿತ್ಯ, ಕಲೆ, ವಾಸ್ತುಶಿಲ್ಪ ಹಾಗೂ ಶಿಕ್ಷಣ ಕ್ಷೇತ್ರಗಳಿಗೆ ಮಹತ್ವದ ಕೊಡುಗೆಗಳನ್ನು ನೀಡಿದೆ, ಜೈನ ಪುರಾಣಗಳು ೬೩ ಶಲಾಕ ಪುರುಷರ[೩] ಜೀವನ ಕತೆಯನ್ನು ಚಿತ್ತರಿಸುತ್ತವೆ.

೩. ತ್ರಿಷಷ್ಠಿಶಲಾಕ ಪುರುಷರು–೨೪ ಮಂದಿ ತೀರ್ಥಂಕರರು, ೧೨ ಮಂದಿ ಚಕ್ರವರ್ತಿಗಳು, ೯ ಮಂದಿ ವಾಸುದೇವರು, ೯ ಮಂದಿ ಬಲದೇವರು, ೯ ಮಂದಿ ಪ್ರತಿವಾಸುದೇವರು (ಇವರ ಸಂಪೂರ್ಣ ಪಟ್ಟಿಯನ್ನು ಅನುಬಂಧವಲ್ಲಿ ಕೊಡಲಾಗಿದೆ.)

ಜೈನ ಧರ್ಮದ ಗ್ರಂಥಗಳು ಪ್ರಾಕೃತ, ಸಂಸ್ಕೃತದಲ್ಲಿಯೂ ರಚಿತವಾಗಿವೆ. ಜೈನ ಶಾಸ್ತ್ರ ೧೨೬೦[೪] ಹಾಗೂ ೧೪ ಪೂರ್ವಾಂಗಗಳೆಂದು[೫] ಎರಡು ವಿಧಗಳನ್ನು ಒಳಗೊಂಡಿದೆ. ಕನ್ನಡದಲ್ಲಿ ತೀರ್ಥಂಕರರ ಚರಿತ್ರೆಗಳನ್ನೊಳಗೊಂಡ ಪುರಾಣಗಳು (ಚಂದ್ರಕಾವ್ಯಗಳು) ಜೈನ ತತ್ವಗಳ ಸೌರಭವನ್ನು ಸೂಸುತ್ತವೆ. ವಡ್ಡಾರಾಧನೆಯಲ್ಲಿಯ ೧೯ ಕತೆಗಳಲ್ಲಿ ಬರುವ ನಾಯಕನೂ ಒಂದಿಲ್ಲೊಂದು ವಿಧದಲ್ಲಿ ಜೈನ ಧರ್ಮದ ಕಟ್ಟುನಿಟ್ಟಾದ ಪರಿಪಾಲಕನಾಗಿದ್ದಾನೆ. ಜೀನಸೇನನ–ಪೂರ್ವ ಪುರಾಣ, ಪಂಪನ–ಆದಿಪುರಾಣ, ಪೊನ್ನನ–ಶಾಂತಿ ಪುರಾಣ, ರನ್ನನ–ಅಜಿತ ತೀರ್ಥಂಕರ ಪುರಾಣ, ಚಾವುಂಡರಾಯನ–ತ್ರಿಷಷ್ಠಿ ಶಲಾಕ ಪುರಾಣ, ನಯಸೇನನ–ಧರ್ಮಾಮೃತ, ಬ್ರಹ್ಮಶಿವನ–ಸಮಯ ಪರೀಕ್ಷೆ, ವೃತ್ತವಿಲಾಸನ–ಧರ್ಮಪರೀಕ್ಷೆ, ಜನ್ನನ–ಅನಂತನಾಥ ಪುರಾಣ, ಹೀಗೆ ಜೈನ ಹಾಗೂ ಜೈನೇತರ ಕವಿಗಳ ಕೃತಿಗಳು ಜೈನ ಧರ್ಮದ ಮಹತ್ವವನ್ನು ಸಾರುತ್ತವೆ.

ಕರ್ನಾಟಕದಲ್ಲಿ ಜೈನ ಪರಂಪರೆಯನ್ನು ಅವಲೋಕಿಸಿದಾಗ ಕ್ರಿ.ಪೂ. ಕಾಲದಿಂದಲೇ ಪುರಾವೆಗಳು ಸಿಗುತ್ತವೆ. ಅನಂತರ ಇಲ್ಲಿ ಆಳ್ವಿಕೆ ನಡೆಸಿದ ರಾಜ ಮನೆತನಗಳು ಜೈನ ಧರ್ಮವನ್ನು ರಾಜ ಧರ್ಮವನ್ನಾಗಿ ಸ್ವೀಕರಿಸಿ ಈ ಧರ್ಮವನ್ನು ಬೆಳೆಸಿದರು. ಇದರಲ್ಲಿ ಗದಗ ಪ್ರದೇಶದಲ್ಲಿ ಜೈನ ಧರ್ಮವು ಹೆಮ್ಮರವಾಗಿ ಬೆಳೆದು ಫಲ ಕೊಡುವ ಸಮಯದಲ್ಲಿ ಅನ್ಯ ಧರ್ಮಿಗಳ ಪ್ರಬಲ ವಿರೋಧದಿಂದ ಅವನತಿ ಹೊಂದುತ್ತಾ ಬಂದಿತು ಎಂಬುದನ್ನು ಚರಿತ್ರೆಯಿಂದ ತಿಳಿಯಲಾಗಿದೆ.

ಕರ್ನಾಟಕದಲ್ಲಿ ಜೈನ ಧರ್ಮದ ಪ್ರವೇಶವು ಕ್ರಿ.ಪೂ. ಕಾಲದಲ್ಲೇ ಆಯಿತು. ಭಾರತದಲ್ಲಿ ಸ್ಥಾಪಿತವಾದ ಮೊದಲ ಸಾಮ್ರಾಜ್ಯ ಕಟ್ಟಿದ ಚಂದ್ರಗುಪ್ತ ಮೌರ್ಯನು ಉತ್ತರ ಭಾರತದಿಂದ ಭದ್ರಬಾಹು ಎಂಬ ಜೈನ ಮುನಿಯ ಮೂಲಕ ಕರ್ನಾಟಕದ ಈಗೀನ ಶ್ರವಣಬೆಳಗೊಳಕ್ಕೆ ಬಂದು "ಸಲ್ಲೇಖನ ವೃತವನ್ನು" ಆಚರಿಸಿ ಸಮಾಧಿ ಮರಣ ಹೊಂದಿದನೆಂದು ಪ್ರತೀತಿ. ನಂತರ ಕರ್ನಾಟಕದ ಮೂಡಬಿದಿರೆ, ಬೆಳಗಾವಿ, ಪುಲಿಗೇರಿ, ಲಕ್ಕುಂಡಿ, ಮುಳಗುಂದ ಹೊಂಬುಜ, ತುಳುನಾಡು ಮುಂತಾದ ಸ್ಥಳಗಳಲ್ಲಿ ನೆಲೆಯನ್ನು ಕಂಡುಕೊಂಡು ಜೈನ ಧರ್ಮವು ಪ್ರಬಲವಾಗಿ ಬೆಳೆಯಿತು. ಮೊದಲು ರಾಜ ಪ್ರಭುತ್ವದಲ್ಲಿ ಬೆಳೆದು, ಚಾರಿತ್ರಿಕ ಬೆಳವಣಿಗೆ ಹೊಂದಿ ಸಾಹಿತ್ಯಿಕವಾಗಿ ಹಲವಾರು ಕೃತಿಗಳ ರಚನೆಗೆ ಪ್ರೇರಣೆಯನ್ನು ಜೈನ ಧರ್ಮ ನೀಡಿದೆ.

ಕರ್ನಾಟಕದಲ್ಲಿ ಜೈನ ಪರಂಪರೆಯ ಬೆಳವಣಿಗೆಯಲ್ಲಿ ಒಂದು ಪ್ರದೇಶದಿಂದ ಇನ್ನೊಂದು ಪ್ರದೇಶದಲ್ಲಿ ಪ್ರಭಾವಯುತವಾಗಿ ಬೆಳೆಯಿತು. ಇಂಥಹದರಲ್ಲಿ ಗದಗ ಪರಿಸರದಲ್ಲಿ ಬೆಳೆದು ಬಂದ ಜೈನ ಧರ್ಮವು ಸಾಂಸ್ಕೃತಿಕ

---

೪. ಜೈನ ಶಾಸ್ತ್ರದ ೧೨ ಅಂಗಗಳು : ೧) ಆಚಾರಾಂಗ, ೨) ಸೂತ್ರಕೃತಾಂಗ ೩) ಸ್ಥಾನಾಂಗ ೪) ಸಮವಾಯಾಂಗ ೫) ವ್ಯಾಖ್ಯಾಪ್ರಜ್ಞಾಪ್ತ್ಯಂಗ ೬) ಜ್ಞಾತೃಕ ಧರ್ಮಕಥಾಂಗ್ ೭) ಉಪಸಕಾಧ್ಯಯನಾಂಗ ೮) ಅಂತಕೃದ್ದಶಾಂಗ ೯) ಅನುತ್ತರೂಪಪಾತಿಕ ದಶಾಂಗ ೧೦) ಪ್ರಶ್ನೋವ್ಯಾಕರಣಾಂಗ ೧೧) ವಿವಾಕಸೂತ್ರಾಂಗ ೧೨) ದೃಷ್ಟಿವಾದಾಂಗ.

೫. ಜೈನಶಾಸ್ತ್ರದ ೧೪ ಪೂರ್ವಾಂಗಗಳು : ೧) ಸಾಮಾಯಿಕ ೨) ಚತುರ್ವಿಂಶತಿಸ್ತವ ೩) ವಂದನಾ ೪) ಪ್ರತಿಕ್ರಮಣ ೫) ವೈನಯಿಕ ೬) ಕೃತಿಕರ್ಮ ೭) ದಶವೈಕಾಲಿಕ ೮) ಉತ್ತರಾಧ್ಯಯನ ೯) ಕಲ್ಪವ್ಯವಹಾರ ೧೦) ಕಲ್ಪಾಕಲ್ಪ ೧೧) ಮಹಾಕಲ್ಪ ೧೨) ಪುಂಡರೀಕ ೧೩) ಮಹಾಪುಂಡರೀಕ ೧೪) ನಿಷದ್ದಿಕಾ (ಅಶೀತಿಕ).

ಪರಿಸರದಲ್ಲಿ ವಿವಿಧ ನೆಲೆಗಳಲ್ಲಿ ಜೈನ ಧರ್ಮದ ಪ್ರಾಮುಖ್ಯತೆಯು ಪ್ರಾಚೀನ ಮಧ್ಯ ಹಾಗೂ ಆಧುನಿಕ ಕಾಲ ಘಟ್ಟಗಳಲ್ಲಿ ಬೆಳೆದು ಬಂದ ಸ್ಥಿತ್ಯಂತರಗಳನ್ನು ಗ್ರಹಿಸಿದಾಗ ಗದಗ ಪರಿಸರವು ಜೈನ ಪರಂಪರೆಗೆ ನೀಡಿದ ಮಹತ್ವ ಅರಿವು ಆಗುತ್ತದೆ.

ಪ್ರಸ್ತುತ ಗದಗ ಪರಿಸರಕ್ಕೆ ಸಂಬಂಧಿಸಿದಂತೆ ಗದಗ ಜಿಲ್ಲೆಯು ಭೌಗೋಳಿಕ, ಐತಿಹಾಸಿಕ, ಸಾಮಾಜಿಕ, ಆರ್ಥಿಕ, ರಾಜಕೀಯ, ಶೈಕ್ಷಣಿಕ ಹಾಗೂ ಸಾಂಸ್ಕೃತಿಕ ಹಿನ್ನೆಲೆಯನ್ನು ಅಧ್ಯಯನಕ್ಕೆ ಒಳಪಡಿಸಿ ಸದ್ಯ ಗದಗ ಪರಿಸರದಲ್ಲಿ ಜೈನ ಧರ್ಮದ ಬೆಳವಣಿಗೆಯನ್ನು ಶೋಧನೆಗೆ ಒಳಪಡಿಸುವುದು, ಈ ಪರಿಸರದಲ್ಲಿ ಆಳ್ವಿಕೆ ನಡೆಸಿದ ರಾಜಪ್ರಭುತ್ವಗಳು ಹಾಗೂ ರಾಜರು, ಸಾಮಂತ ಅರಸರು, ಮಾಂಡಲಿಕರು ಜೈನ ಧರ್ಮಕ್ಕೆ ನೀಡಿದ ಕೊಡುಗೆಗಳನ್ನು, ಕಲೆ, ವಾಸ್ತುಶಿಲ್ಪ ಬಸದಿಗಳ ಕೇಂದ್ರಗಳನ್ನು ಜೈನರ ಪ್ರಮುಖ ನೆಲೆಗಳನ್ನು, ಈ ಪರಿಸರದ ಜೈನ ಧರ್ಮದ ಬೆಳವಣಿಗಾಗಿ ತಪಸ್ಸನ್ನಾಚರಿಸಿದ ಮುನಿಗಳು, ಜೈನ ಕವಿಗಳು, ರಚಿಸಿದ ಕೃತಿಗಳು ಹಾಗೂ ಕವಿಗಳಿಗೆ ಆಶ್ರಯ ನೀಡಿದ ಮಹಾನ್ ವ್ಯಕ್ತಿಗಳ ಕುರಿತು ಸದ್ಯ ಜೈನ ಧರ್ಮವು ಗದಗ ಪರಿಸರದಲ್ಲಿ ಯಾವ ರೀತಿ ಬೆಳವಣಿಗೆ ಹೊಂದುತ್ತಿದೆ ಎಂಬುದನ್ನು ಶೋಧನೆ ಮಾಡಿ ಅಧ್ಯಯನಕ್ಕೆ ಒಳಪಡಿಸುವುದು ಈ ಮಹಾಪ್ರಬಂಧದ ಪ್ರಮುಖ ಆಶಯವಾಗಿದೆ.

ಗದಗ ನೂತನ ಜಿಲ್ಲೆಯಾಗಿ ೨೪-೦೮-೧೯೯೭ರಂದು ಉದಯಿಸಿತು. ಪ್ರಾಚೀನ ಕಾಲದಿಂದಲೂ ಕಲೆ, ಸಾಹಿತ್ಯ, ಸಂಸ್ಕೃತಿ, ಆಧ್ಯಾತ್ಮ ಹಾಗೂ ಔದ್ಯೋಗಿಕ ಕ್ಷೇತ್ರಗಳಲ್ಲಿ ತನ್ನದೆಯಾದ ವಿಶಿಷ್ಠ ಸ್ಥಾನ ಪಡೆದ ಈ ಪ್ರದೇಶ ನಿಸರ್ಗ ಸೌಂದರ್ಯದ ಬೀಡಾಗಿದ್ದು ಮನಮೋಹಕ ಶಿಲ್ಪ ಕಲೆಯನ್ನೊಳಗೊಂಡ ದೇವಾಲಯಗಳು, ಬಸದಿಗಳು, ಪ್ರಾಚೀನ ಸ್ಮಾರಕಗಳು ಅಂತರಾಷ್ಟ್ರೀಯ ಖ್ಯಾತಿಯ ಚಿತ್ರಕಲಾವಿದರು ಸಂಗೀತ ವಿದೂಷಕರು ಶ್ರೇಷ್ಠ ಸಾಹಿತಿಗಳು, ನಟ-ನಿರ್ದೇಶಕರು ಆಧ್ಯಾತ್ಮ ಜಿಜ್ಞಾಸೆಗಳು ಹಾಗೂ ಸಮಾಜ ಸುಧಾರಕರು ಜನರನ್ನು ಸನ್ಮಾರ್ಗದಲ್ಲಿ ನಡೆಸುವ ಧರ್ಮಾಧಿಕಾರಿಗಳಿಂದ ಈ ಜಿಲ್ಲೆಯ ಆಂತರಿಕ ಸಂಪತ್ತು ಅದ್ವಿತೀಯವೆನಿಸಿದೆ.

ಯಾವುದೇ ಧರ್ಮದ ಉಗಮಕಾಲ ಸಾಮಾನ್ಯವಾಗಿ ನದಿ ಉಗಮದಂತೆ ಅಸ್ಪಷ್ಟವಾಗಿರುತ್ತದೆ. ಆದಿ ಜಿನನಿಂದ ತನ್ನ ಉಗಮವನ್ನು ಹೇಳಿಕೊಳ್ಳುವ ಜೈನಧರ್ಮದ ಅಸ್ಪಷ್ಟ ಕುರುಹುಗಳು ಪಾರ್ಶ್ವ ಜಿನನ ಕಾಲಕ್ಕೆ ಕಂಡು ಬಂದರೂ ವರ್ಧಮಾನ ಜಿನನ ಸಂದರ್ಭದಲ್ಲಿ ಮಾತ್ರ ಅದರ ಸ್ಪಷ್ಟ ರೂಪ ಗೋಚರಿಸುತ್ತದೆ. ಪ್ರದೇಶದ ವಿಶಾಲತೆಯಿಂದ ಚರಿತ್ರೆಯ ದೀರ್ಘತೆಯ ದೃಷ್ಟಿಯಿಂದಲೂ ಜೈನ ಧರ್ಮ ಮಿಗಿಲೆಂಬುದು ಸ್ವಯಂ ವ್ಯಕ್ತವಾಗುತ್ತದೆ. ಹೀಗಾಗಿ ಜೈನ ಧರ್ಮವು ರಾಜ್ಯವ್ಯಾಪ್ತಿ, ರಾಷ್ಟ್ರವ್ಯಾಪ್ತಿ ಜಾಗತಿಕ ವ್ಯಾಪ್ತಿ ಧರ್ಮವೆನಿಸುತ್ತದೆ.

ಹೀಗೆ ಜಾಗತಿಕ ವ್ಯಾಪ್ತಿ ಪಡೆದ ಜೈನ ಧರ್ಮವು ಗದಗ ಪರಿಸರದಲ್ಲಿ ಕಾಲದಿಂದ ಕಾಲಕ್ಕೆ ಬೆಳೆದು ಬಂದ ಬಗೆ ಅದು ಅನುಭವಿಸಿದ ಏರಿಳಿತಗಳನ್ನು ಶೋಧಿಸಿ ಇಂದಿಗೂ ಜೈನ ಪರಂಪರೆಯು ಗದಗ ಪರಿಸರದಲ್ಲಿ ಹೊಂದಿರುವ ಪ್ರಾಮುಖ್ಯತೆಯನ್ನು ಈ ಮಹಾಪ್ರಬಂಧದ ಅಧ್ಯಯನಕ್ಕೆ ಒಳಪಡಿಸಲಾಗಿದೆ.

ಗದಗ ಜಿಲ್ಲೆ ಉತ್ತರ ಕರ್ನಾಟಕದ ಸಮೃದ್ಧ ಜಿಲ್ಲೆಗಳಲ್ಲಿ ಒಂದು. ಇದು ಒಳ್ಳೆಯ ಪ್ರಾಕೃತಿಕ, ರಾಜಕೀಯ,

ಸಾಹಿತ್ಯಿಕ, ಸಾಂಸ್ಕೃತಿಕ ಹಿನ್ನೆಲೆಯನ್ನೊಳಗೊಂಡ ಪ್ರದೇಶವಾಗಿದೆ. ಅಲ್ಲದೆ ಜೈನ, ಶೈವ ಮತ್ತು ವೈಷ್ಣವ ಧರ್ಮಗಳ ನೆಲೆವಿಡಾಗಿದೆ. ಈ ಪ್ರದೇಶದಲ್ಲಿ ಕ್ರಿಶ. ಆರಂಭದಿಂದ ೧೩ನೇ ಶತಮಾನದವರೆಗೆ ಶಾತವಾಹನರು, ಕದಂಬರು, ಗಂಗರು, ರಾಷ್ಟ್ರಕೂಟರು, ಬದಾಮಿ ಚಾಲುಕ್ಯರು, ಕಲ್ಯಾಣದ ಚಾಲುಕ್ಯರು, ಕಲಚೂರರು, ಹೊಯ್ಸಳರರು, ವಿಜಯನಗರದ ಅರಸರು, ಸವದತ್ತಿ ರಟ್ಟರು ಸವಣೂರು ನವಾಬರು, ಸೇಂದ್ರಕ ವಂಶದವರು ಆಳಿ ಹೋಗಿದ್ದಾರೆ. ಇವರೆಲ್ಲ ಜೈನ ಧರ್ಮಕ್ಕೆ ಅಪಾರವಾದ ಕೊಡುಗೆಗಳನ್ನು ಕೊಟ್ಟಿದ್ದಾರೆ. ಅಲ್ಲದೆ ಅನೇಕ ಬಸದಿಗಳನ್ನು ಕಟ್ಟಿಸಿ ಅವುಗಳಿಗೆ ದಾನದತ್ತಿಗಳನ್ನಿತ್ತು ಪ್ರೋತ್ಸಾಹಿಸಿದ್ದಾರೆ. ಅನೇಕ ಜೈನ, ಜೈನೇತರ ಕವಿಗಳಿಗೂ ಮುನಿಗಳಿಗೂ ಆಶ್ರಯ ಹಾಗೂ ಪ್ರೋತ್ಸಾಹವನ್ನು ಕೊಟ್ಟಿದ್ದಾರೆ. ಇದರಿಂದಾಗಿ ಈ ಪ್ರದೇಶ ಜೈನ ಧರ್ಮದ ಪ್ರಮುಖ ಕೇಂದ್ರ ಸ್ಥಳವಾಗಿತ್ತೆಂದು ಸ್ಪಷ್ಟವಾಗುತ್ತದೆ.

ಕರ್ನಾಟಕದಲ್ಲಿ ಜೈನ ಧರ್ಮವನ್ನು ಕುರಿತು ನಾಡಿನ ಪ್ರಸಿದ್ಧ ಸಂಶೋಧಕರಿಂದ ಸಂಶೋಧನಾ ಕೃತಿಗಳು ಹೊರಹೊಮ್ಮಿವೆ. ಆರ್. ಶರಣಮ್ಮರ "ಪುಲಿಗೇರಿ ಐತಿಹಾಸಿಕ, ಸಾಹಿತ್ಯಿಕ ಮತ್ತು ಸಾಂಸ್ಕೃತಿಕ ಮಹತ್ವ" (೧೯೭೪), ಡಾ. ಬಿ. ವಿ. ಮಲ್ಲಾಪುರರ "ನಯಸೇನ ಮತ್ತು ಅವನ ಕೃತಿಗಳು" (೧೯೭೫), ಡಾ. ರಾಮಕೃಷ್ಣ ಎಂ.ರ "ರನ್ನ ಮತ್ತು ಅವನ ಕೃತಿಗಳು" (೧೯೮೦), ಡಾ. ಪದ್ಮಪ್ರಸಾದ ಎಸ್. ರ "ಜೈನ ಜಾನಪದ ಸಾಹಿತ್ಯ" (೧೯೮೦), ಡಾ. ಚನ್ನಕ್ಕ ಎಲಿಗಾರರ "ಶಾಸನಗಳಲ್ಲಿ ಕರ್ನಾಟಕದ ಸ್ತ್ರೀ ಸಮಾಜ" (೧೯೮೧), ಡಾ. ಎಸ್. ಬಿ. ಪಾಟೀಲರ "ರಟ್ಟರ ಕಾಲದ ಸಾಂಸ್ಕೃತಿಕ ಅಧ್ಯಯನ" (೧೯೮೬), ಡಾ. ಎಸ್. ಡಿ. ಶೆಟ್ಟರ "ತುಳುನಾಡಿನ ಜೈನ ಧರ್ಮ" (೧೯೯೮), ಡಾ. ಜಯಚಂದ್ರ ಎಂ. ಎ.ರ "ಕನ್ನಡ ಜೈನ ಕಾವ್ಯಗಳಲ್ಲಿ ಜಾನಪದ ಕಥೆಗಳು" (೧೯೮೭), ಡಾ. ಎಸ್. ಕೆ. ಕೊಪ್ಪ ರ "ತರ್ದವಾಡಿ ನಾಡು – ಒಂದು ಅಧ್ಯಯನ" (೧೯೮೮), ಡಾ. ರಮಾನಂದರ "ವಿಜಯನಗರ ಕಾಲದ ಶಾಸನಗಳ ಸಾಂಸ್ಕೃತಿಕ ಅಧ್ಯಯನ" (೧೯೮೯), ಡಾ. ಮಂಜುನಾಥ ಸಿ. ವಿ. ರ "ಕರ್ನಾಟಕದ ಶಾಸನಗಳು ಮತ್ತು ಸಂಸ್ಕೃತಿ" (೧೯೮೧), ಡಾ. ಗೋಪಾಲರಾವ ಎಚ್. ಎಸ್. ರ "ಶಾಸನಗಳ ಹಿನ್ನೆಲೆಯಲ್ಲಿ ಕರ್ನಾಟಕ ಚಾಲುಕ್ಯರ ದೇವಾಲಯಗಳು : ಒಂದು ಸಾಂಸ್ಕೃತಿಕ ಅಧ್ಯಯನ" (೧೯೯೧), ಡಾ. ದೇವರ ಕೊಂಡಾರಡ್ಡಿ "ಗಂಗರ ಕಾಲದ ದೇವಾಲಯಗಳು" (೧೯೯೧), ಡಾ. ಭೋಜರಾಜ ಪಾಟೀಲರ "ನಾಗರಖಂಡ–೭೦ : ಒಂದು ಅಧ್ಯಯನ" (೧೯೯೨) ಡಾ. ಸರಸ್ವತಿ ವಿಜಯಕುಮಾರರ "ಕನ್ನಡ ಆದಿ ತೀರ್ಥಂಕರ ಚರಿತ್ರೆಗಳು" (೧೯೯೩), ಡಾ. ಕಾಳೇಗೌಡರ "ಧರ್ಮಾಮೃತ : ಒಂದು ಭಾಷಾ ಶಾಸ್ತ್ರೀಯ ಅಧ್ಯಯನ" (೧೯೯೩), ಡಾ. ಭಾರತಿ ಸವದತ್ತಿಯವರ "ಕನ್ನಡ ಸಾಹಿತ್ಯದಲ್ಲಿ ಬಾಹುಬಲಿ"(೧೯೯೭) ಡಾ. ಸಿ. ಎಸ್. ರೊಟ್ಟಿಗವಾಡರ "ಹೊಂಬುಜ ಕ್ಷೇತ್ರ ಒಂದು ಅಧ್ಯಯನ" (೨೦೦೦), ಡಾ. ಎಸ್. ಆರ್. ಶಿರಹಟ್ಟಿಯವರ "ಶಿರಹಟ್ಟಿ ಫಕೀರೇಶ್ವರ ಸಂಸ್ಥಾನಮಠ : ಒಂದು ಅಧ್ಯಯನ"(೨೦೦೦), ಡಾ. ಸುರೇಶ ಅಂಗಡಿಯವರ "ರಂಗಭೂಮಿಗೆ ಗದುಗಿನ ಕೊಡುಗೆ" (೨೦೦೦), ಡಾ. ಬಾಹುಬಲಿ ಹಂದೂರರ "ಜೈನ ಪರಂಪರೆಗೆ ಬೆಳಗಾವಿ ಪ್ರಾದೇಶಿಕ ಕೊಡುಗೆ" (೨೦೦೧), ಡಾ. ಚಂದ್ರಮೋಹನ ಎಸ್. ರ "ಕನ್ನಡ ಜೈನ ಪುರಾಣಗಳು ಮತ್ತು

ಪ್ರಾಕೃತ ಒಂದು ಸಾಂಸ್ಕೃತಿಕ ಅಧ್ಯಯನ" (೨೦೦೨), ಡಾ. ಅಶ್ವಥ ಡಿ.ಎಸ್.ರ "ಕೊಪ್ಪಳ ಒಂದು ಸಾಂಸ್ಕೃತಿಕ ಅಧ್ಯಯನ" (೨೦೦೨), ಡಾ. ಲಕ್ಷ್ಮೀಪತಿ ಸಿ. ಜಿ.ರ "ಕರ್ನಾಟಕ ಸಾಮಾಜಿಕ ಬದಲಾವಣೆ ಸಮಾಜಶಾಸ್ತ್ರ ಹಾಗೂ ಸಾಹಿತ್ಯ ನೋಡಿರುವ ಬಗೆ" ಒಂದು ಅಂತರ್ ಶಾಸ್ತ್ರೀಯ ಅಧ್ಯಯನ) (೨೦೦೨), ಡಾ. ಎಚ್. ಶಿವಾನಂದರ "ಕನ್ನಡ ಜೈನ ಪರಂಪರೆಗಳು ಸಮಗ್ರ ಅಧ್ಯಯನ" (೨೦೦೩) ಡಾ. ಪಿ. ಯು. ಪೂಜಾರರ "ದಾನ ಚಿಂತಾಮಣಿ ಅತ್ತಿಮಬ್ಬೆ" (೨೦೦೪), ಡಾ. ಬಾಳಾಸಾಹೇಬ ಲೋಕಾಪೂರರ "ಆಧುನಿಕ ಕನ್ನಡ ಕಥನ ಸಾಹಿತ್ಯದಲ್ಲಿ ಜೈನ ಸಂವೇದನೆ" (೨೦೦೪), ಡಾ. ಶ್ರೀನಿವಾಸ ರಿತ್ತಿ "ಮುಳಗುಂದ ನಾಡು" (೧೯೭೬), ಡಾ. ಆರ್. ಜಿ. ತುರಡಗಿ "ಮುಳಗುಂದ – ಒಂದು ಸಾಂಸ್ಕೃತಿಕ ಅಧ್ಯಯನ" (ಎಂ.ಫಿಲ್. ಸ್ವ ಪ್ರಬಂಧ ೧೯೯೬), "ಶ್ರವಣಬೆಳ್ಗೊಳ – ರಾಜಕೀಯ, ಸಾಹಿತ್ಯಿಕ, ಸಾಂಸ್ಕೃತಿಕ ಮಹತ್ವ" ಡಾ. ಬಿ. ವ್ಹಿ. ಶಿರೂರು (೧೯೭೬), ಡಾ. ಧನವಂತ ಹಾಜೀವಗೋಳರ "ಮುಳಗುಂದ ನಾಡು ಒಂದು ಸಾಂಸ್ಕೃತಿಕ ಅಧ್ಯಯನ" (೨೦೦೪), ಡಾ. ಅಪ್ಪಣ್ಣ ಹಂಜೆರ "ಧಾರವಾಡದ ಪರಿಸರದಲ್ಲಿ ಜೈನಧರ್ಮ" (೨೦೦೮) ಡಾ. ಹಂಪನಾರ "ದಾನ ಚಿಂತಾಮಣಿ ಅತ್ತಿಮಬ್ಬೆ" (೧೯೯೬), ಡಾ. ಸೂರ್ಯನಾಥ ಕಾಮತರ "ಧಾರವಾಡ ಜಿಲ್ಲೆಯ ಗೆಜಿಟಿಯರ್" (೧೯೯೫), ಪ್ರೊ. ಸಿ. ವಿ. ಕೆರೆಮನಿ ಮತ್ತು ಡಿ. ವ್ಹಿ. ಬಡಿಗೇರರ "ಗದಗ ಜಿಲ್ಲೆಯ ಬರಹಗಾರರು" (೨೦೦೧) ಮುಂತಾದ ಕೃತಿಗಳ ಮೂಲಕ ಜೈನ ಧರ್ಮದ ಪರಂಪರೆ ಹಾಗೂ ಗದಗ ಪರಿಸರದ ಕೆಲವು ಪ್ರದೇಶಗಳ ವಿವರಣೆಯನ್ನು ಮಾಡಲಾಗಿದೆ. ಆದರೆ ಇವುಗಳಲ್ಲಿ ಜೈನ ಪರಂಪರೆಯು ಗದಗ ಪರಿಸರದಲ್ಲಿ ಬೆಳೆದು ಬಂದ ತಲಸ್ಪರ್ಶಿಯಾದ ಅಧ್ಯಯನದ ಕೊರತೆ ಎದ್ದು ಕಾಣುತ್ತಿವೆ. ಆದ್ದರಿಂದ ಈ ಕೊರತೆಯನ್ನು ಪೂರೈಸಲು ಈ ಪ್ರದೇಶದ ಜೈನ ಪರಂಪರೆಯ ಸಮಗ್ರ ಅಧ್ಯಯನ ಮಾಡುವುದು ಈ ಪ್ರಬಂಧದ ಮೂಲ ಉದ್ದೇಶವಾಗಿದೆ.

## ೨. ಅಧ್ಯಯನದ ಉದ್ದೇಶಗಳು :

ಗ್ರಾಮೀಣ ಸಂಸ್ಕೃತಿ ಆಧುನಿಕತೆಯ ಪ್ರಭಾವದಿಂದ ನಶಿಸುತ್ತಿರುವ ಇಂದಿನ ದಿನಗಳಲ್ಲಿ ಯಾವುದೇ ಕಾಲ ಘಟ್ಟದ ಸಂಗತಿಗಳನ್ನು ಆಧುನಿಕಗೊಳಿಸುವಾಗ ಶ್ರಮ ಸಂಸ್ಕೃತಿಯ ಶೋಧನೆಯೇ ಅಧ್ಯಯನದ ಮೂಲ ಉದ್ದೇಶವಾಗಿದೆ. ಗದಗ ನೂತನ ಜಿಲ್ಲೆಯಾಗಿ ೧೯೯೭ರಲ್ಲಿ ಉದಯಿಸಿತು. ಪ್ರಸ್ತುತ ಗದಗ ಜಿಲ್ಲೆ ಐದು ತಾಲ್ಲೂಕುಗಳನ್ನು ಒಳಗೊಂಡಿದ್ದು ಪ್ರಾಚೀನ ಕಾಲದಿಂದ ಇಲ್ಲಿಯವರೆಗೆ ಈ ಪರಿಸರವು ಜೈನ ಪರಂಪರೆಗೆ ಗಮನಾರ್ಹವಾದ ಕೊಡುಗೆಯನ್ನು ನೀಡುತ್ತಾ ಬಂದಿದೆ. ಇಲ್ಲಿಯವರೆಗೆ ಈ ಕೊಡುಗೆಗಳನ್ನು ಕುರಿತು ಸಂಶೋಧನೆಗಳು, ಅಧ್ಯಯನಗಳು ನಡೆದಿವೆ ಆದರೆ ಒಂದೆಡೆ ಸಮಗ್ರವಾದ ಅಧ್ಯಯನವು ನಡೆದಿಲ್ಲವೆಂದೇ ಹೇಳಬೇಕು. ಆದ್ದರಿಂದ ಪ್ರಸ್ತುತ ಈ ಮಹಾಪ್ರಬಂಧವು ಗದಗ ಪರಿಸರವು ಜೈನ ಪರಂಪರೆಗೆ ನೀಡಿದ ಸಮಗ್ರ ಕೊಡುಗೆಗಳನ್ನು ಕುರಿತು ಶೋಧನೆಗೆ ಒಳಪಡಿಸಿ ವಿಶ್ಲೇಷಣೆ ಮಾಡುವುದು ಈ ಮಹಾಪ್ರಬಂಧದ ಮೂಲ ಉದ್ದೇಶವಾಗಿದೆ.

೨.೧. ಗದಗ ಪರಿಸರದ ಭೌಗೋಳಿಕ, ಚಾರಿತ್ರಿಕ, ಸಾಮಾಜಿಕ, ಧಾರ್ಮಿಕ, ಆರ್ಥಿಕ, ರಾಜಕೀಯ ಹಾಗೂ ಶೈಕ್ಷಣಿಕ ಮತ್ತು ಸಾಂಸ್ಕೃತಿಕ ಮಹತ್ವವನ್ನು ಕುರಿತು ಶೋಧಿಸಿ ವಿಶ್ಲೇಷಿಸುವುದು.

೨.೨. ಜೈನ ಪರಂಪರೆಯು ಗದಗ ಪರಿಸರದಲ್ಲಿ ಬೆಳೆದು ಬಂದ ಬಗೆ ಹಾಗೂ ಅದರಿಂದ ಉಂಟಾದ ಪರಿಣಾಮಗಳನ್ನು ಕುರಿತು ಶೋಧನೆಗೆ ಒಳಪಡಿಸಿ ವಿವರಿಸುವುದು.

೨.೩. ಗದಗ ಪರಿಸರದಲ್ಲಿ ಆಳ್ವಿಕೆ ನಡೆಸಿದ ಜೈನ-ಜೈನೇತರ ರಾಜಮನೆತನಗಳು ಹಾಗೂ ರಾಜರು ಜೈನ ಪರಂಪರೆಗೆ ಸಲ್ಲಿಸಿದ ಕೊಡುಗೆಗಳನ್ನು ಅಧ್ಯಯನಕ್ಕೊಳಪಡಿಸಿ ಅವುಗಳ ಪ್ರಾಮುಖ್ಯತೆಯನ್ನು ಇಂದಿನ ಸಮಾಜಕ್ಕೆ ಅರಿವು ಮೂಡಿಸುವುದು.

೨.೪. ಜೈನ ಧರ್ಮದ ನೆಲೆಗಳಾದ್ದ ಗದಗ ಪರಿಸರದ ಪ್ರಮುಖ ಸ್ಥಳಗಳ ಕ್ಷೇತ್ರ ಅಧ್ಯಯನದ ಮೂಲಕ ಶೋಧಿಸಿ ಅವುಗಳ ಪ್ರಾಮುಖ್ಯತೆ ಮತ್ತು ಮಹತ್ವವನ್ನು ಕುರಿತು ಮನದಟ್ಟು ಮಾಡುವುದು ಮತ್ತು ಜೈನ ಬಸದಿಗಳ ಸಂರಕ್ಷಣೆ ಜೀರ್ಣೋದ್ಧಾರ ಕೈಗೊಳ್ಳುವಲ್ಲಿ ಇಂದಿನ ಸರ್ಕಾರ ಹಾಗೂ ಸಮಾಜದ ಪಾತ್ರವನ್ನು ಕುರಿತು ಅರಿವು ಮೂಡಿಸುವುದು ಮತ್ತು ವಿಶ್ಲೇಷಣೆಗೆ ಒಳಪಡಿಸುವುದು.

೨.೫. ಗದಗ ಪರಿಸರದಲ್ಲಿ ಜೈನ ಪರಂಪರೆಯನ್ನು ಬೆಳೆಸಿಕೊಂಡು ಬಂದ ಮುನಿ ಪರಂಪರೆ ಹಾಗೂ ಅವರ ತತ್ವಗಳ ಸಂವೇದನೆಗಳು ಹಾಗೂ ಜೈನ ಜೈನೇತರರ ಧೋರಣೆಗಳನ್ನು ಇಂದಿನ ಸಮಾಜಕ್ಕೆ ಸಹಕಾರಿಯಾಗುವ ನಿಟ್ಟಿನಲ್ಲಿ ಮುನಿಗಳು ಹಾಗೂ ಅವರ ತತ್ವಗಳನ್ನು ಸಾರುವುದು ಅದರ ಪ್ರಾಮುಖ್ಯತೆಯನ್ನು ಶೋಧಿಸಿ ವಿವರಣೆಗೆ ಒಳಪಡಿಸುವುದು. ಜೈನ ಪರಂಪರೆಗೆ ಗದಗ ಪರಿಸರದಲ್ಲಿ ಕವಿಗಳು ರಚಿಸಿದ ಸಾಹಿತ್ಯಿಕ ಕೃತಿಗಳು ಮತ್ತು ಅವುಗಳ ಮಹತ್ವವನ್ನು ಕುರಿತು ತಿಳಿಯಪಡಿಸುವುದು.

೨.೬. ಗದಗ ಪರಿಸರದಲ್ಲಿ ಪ್ರಾಚೀನ ಕಾಲದಿಂದ ಇಂದಿನವರೆಗೆ ಜೈನ ಪರಂಪರೆಯೂ ಸಮಾಜದ ಕೆಳ ಸಮುದಾಯದಲ್ಲಿ ಬೆಳೆದು ಬಂದ ಬಗೆ ಹಾಗೂ ಸದ್ಯ ಜೈನ ಸಮುದಾಯದಲ್ಲಿ ಬೆಳೆದು ಬಂದ ಬಗೆ ಹಾಗೂ ಜೈನ ಸಮುದಾಯದ ಸ್ಥಿತಿಗಳನ್ನು ಸುಧಾರಿಸುವಲ್ಲಿ ಸರಕಾರ ಕೈಗೊಳ್ಳಬೇಕಾದ ಕ್ರಮಗಳ ಕುರಿತು ವಿಶ್ಲೇಷಿಸುವುದು.

ಜೈನ ಪರಂಪರೆಯು ಗದಗ ಪರಿಸರದಲ್ಲಿ ಪ್ರಾಚೀನ ಕಾಲದಿಂದ ಇಂದಿನವರೆಗೆ ಕಂಡುಕೊಂಡಿರುವ ಏರಿಳಿತಗಳನ್ನು ಕುರಿತು ಸಮಗ್ರ ಅಧ್ಯಯನ ಕೈಗೊಂಡು ಈ ಪರಿಸರದಲ್ಲಿ ಬೆಳೆದು ಬಂದ ಜೈನ ಪರಂಪರೆಯಲ್ಲಿನ ತತ್ವಗಳು ಸತ್ವಯುತವಾದ ಮೌಲ್ಯಗಳು ಇಂದಿನ ಸಮಾಜಕ್ಕೆ ಪ್ರಸ್ತುತವೇ? ಎಂಬುವುದರ ಕುರಿತು ಶೋಧಿಸಿ ವಿವರಣೆಗೆ ಒಳಪಡಿಸುವುದು.

ಗದಗ ಪರಿಸರವು ಸಾಂಸ್ಕೃತಿಕ ಲೋಕಕ್ಕೆ ನೀಡಿದ ಮತ್ತು ನೀಡಬೇಕಾದ ಅಂಶಗಳನ್ನು ಗಮನಿಸಿ ಅನ್ವಯಿಸಿಕೊಳ್ಳುವಂತೆ ಮಾಡುವುದು. ಜಾಗತಿಕ ಮಟ್ಟದಲ್ಲಿ ಜೈನ ಪರಂಪರೆಯಲ್ಲಿನ ತತ್ವಗಳು ಹಾಗೂ ಮೌಲ್ಯಗಳ ಪ್ರಸ್ತುತತೆ ಮತ್ತು ಅಪ್ರಸ್ತುತತೆ ಕುರಿತು ವಿವೇಚಿಸಿ ಅವುಗಳ ಪ್ರಾಮುಖ್ಯತೆಯನ್ನು ಹೆಚ್ಚಿಸುವುದು. ವ್ಯಾಪಾರ

ವೃತ್ತಿಯನ್ನು ಮಾಡುತ್ತ ಉತ್ತರ ಭಾರತದಿಂದ ದಕ್ಷಿಣ ಭಾರತಕ್ಕೆ ವಲಸೆ ಬಂದು ಈ ಪಂಥದವರು ನಗರವಾಸಿಗಳೆಂದೇ ಹೆಸರು ಪಡೆದಿದ್ದಾರೆ. ಶ್ವೇತಾಂಬರರು ಸ್ವಾವಲಂಬನೆ, ನಿಷ್ಠೆ, ಸೇವಾ ಮನೋಭಾವದಿಂದ ಆರ್ಥಿಕವಾಗಿ ಪ್ರಬಲರಾಗಿ ಬೆಳೆದು ಗದಗ ಪರಿಸರದಲ್ಲಿ ನೆಲೆಯನ್ನು ಕಂಡುಕೊಂಡಿದ್ದಾರೆ. ಇಲ್ಲಿ ಧಾರ್ಮಿಕ ಕೇಂದ್ರಗಳನ್ನು, ಶಿಕ್ಷಣ ಸಂಸ್ಥೆಗಳನ್ನು, ಸಮಾಜ ಸೇವಾ ಕಾರ್ಯಗಳನ್ನು ಮಾಡಿಕೊಂಡು ತಮ್ಮ ಜೈನ ಪರಂಪರೆಯನ್ನು ಗದಗ ಪರಿಸರದಲ್ಲಿ ಉಳಿಸಿ ಬೆಳೆಸಿಕೊಂಡು ಬಂದ ಕುರಿತು ಅಧ್ಯಯನ ಕೈಗೊಳ್ಳಲಾಗಿದೆ.

೨.೭. ಗದಗ ಪರಿಸರದಲ್ಲಿನ ಜೈನ ಸಮುದಾಯದವರು ಸಾಂಸ್ಕೃತಿಕ ಕ್ಷೇತ್ರಕ್ಕೆ ಸಲ್ಲಿಸಿದ ಸೇವೆಗಳನ್ನು ಹಾಗೂ ಮಾಡಿದ ಸಾಧನೆಗಳನ್ನು ತಿಳಿದು ಅವರು ಜೈನ ಪರಂಪರೆಗೆ ನೀಡಿದ ಕೊಡುಗೆಗಳನ್ನು ವಿವರಿಸುವುದು.

ಹೀಗೆ ಒಂದು ಪ್ರದೇಶದಲ್ಲಿ ಬೆಳೆದು ಬಂದಿರುವ ಧಾರ್ಮಿಕ ಆಚರಣೆಗಳು, ಜನ ಸಾಮಾನ್ಯರ ಸ್ಥಿತಿಗತಿಗಳು ಅವರ ಸಾಂಸ್ಕೃತಿಕ ನಿಲುವುಗಳು ಕಾಲಾಂತರದಲ್ಲಿ ಅವುಗಳ ಪರಿವರ್ತನೆ ಇಂದಿನವರೆಗೂ ಜೈನ ಧರ್ಮದ ತ್ಯಾಗ ಮನೋಭಾವ, ನಿಷ್ಠೆ, ಅಹಿಂಸಾತ್ಮಕ ತತ್ವಗಳನ್ನು ಕುರಿತು ವಿಮರ್ಶೆಗೆ ಒಳಪಡಿಸಿ ವಿಶ್ಲೇಷಣೆ ಮಾಡುವುದು ಈ ಮಹಾಪ್ರಬಂಧದ ಮುಖ್ಯ ಉದ್ದೇಶವಾಗಿದೆ.

ವರ್ತಮಾನದ ಬದುಕಿನ ಎಳೆಗಳನ್ನು ಹಿಡಿದು ನೋಡಲು ಭೂತದ ಅನ್ವೇಷಣೆ ಮುಖ್ಯವಷ್ಟೇ, ಸಾಂಸ್ಕೃತಿಕ ಚರಿತ್ರೆಯನ್ನು ನಾವು ಗ್ರಹಿಸಿರುವ ಹಾಗೂ ಗ್ರಹಿಸುತ್ತಿರುವ ಬಗೆಗಳು ಸ್ಪಷ್ಟವಾಗುವುದು. ಇಲ್ಲಿಯೇ. ಪ್ರಸ್ತುತ ಮಹಾಪ್ರಬಂಧದಲ್ಲಿ ಅಧ್ಯಯನದ ದೃಷ್ಟಿಕೋನದಿಂದ ಎರಡು ಪ್ರಮುಖ ಪರಿಕಲ್ಪನೆಗಳನ್ನಿಟ್ಟುಕೊಂಡು ಅಧ್ಯಯನ ಕೈಗೊಳ್ಳಲಾಗಿದೆ.

ಪ್ರಸ್ತುತ ಮಹಾಪ್ರಬಂಧದಲ್ಲಿ ಮೊದಲಿಗೆ ವಿವೇಚಿಸಿದ ಪರಿಕಲ್ಪನೆ ಪರಿಸರ ಪ್ರದೇಶ. ಪ್ರಾಚೀನ ಕಾಲದಿಂದ ಇಂದಿನವರೆಗೆ ಗದಗ ಪರಿಸರವು ಬೆಳೆದು ಬಂದ ಬಗೆಯನ್ನು ಕಾಲ ಕಾಲಕ್ಕೆ ಆದ ಪರಿಣಾಮಗಳನ್ನು ಪ್ರಭಾವಗಳನ್ನು ಕುರಿತು ಅಧ್ಯಯನ ಕೈಗೊಂಡು ರಾಜ್ಯಕ್ಕೆ, ರಾಷ್ಟ್ರಕ್ಕೆ, ಜಾಗತಿಕ ಮಟ್ಟದಲ್ಲಿ ಈ ಪ್ರದೇಶವು ಸಲ್ಲಿಸಿದ ಕೊಡುಗೆಗಳನ್ನು ಕುರಿತು ಸಮಗ್ರವಾಗಿ ಶೋಧಿಸಿ ಒಂದು ಪರಿಸರವು ಅಲ್ಲಿನ ಪ್ರಮುಖ ಸ್ಥಳಗಳ ಶೋಧಿಸುವದು ಹಾಗೂ ಅಲ್ಲಿನ ಭೌಗೋಳಿಕ ವೈಶಿಷ್ಟ್ಯ, ಐತಿಹಾಸಿಕತೆ, ಧಾರ್ಮಿಕ ಮಹತ್ವ ಹಾಗೂ ಸಾಮಾಜಿಕ ಸ್ತರ ವಿನ್ಯಾಸಗಳನ್ನು ಕುರಿತು ವಿವೇಚಿಸುವುದು ಈ ಅಧ್ಯಯನದ ಮುಖ್ಯ ಅಂಶವಾಗಿದೆ.

ಪ್ರಸ್ತುತ ಮಹಾಪ್ರಬಂಧ ಎರಡನೆಯ ಪರಿಕಲ್ಪನೆ 'ಪರಂಪರೆ' – ಅದು ಜೈನ ಪರಂಪರೆ ಜಾಗತಿಕರಣ, ಖಾಸಗಿಕರಣ ಉದಾರೀಕರಣ ಸಂದರ್ಭದಲ್ಲಿ ಜೈನ ಪರಂಪರೆಯ ಪ್ರಸ್ತುತತೆಯನ್ನು ವಿವೇಚಿಸುವುದು. ಗದಗ ಪರಿಸರದಲ್ಲಿ ಜೈನ ಪರಂಪರೆಯು ಬೆಳೆದು ಬಂದ ಬಗೆ ಕಂಡು ಸತ್ಯಾಸತ್ಯತೆಯನ್ನು ಕುರಿತು ಶೋಧಿಸುವುದು. ಪ್ರಸ್ತುತ ಈ ಪರಿಸರದಲ್ಲಿ ಜೈನ ಪರಂಪರೆಯ ಬೆಳವಣಿಗೆ ಆಗಬೇಕಾದ ಸುಧಾರಣೆಗಳು ಹಾಗೂ ಸರ್ಕಾರದಿಂದ ಸಿಗಬಹುದಾದ ಸೌಲಭ್ಯಗಳ ಕುರಿತು ತಿಳಿಸುವುದು ಜೈನ ಪರಂಪರೆಯ ಮುನಿಗಳು, ತತ್ವಗಳು, ಸಂವೇದನೆಗಳು

ಹಾಗೂ ಜನ ಸಾಮಾನ್ಯರ ಧೋರಣೆಗಳನ್ನು ಶೋಧಿಸಿ ಸಂಶೋಧನೆ ಕೈಗೊಳ್ಳುವುದು. ಆಧುನಿಕ ಜೈನ ಸಮಾಜದ ಸಾಧನೆಗಳ ಕುರಿತು ಅಧ್ಯಯನ ಕೈಗೊಳ್ಳುವುದು.

ಹೀಗೆ ಗದಗ ಪರಿಸರದಲ್ಲಿ ಜೈನ ಪರಂಪರೆಯ ಪ್ರಾಮುಖ್ಯತೆಯನ್ನು ಅದರ ಮಹತ್ವವನ್ನು ವಿಶ್ಲೇಷಿಸುವುದು. ಪ್ರಸ್ತುತ ಮಹಾಪ್ರಬಂಧವು ಈ ಎರಡು ಪರಿಕಲ್ಪನೆಗಳಲ್ಲಿ ಹರಡಿರುವ ಮೌಲ್ಯಗಳನ್ನು ಅರಿತು ಅವುಗಳ ಪ್ರಾಮುಖ್ಯತೆಯನ್ನು ಶೋಧಿಸಿ ವಿಶ್ಲೇಷಿಸುವುದು ಪರಿಸರ ಹಾಗೂ ಪರಂಪರೆಯ ಕುರಿತು ಸಮಗ್ರವಾದ ಸಂಶೋಧನೆ ಕೈಗೊಂಡು ವಿಶ್ಲೇಷಿಸುವುದು ಮಹಾಪ್ರಬಂಧದ ಆಶಯ.

ಪ್ರಸ್ತುತ ಮಹಾಪ್ರಬಂಧದ ಅಧ್ಯಯನ ಕೈಗೊಂಡ ಸಂದರ್ಭದಲ್ಲಿ ಅಧ್ಯಯನದ ವಿಷಯಕ್ಕೆ ಅನುಸಾರವಾಗಿ ಆಕರ ಸಾಮಗ್ರಿಗಳ ಕ್ರೋಢೀಕರಣ ಕೈಗೊಳ್ಳುವುದು ಮೊದಲ ಹಂತ. ಅದರಿಂದ ಆಳ್ವಿಕೆ ನಡೆಸಿದ ಜೈನ-ಜೈನೇತರ ಅರಸು ಮನೆತನಗಳಾದ ಚಾಲುಕ್ಯರು, ರಾಷ್ಟ್ರಕೂಟರು, ಕಲ್ಯಾಣದ ಚಾಲುಕ್ಯರು, ಹೊಯ್ಸಳರು, ವಿಜಯನಗರದ ಅರಸರು, ಸವದತ್ತಿ ರಟ್ಟರು, ಜೈನ ಧರ್ಮಕ್ಕೆ ವಿಶಿಷ್ಟವಾದ ಕೊಡುಗೆಯನ್ನು ಕೊಟ್ಟಿದ್ದಾರೆ. ಇವರು ತೀರ್ಥಂಕರರ ಬಸದಿಗಳನ್ನು ಕಟ್ಟಿಸಿ, ಪೂಜಾ ವ್ಯವಸ್ಥೆಗಾಗಿ ಭೂಮಿಯನ್ನು ದಾನ ಮಾಡಿದ್ದಾರೆ. ಇವರು ಕೊಟ್ಟ ದಾನದತ್ತಿಗಳನ್ನು ಉಲ್ಲೇಖಿಸುವ ಶಾಸನ ಸಾಮಾಗ್ರಿ ಸಾಕಷ್ಟಿದೆ. ಈ ಶಾಸನಗಳಿಂದ ಜೈನ ಪರಂಪರೆ ಸಂಬಂಧಿಸಿದ ಸಾಮಗ್ರಿಯನ್ನು ಪಟ್ಟಿಕೆಗಳಲ್ಲಿ ಸಂಗ್ರಹಿಸಿ ಕಾಲಾನುಕ್ರಮದಲ್ಲಿ ಜೋಡಿಸಿ ವಿಶ್ಲೇಷಣೆಗೆ ಒಳಪಡಿಸಲಾಗಿದೆ.

ಪ್ರಾಚೀನ ಗದಗ ಪರಿಸರ ಹಾಗೂ ಪ್ರಸ್ತುತ ಗದಗ ಜಿಲ್ಲೆಗೆ ಸಂಬಂಧಿಸಿದ ಹಲವು ಕವಿಗಳು ಜೈನ ಪರಂಪರೆಯನ್ನು ಸಾದಾರಪಡಿಸಿದ್ದಾರೆ. ಅವರು ರಚಿಸಿದ ಸಾಹಿತ್ಯಿಕ ಕೃತಿಗಳಿಂದಲೂ ವಿಷಯ ಸಂಗ್ರಹಿಸಿ ಅಧ್ಯಯನಕ್ಕೆ ಬಳಸಿಕೊಳ್ಳಲಾಗಿದೆ. ಜೈನ ಧರ್ಮದ ವ್ಯಾಪಕ ನೆಲೆಯೆನಿಸಿದ ಇಲ್ಲಿಯ ಅನೇಕ ಜೈನ ಬಸದಿಗಳು ಈ ಪರಂಪರೆಯನ್ನು ಸಾರುವ ಸ್ಮಾರಕಗಳಾಗಿ ನಿಂತಿವೆ. ಇವುಗಳಲ್ಲಿ ಹಲವು ಪರಿವರ್ತನೆಯ ಸ್ಥಿತಿಯನ್ನು ಕಂಡಿದ್ದರೂ ಮೂಲತಃ ಜೈನ ಪರಂಪರೆಗೆ ಸೇರಿದವುಗಳಾಗಿ ಈ ಸ್ಮಾರಕಗಳಂತೂ ವಿಪುಲ ಸಾಮಗ್ರಿಯನ್ನು ಒದಗಿಸುತ್ತವೆ.

ಜೈನ ಪರಂಪರೆ ಹಾಗೂ ಗದಗ ಪರಿಸರಕ್ಕೆ ಸಂಬಂಧ ಪಟ್ಟಂತೆ ಸಂಶೋಧನಾ ಮಹಾಪ್ರಬಂಧಗಳು, ಸಂಶೋಧನಾ ಕೃತಿಗಳು, ಸಂಪಾದನಾ ಕೃತಿಗಳು ವಿದ್ವಾಂಸರ ಲೇಖನಗಳು ಸಂಶೋಧನಾ ಪತ್ರಿಕೆಗಳು, ವಿಶ್ವವಿದ್ಯಾಲಯಗಳ ಅಧೀನದಲ್ಲಿ ಸರಕಾರದ ಅಧೀನದಲ್ಲಿ ಅಭಿವೃದ್ಧಿ ಪಡಿಸಲಾದ ಅಧ್ಯಯನದ ವರದಿಗಳನ್ನು ಆಧಾರವಾಗಿಟ್ಟುಕೊಂಡು ವಿಷಯಕ್ಕೆ ಅನುಸಾರವಾಗಿ ಈ ಪರಿಸರಕ್ಕೆ, ಪರಂಪರೆಗೆ ಸಂಬಂಧಿಸಿದ ಅಂಶಗಳನ್ನು ಆಧಾರವಾಗಿಟ್ಟುಕೊಂಡು ಮಹಾಪ್ರಬಂಧವನ್ನು ರಚಿಸಲಾಗಿವೆ.

ಈ ಮೇಲೆ ವಿವರಿಸಿದ ಎಲ್ಲಾ ಮೂಲಗಳಿಂದ ಸಾಮಗ್ರಿಯನ್ನು ಕಲೆಹಾಕಿ ಕಾಲಾನುಕ್ರಮದಲ್ಲಿ ವರ್ಗೀಕರಿಸಿಕೊಂಡು ವಿಶ್ಲೇಷಣೆ ಮಾಡಲಾಗಿದೆ. ಮುನಿಗಳ, ವಿದ್ವಾಂಸರ, ಜೈನ-ಜೈನೇತರರ, ಮಾರ್ಗದರ್ಶಕರ ಸಲಹೆ ಸೂಚನೆಗಳನ್ನು ಜನ ಸಾಮಾನ್ಯರ ಹೇಳಿಕೆಗಳನ್ನು ಹಿರಿಯರ ಹಿತವಚನಗಳನ್ನು ಕೇಳಿ ಬಳಸಿಕೊಳ್ಳಲಾಗಿದೆ.

ಹೀಗೆ ಎಲ್ಲಾ ಮೂಲಗಳಿಂದ ಲಭ್ಯವಾಗುವ ವಿಷಯಕ್ಕೆ ಸಂಬಂಧಪಟ್ಟ ಅಂಶಗಳನ್ನು ಬಳಸಿಕೊಳ್ಳಲಾಗಿದೆ.

## ೩. ಅಧ್ಯಯನದ ವ್ಯಾಪ್ತಿ :

ಪ್ರಸ್ತುತ ಮಹಾಪ್ರಬಂಧದ ವ್ಯಾಪ್ತಿಯು ಕ್ರಿಪೂ. ಕಾಲದಿಂದ ಇಂದಿನವರೆಗೆ ಗದಗ ಪರಿಸರದ ಹಿನ್ನೆಲೆ ಜೈನ ಪರಂಪರೆಯು ಬೆಳೆದು ಬಂದ ಬಗೆಯನ್ನು ಕುರಿತು ಶೋಧಿಸಿ ಅವಲೋಕಿಸಲಾಗಿದೆ. ೮ನೇ ಶತಮಾನದಿಂದ ೧೩ನೆಯ ಶತಮಾನದವರೆಗಿನ ಕಾಲ ಈ ಭಾಗದ ಜೈನ ಧರ್ಮದ ಉಚ್ಛ್ರಾಯ ಕಾಲ. ಈ ಕಾಲದಲ್ಲಿ ಜೈನ ಧರ್ಮ ಬೆಳೆಯಲು ಕಾರಣರಾದ ಅರಸರು, ಕವಿಗಳು, ಮುನಿಗಳ ವೀರಯೋಧರ ದಾನದತ್ತಿಗಳನ್ನು ನೀಡಿದ ಸಾಮಂತ ಅರಸರ, ಮಾಂಡಳಿಕರ ಹಾಗೂ ಆಶ್ರಯದಾತರ ಚರಿತ್ರೆಯನ್ನು ಇಲ್ಲಿ ಅವಲೋಕಿಸಲಾಗಿದೆ. ಗದಗ ಪರಿಸರವು ಅಂದರೆ ಈಗೀನ ಗದಗ ಜಿಲ್ಲೆಯಲ್ಲಿನ ಜೈನ ಪರಂಪರೆಯಕ್ಕೆ ಸೀಮಿತವಾಗಿದ್ದರೂ ಪ್ರಾಚೀನ ಕಾಲದಿಂದ ಗದಗ ಪರಿಸರಕ್ಕೆ ಸಂಬಂದಪಟ್ಟ ಸುತ್ತಮುತ್ತಲಿನ ಕೆಲವು ಪ್ರದೇಶಗಳು ಈಗ ಗದಗ ಜಿಲ್ಲೆಯ ವ್ಯಾಪ್ತಿಗೆ ಒಳಪಡದಿದ್ದರೂ ಅವುಗಳ ಅಧ್ಯಯನವನ್ನು ಮಹಾಪ್ರಬಂಧದ ವ್ಯಾಪ್ತಿಗೆ ಒಳಪಡಿಸಲಾಗಿದೆ. ಜೈನ ಧರ್ಮದ ಚಟುವಟಿಕೆಗಳ ಕೇಂದ್ರಬಿಂದುವಾದ ಆ ಕಾಲದ ಜಿನಾಲಯಗಳ ಅಧ್ಯಯನ ಮಾಡಲಾಗಿದೆ. ಇದರ ಮುಂದಿನ ಕಾಲವೆಲ್ಲಾ ಇದರ ನೆರಳಾಗಿ ತೊರುತ್ತದೆ. ಈ ಹಿನ್ನೆಲೆಯಿಟ್ಟುಕೊಂಡು ಗದಗ ಜಿಲ್ಲೆಯ ಜೈನ ಪರಂಪರೆಯ ಅಧ್ಯಯನ ಮಾಡಲಾಗಿದೆ.

ಈ ಅಧ್ಯಯನದ ವ್ಯಾಪ್ತಿಯು ಜೈನ ಪರಂಪರೆಯು ಪ್ರಾಚೀನ ಗದಗ ಪರಿಸರ ಇಂದಿನ ಗದಗ ಜಿಲ್ಲೆಯ ಐದು ತಾಲ್ಲೂಕುಗಳಾದ ಗದಗ, ರೋಣ, ಶಿರಹಟ್ಟಿ, ಮುಂಡರಗಿ, ನರಗುಂದ ಪ್ರದೇಶಗಳನ್ನು ಆಧಾರವಾಗಿಟ್ಟುಕೊಂಡು ಹಾಗೂ ಸುತ್ತಮುತ್ತಲಿನ ಕೆಲವು ಜೈನ ಧರ್ಮದ ಪ್ರದೇಶಗಳನ್ನು ಆಧಾರವಾಗಿಟ್ಟುಕೊಂಡು ಅಧ್ಯಯನದ ವ್ಯಾಪ್ತಿಗೆ ಒಳಪಡಿಸಲಾಗಿದೆ. ಪ್ರಾಚೀನತೆಯಿಂದ ಆರ್ವಾಚೀನದವರೆಗೆ ಜೈನ ಧರ್ಮೀಯರ ಸ್ಥಿತಿಗತಿಗಳನ್ನು ಕುರಿತು ಈ ಪರಿಸರವು ಜೈನ ಪರಂಪರೆಗೆ ಯಾವ ರೀತಿಯಾಗಿ ಕೊಡುಗೆಗಳನ್ನು ನೀಡುತ್ತಾ ಬಂದಿದೆ. ಮತ್ತು ಸರಕಾರ ಜೈನ ಧರ್ಮೀಯರ ಅಭ್ಯುದಯಕ್ಕಾಗಿ ರೂಪಿಸಿರಿವಯೋಜನೆಗಳ ವಿವರ ಜೈನ ಧರ್ಮದ ನೆಲೆಗಳ ಸಂರಕ್ಷಣೆ ಅವುಗಳನ್ನು ಉಳಿಸಿ ಬೆಳೆಸಿಕೊಂಡು ಹೋಗುವುದರಲ್ಲಿ ಜನ ಸಾಮಾನ್ಯರ ನಿಲುವುಗಳನ್ನು ಹಾಗೂ ಗದಗ ಪರಿಸರವು ಜೈನ ಧರ್ಮಕ್ಕೆ ಸಾಮಾಜಿಕವಾಗಿ ಆರ್ಥಿಕವಾಗಿ, ಧಾರ್ಮಿಕವಾಗಿ, ರಾಜಕೀಯವಾಗಿ ಸಾಂಸ್ಕೃತಿಕವಾಗಿ ನೀಡಿರುವ ಕೊಡುಗೆಗಳನ್ನು ಅಧ್ಯಯನದ ವ್ಯಾಪ್ತಿಗೆ ಒಳಪಡಿಸಿ ವಿಶ್ಲೇಷಣೆ ಮಾಡಲಾಗಿದೆ.

## ೪. ಅಧ್ಯಯನ ಸ್ವರೂಪ :

ಪ್ರಸ್ತುತ ಮಹಾಪ್ರಬಂಧವು ಏಳು ಅಧ್ಯಾಯಗಳನ್ನು ಒಳಗೊಂಡಿದೆ. ಮೊದಲ ಅಧ್ಯಾಯವು "ಅಧ್ಯಯನದ ಉದ್ದೇಶ, ಆಕರ, ಸಾಮಾಗ್ರಿ, ಸ್ವರೂಪ, ವ್ಯಾಪ್ತಿ ಹಾಗೂ ಮಹತ್ವ ಮತ್ತು ವಿಧಾನಗಳು ಹಾಗೂ ಅಧ್ಯಾಯದ ಇತಿಮಿತಿಗಳನ್ನು ಒಳಗೊಂಡಿದೆ. ತಾತ್ವಿಕ ಒಲವುಗಳನ್ನು ಸರಳವಾಗಿ ವಿವರಿಸುತ್ತವೆ. ಅಧ್ಯಯನ ಕೈಗೊಳ್ಳಲು ಪ್ರಮುಖ ಕಾರಣಗಳನ್ನು ಅದರಿಂದ ಉಂಟಾಗುವ ಪರಿಣಾಮಗಳನ್ನು ಕುರಿತು ಇಲ್ಲಿ ಚರ್ಚಿಸಲಾಗಿದೆ. ಅಧ್ಯಯನ

ಕೈಗೊಳ್ಳುವುದರ ಮಹತ್ವ ಹಾಗೂ ಕೈಗೊಳ್ಳಬೇಕಾದ ವಿಧಾನಗಳ ಕುರಿತು ಚರ್ಚಿಸಲಾಗಿದೆ. ಒಟ್ಟು ಅಧ್ಯಯನದ ವ್ಯಾಪ್ತಿಗೆ ಅನುಗುಣವಾಗಿ ಅದರ ಇತಿಮಿತಿಗಳನ್ನು ಗಮನದಲ್ಲಿಟ್ಟುಕೊಂಡು ಫಲಿತಗಳನ್ನು ಕ್ರೋಢೀಕರಿಸಿ ನಿರೂಪಿಸಲಾಗಿದೆ.

ಎರಡನೆಯ ಅಧ್ಯಾಯದಲ್ಲಿ ಗದಗ ಪರಿಸರದ ಜೈನ ಪರಂಪರೆ; ನೆಲೆ-ಹಿನ್ನೆಲೆಯ ಅಧ್ಯಯನ ಕೈಗೊಳ್ಳಲಾಗಿದೆ. ಪ್ರಾಚೀನ ಕಾಲದಿಂದ ಇಂದಿನವರೆಗೆ ಗದಗ ಪರಿಸರವು ಬೆಳೆದು ಬಂದ ಬಗೆಯನ್ನು ವಿವರಿಸಲಾಗಿದೆ. ಈ ನೆಲದ ವಿಸ್ತೀರ್ಣ, ವಾತಾವರಣ, ಗುಣ ವೈಶಿಷ್ಟ್ಯಗಳನ್ನು ಕುರಿತು ವಿಶ್ಲೇಷಣೆ ಕೈಗೊಳ್ಳುವುದರ ಜೊತೆಗೆ ಇಲ್ಲಿ ಜೈನ ಪರಂಪರೆಯ ಬೆಳವಣಿಗೆಯ ಹಿನ್ನೆಲೆಯಲ್ಲಿ ಕುರಿತು ಕಾಲಾನುಕ್ರಮವಾಗಿ ಉಲ್ಲೇಖಿಸಲಾಗಿದೆ. ಈ ಪರಿಸರದ ಜೈನ ಪರಂಪರೆಯನ್ನು ಮೈಗೂಡಿಸಿಕೊಂಡು ಬಂದ ಪ್ರಮುಖ ಸ್ಥಳಗಳನ್ನು ಕುರಿತು ಸಂಶೋಧನೆಗೊಳಪಡಿಸಿ ಅಲ್ಲಿನ ಪ್ರಾಮುಖ್ಯತೆಗಳನ್ನು ಚರ್ಚಿಸಲಾಗಿದೆ. ಇಂದಿನ ಕಾಲ ಘಟ್ಟದಲ್ಲಿ ಅವುಗಳ ಮಹತ್ವವನ್ನು ವಿವರಿಸಲಾಗಿದೆ.

ಅಧ್ಯಾಯ ಮೂರರಲ್ಲಿ "ಗದಗ ಪರಿಸರದ ಜೈನ ಮುನಿಗಳು ಮತ್ತು ಪರಂಪರೆ" ಜೈನ ಧರ್ಮದ ಮುಖ್ಯ ತಿರುಳು ಇರುವುದು. ಜೈನ ಮುನಿಗಳ ಚರಿತ್ರೆಯಲ್ಲಿ ಜೈನ ಮುನಿಗಳು ಸನ್ಯಾಸ ಕೈಗೊಂಡು ತಪಗೈದ ನೆಲೆಗಳನ್ನು ಮೌಲ್ಯ ಸಂದೇಶಗಳನ್ನು ವಿವರಿಸುವುದು ಈ ಅಧ್ಯಾಯದ ಪ್ರಮುಖ ಅಂಶವಾಗಿದೆ. ಈ ಪ್ರದೇಶವಲ್ಲದೆ ದೊರೆತ ದಿಗಂಬರ, ಯಾಪನೀಯ, ಕೂರ್ಚಕ ಮತ್ತು ಶ್ವೇತಪಟ ಸಂಘದ ಮುನಿಗಳ ವಿವರಗಳನ್ನು ಶಾಸನಗಳಿಂದ ಹಾಗೂ ಈ ಪ್ರದೇಶದಲ್ಲಿ ಆಗಿಹೋದ ಕವಿಗಳ ಕೃತಿಗಳಿಂದ ಪಡೆದು ಕೊಳ್ಳಲಾಗಿದೆ. ಕ್ರಿ.ಶ. ೭-೮ನೆಯ ಶತಮಾನಕ್ಕಾಗಲೇ ಜೈನ ಧರ್ಮದಲ್ಲಿ ಯಾಪನೀಯ ಸಂಘದ ಅಸ್ತಿತ್ವವು ಈ ಪ್ರದೇಶದಲ್ಲಿತ್ತೆಂದು ಶಾಸನಗಳಾಧಾರದಿಂದ ಸ್ಪಷ್ಟವಾಗುತ್ತದೆ. ಇವುಗಳ ವಿಸ್ತೃತ ಅಧ್ಯಯನವೂ ಇಲ್ಲಿದೆ. ಗದಗ ಪರಿಸರದಲ್ಲಿ ಕಂಡು ಬರುವ ಜೈನ ಮುನಿಗಳಾದ ಕನಕಸೇನ, ನರೇಂದ್ರಸೇನ, ಜಿನಸೇನ, ಧರ್ಮಸೇನ, ನಾಗಸೇನ ಚಂದ್ರ ಭೂಷಣ, ದಾನಚಿಂತಾಮಣಿ, ಅತ್ತಿಮಬ್ಬೆ ಹೀಗೆ ಮೊದಲಾದ ಮುನಿ ಜನರ ಯೋಗ-ಭೋಗ ಜೀವನದ ಕುರಿತು ವಿವರಿಸಲಾಗಿದೆ. ಗದಗ ಪರಿಸರದಲ್ಲಿನ ಜೈನ ಹಾಗೂ ಜೈನೇತರ ಜನ ಸಾಮಾನ್ಯರ ಸಂವೇದನೆಗಳು, ಧೋರಣೆಗಳ ಕುರಿತು ಸಮಗ್ರವಾಗಿ ಅಧ್ಯಯನ ಕೈಗೊಂಡು ವಿಶ್ಲೇಷಣೆ ಮಾಡಲಾಗಿದೆ.

ಅಧ್ಯಾಯ ನಾಲ್ಕು "ಗದಗ ಪರಿಸರ ಮತ್ತು ಜೈನ ಅರಸು ಮನೆತನಗಳು" ಗದಗ ಪರಿಸರದಲ್ಲಿ ಆಳಿ ಹೋದ ಜೈನ-ಜೈನೇತರ ಅರಸು ಮನೆತನಗಳ ವಿಸ್ತೃತ ಅಧ್ಯಯನ ಮಾಡಲಾಗಿದೆ. ಈ ಪ್ರದೇಶದಲ್ಲಿ ಕ್ರಿ.ಪೂ. ದ ಹಲವು ಐತಿಹಾಸಿಕ ನೆಲೆಗಳು ಬೆಳಕಿಗೆ ಬಂದಿರುವುದಲ್ಲದೆ, ಶಾತವಾಹನರು, ಕದಂಬರು, ಗಂಗರ ಕಾಲದ ಹಲವು ಜೈನ ಅವಶೇಷಗಳು ದೊರತಿವೆ. ಜೈನೇತರ ಅರಸು ಮನೆತನಗಳು ಅನ್ಯಮತದ ಪೋಷಣೆ ಜೊತೆಗೆ ಜೈನ ಧರ್ಮದ ಪೋಷಣೆಯನ್ನು ಮಾಡಿದ್ದಾರೆ. ಅದಕ್ಕೆ ಪ್ರತಿಯಾಗಿ ಜೈನ ಯೋಧರು, ದಂಡನಾಯಕರೂ ಅರಸರ ಪ್ರಾಣ ಕಾಪಾಡಿದ್ದಾರೆ. ಅಲ್ಲದೆ ಅವರಿಗೆ ರಾಜಕೀಯ, ಧಾರ್ಮಿಕ ಸಲಹೆಗಳನ್ನು ಅಲ್ಲಿಯ ಜೈನ ಮುನಿಗಳು ನೀಡಿದ್ದಾರೆ. ಇವರು ಗದಗ ಪರಿಸರದಲ್ಲಿ ಅನೇಕ ಜೈನ ಬಸದಿಗಳನ್ನು ಕಟ್ಟಿಸಿ ಅವುಗಳ ಪೂಜಾ ಸಂಸ್ಕಾರ

ಹಾಗೂ ಖಂಡಸ್ಫುಟಿತ ಜೀರ್ಣೋದ್ಧಾರಕ್ಕಾಗಿ ಮತ್ತು ಮುನಿಜನರ ಪೋಷಣೆಗಾಗಿ ಗ್ರಾಮಗಳನ್ನು ದಾನ ಮಾಡಿದ್ದಾರೆ. ಜೈನ ಧರ್ಮದ ಮೂಲ ಸಂಘ, ಯಾಪನೀಯ ಸಂಘ, ಕೂರ್ತಕ ಸಂಘ, ಶ್ವೇತ ಪಟ ಸಂಘ ಮುಂತಾದವುಗಳ ಉಲ್ಲೇಖಗಳು ಇವರ ಕಾಲದ ಶಾಸನಗಳಲ್ಲಿ ದೊರೆಯುತ್ತವೆ. ಗಂಗರಸರು ಮೂಲತಃ ಜೈನರಾಗಿದ್ದು ಇತರ ಧರ್ಮಗಳಿಗೂ ಪ್ರೋತ್ಸಾಹ ನೀಡಿದ್ದಾರೆ. ಈ ಮನೆತನದ ಅರಸರು ಗದಗ ಪರಿಸರದಲ್ಲಿ ಅನೇಕ ಬಸದಿಗಳನ್ನು ಕಟ್ಟಿಸಿ ಜೀರ್ಣೋದ್ದಾರ ಹಾಗೂ ಮುನಿಜನರ ಪೋಷಣೆಗಾಗಿ ಭೂಮಿಯನ್ನು ದಾನ ಮಾಡಿದ ಉಲ್ಲೇಖಗಳು ಶಾಸನಗಳಿಂದ ಸ್ಪಷ್ಟವಾಗುತ್ತದೆ.

ಬದಾಮಿಯ ಚಾಲುಕ್ಯರು ಮೂಲತಃ ವೈಷ್ಣವರಾಗಿದ್ದರೂ ಜೈನ ಧರ್ಮದ ಪೋಷಣೆಯನ್ನು ಮಾಡಿದ್ದಾರೆ. ರಾಷ್ಟ್ರಕೂಟರು ಮೂಲತಃ ಜೈನರಾಗಿದ್ದು ಈ ಪ್ರದೇಶದಲ್ಲಿ ಅನೇಕ ಬಸದಿಗಳನ್ನು ಕಟ್ಟಿಸಿ, ದಾನದತ್ತಿಗಳನ್ನು ನೀಡಿದ್ದಾರೆ. ಅದೇ ರೀತಿ ಕಲ್ಯಾಣದ ಚಾಲುಕ್ಯರು, ಕಲಚೂರಿಗಳು, ಹೊಯ್ಸಳ ಅರಸರು, ವಿಜಯನಗರದ ಅರಸರು, ಅವರ ಸಾಮಂತ ಅರಸರು ಮಾಂಡಳಿಕರು, ಈ ಭಾಗದಲ್ಲಿ ಅನೇಕ ಜೈನ ಬಸದಿಗಳನ್ನು ಕಟ್ಟಿಸಿ ಭೂಮಿದಾನ ಮಾಡಿದ್ದಾರೆ. ಸವದತ್ತಿ ರಟ್ಟರು ಈ ಪ್ರದೇಶವನ್ನು (ಕ್ರಿ.ಶ. ೯೩೦-೧೨೩೦) ಸುಮಾರು ೩೦೦ ವರ್ಷಗಳ ಕಾಲ ಆಳಿ ಹೋಗಿದ್ದಾರೆ. ಇವರ ಕಾಲದಲ್ಲಿ ಗದಗ ಪ್ರದೇಶದಲ್ಲಿ ಹಲವಾರು ಕವಿಗಳು, ಜೈನ ಮುನಿಜನರು ಆಶ್ರಯ ಪಡೆದುಕೊಂಡು ಜೈನ ಪರಂಪರೆಯನ್ನು ಬೆಳೆಸಿದ್ದಾರೆ. ಈ ಅರಸು ಮನೆತನಗಳು ಜೈನ ಧರ್ಮಕ್ಕೆ ನೀಡಿದ ಪ್ರೋತ್ಸಾಹ, ಸಾಹಿತ್ಯ, ವಾಸ್ತುಶಿಲ್ಪ ಸಂಸ್ಕೃತಿಗೆ ನೀಡಿದ ಕೊಡುಗೆಗಳನ್ನು ಕುರಿತು ಉಲ್ಲೇಖಿಸಲಾಗಿದೆ. ಈ ಅರಸುಮನೆತನಗಳು ಬಸದಿಗಳನ್ನು ಕಟ್ಟಿಸಿ, ಜೈನ ಯೋಧರಿಗೆ ಮಂತ್ರಿಗಳಿಗೆ, ಪ್ರೋತ್ಸಾಹ ನೀಡಿ ಗೌರವಿಸಿದ್ದಾರೆ. ಅಲ್ಲದೆ ಅನೇಕ ಜೈನ ಮುನಿಗಳಿಗೆ ಆಶ್ರಯ ನೀಡಿ ಭೂಮಿಯನ್ನು ದಾನ ಮಾಡಿದ್ದಾರೆ. ಇವುಗಳ ವಿಸ್ತೃತ ಅಧ್ಯಯನ ಇಲ್ಲಿದೆ. ಗದಗ ಪರಿಸರದಲ್ಲಿರುವ ಜೈನ ಪರಂಪರೆಯ ಪ್ರಮುಖ ನೆಲೆಗಳ ಕುರಿತು ಸಮಗ್ರ ಅಧ್ಯಯನ ಕೈಗೊಳ್ಳಲಾಗಿದೆ.

ಅಧ್ಯಾಯ ಐದು "ಗದಗ ಪರಿಸರ ಮತ್ತು ಜೈನ ಬಸದಿಗಳು-ಮಠಗಳು" ಗದಗ ಜಿಲ್ಲೆಯಲ್ಲಿ ಕಟ್ಟಲಾದ ಪುರಾತನ ಬಸದಿಗಳು ಮತ್ತು ಸ್ಥಳಗಳ ವಿವರವಾದ ಅಧ್ಯಯನ ಮಾಡಲಾಗಿದೆ. ಈ ಪ್ರದೇಶದಲ್ಲಿ ಕ್ರಿ.ಶ. ೪ನೆಯ ಶತಮಾನದಿಂದ ೧೩ನೆಯ ಶತಮಾನದ ಕಾಲಾವಧಿಯಲ್ಲಿ ಹಲವಾರು ಬಸದಿಗಳು ರಚಿತಗೊಂಡಿವೆ. ಕ್ರಿ.ಶ. ೧೨-೧೩ನೆಯ ಶತಮಾನದ ಕಾಲಾವಧಿಯಲ್ಲಿ ಈ ಬಸದಿಗಳ ನಿರ್ನಾಮ ಪ್ರಾರಂಭವಾಯಿತು. ಇದಕ್ಕೆ ಮುಖ್ಯ ಕಾರಣ ಅನ್ಯ ಧರ್ಮದ ಪ್ರಾಬಲ್ಯ. ಆ ಕಾಲದಲ್ಲಿ ಬಹಳಷ್ಟು ಜಿನಾಲಯಗಳು ಶೈವಾಲಯಗಳಾಗಿ ವೈಷ್ಣವಾಲಯಗಳಾಗಿ, ಮಾರುತಿ ದೇವಾಲಯಗಳಾಗಿ ಹಾಗೂ ಗ್ರಾಮದೇವಿಯ ದೇವಾಲಯಗಳಾಗಿಯೂ ಪರಿವರ್ತಿತವಾದವು. ಇವುಗಳನ್ನು ಇಲ್ಲಿ ಸಾಧಾರವಾಗಿ ಗುರುತಿಸಲಾಗಿದೆ. ಈ ಪ್ರದೇಶದಲ್ಲಿ ಕಟ್ಟಲಾದ ಜಿನಾಲಯಗಳಲ್ಲಿ ಹೆಚ್ಚಾಗಿ ೨೩ನೆಯ ತೀರ್ಥಂಕರನಾದ ಪಾರ್ಶ್ವನಾಥನ ಬಸದಿಗಳೇ ಕಂಡು ಬಂದಿವೆ. ಇದಕ್ಕೆ ಕಾರಣ ಈ ತೀರ್ಥಂಕರನ ಬಗ್ಗೆ ಹೆಚ್ಚಿಕೊಂಡಿರುವ ನಂಬುಗೆ ಇನ್ನುಳಿದ ಆದಿನಾಥ, ಚಂದ್ರನಾಥ, ನೇಮಿನಾಥ, ಪದ್ಮಪ್ರಭ, ಕುಂಥುನಾಥ, ಶೀತಲನಾಥ,

ಸುಪಾರ್ಶ್ವನಾಥ, ಅನಂತನಾಥ, ಮಹಾವೀರ ಪೂಜ್ಯಪಾದ ಈ ಮುಂತಾದ ತೀರ್ಥಂಕರರ ಬಸದಿಗಳನ್ನು ವಿರಳವಾಗಿ ಕಾಣಬಹುದು. ಲಕ್ಕುಂಡಿಯಲ್ಲಿ ನಿರ್ಮಾಣವಾದ ಬ್ರಹ್ಮಜಿನಾಲಯ, ನಾಗನಾಥ ಬಸದಿ, ನೊಂಪಿಯ ಬಸದಿ, ಶಾಂತಿನಾಥ ಬಸದಿ, ಸೊರಟೂರಿನ ಬಲದೇವ ಬಸದಿ, ಲಕ್ಷ್ಮೇಶ್ವರದ ಶಂಖ ಜಿನಾಲಯ, ಧವಳಿ ಜಿನಾಲಯ ಮುಳಗುಂದ, ಹರ್ತಿ, ಗದಗ, ರೋಣ, ಅಣ್ಣಿಗೇರಿ, ಮುಂತಾದ ಜೈನ ಧರ್ಮದ ಸ್ಥಳಗಳಲ್ಲಿ ಕಂಡು ಬರುವ ಬಸದಿಗಳ ಶೋಧನೆ ನಡೆಸಿ, ಅವುಗಳ ಶೈಲಿ ಹಾಗೂ ಸಾಂಸ್ಕೃತಿಕ ಮಹತ್ವವನ್ನು ಕುರಿತು ಅಧ್ಯಯನ ಕೈಗೊಂಡು ಮಾಹಿತಿ ಸಂಗ್ರಹಿಸಿ ಕ್ಷೇತ್ರ ಅಧ್ಯಯನ ಕೈಗೊಂಡು ವಿವರಿಸಲಾಗಿದೆ.

ಅಧ್ಯಾಯ ಆರು "ಗದಗ ಪರಿಸರ ಮತ್ತು ಜೈನ ಸಾಹಿತ್ಯ ಪರಂಪರೆ" ಕನ್ನಡ ಸಾಹಿತ್ಯ ಕ್ಷೇತ್ರಕ್ಕೆ ಗದಗ ಪ್ರದೇಶವು ಕೊಟ್ಟ ಅಪಾರವಾದ ಕೊಡುಗೆಯನ್ನು ಗಮನಿಸಿದೆ. ಇಲ್ಲಿನ ಪ್ರಸಿದ್ಧ ಚಂಪೂ ಕವಿಗಳಾದ ರನ್ನ, ದುರ್ಗಸಿಂಹ, ನಯಸೇನ, ಕುಮಾರವ್ಯಾಸ, ಶಾಸನ ಕವಿಗಳಾದ ಶ್ರೀಧರಾಚಾರ್ಯ, ಮಲ್ಲಿಸೇನ, ನಯಸೇನ ಸೂರಿ, ನಾಗಮುದ್ದ, ಸಾಮಿಯಣ್ಣ, ಬಾಹುಬಲಿ ವೆಣ್ಣಿಯ ಭಟ್ಟ, ಮಾಧವಭಟ್ಟ, ವಚನಕಾರ್ತಿ ಮುಕ್ತಾಯಕ್ಕ, ಆಕೆಯ ಅಣ್ಣ ಅಜಗಣ್ಣ, ಚಾಮರಸ, ಅನುಭಾವಿ ಕವಿ ಬಾಲಲೀಲಾ ಮಹಾಂತ ಶಿವಯೋಗಿಗಳು, ಮುಂತಾದ ಕವಿಗಳು ಆಗಿಹೋಗಿದ್ದಾರೆ. ೧೦ನೆಯ ಶತಮಾನದಲ್ಲಿ ಚಂಪೂ, ೧೨ನೆಯ ಶತಮಾನದಲ್ಲಿ ವಚನ, ೧೫ನೆಯ ಶತಮಾನದಲ್ಲಿ ಷಟ್ಪದಿ, ೧೯ನೆಯ ಶತಮಾನದಲ್ಲಿ ಸ್ವರ ವಚನ ಸಾಹಿತ್ಯಕ್ಕೆ ಅನನ್ಯ ಕೊಡುಗೆ ನೀಡಿದ ಕವಿಗಳ ಅವರ ಕೃತಿಗಳ ವಿವರಣೆಯನ್ನು ಕೈಗೊಳ್ಳಲಾಗಿದೆ.

ಅದೇ ರೀತಿ ಆಧುನಿಕ ಕಾಲದಲ್ಲಿ ಜೈನ ಮತ್ತು ಜೈನೇತರ ಕವಿಗಳು ಜೈನ ಪರಂಪರೆಯನ್ನು ಕುರಿತು ರಚಿಸಿದ ಕವಿಗಳ ಮತ್ತು ಕೃತಿಗಳ ಪರಿಚಯವನ್ನು ನೀಡಿಲಾಗಿದೆ. ಈ ಅಧ್ಯಯನಕ್ಕೆ ಮೂಲ ಆಕರಗಳಲ್ಲಿ ಒಂದಾದ ಶಾಸನಗಳನ್ನು ಸಾಹಿತ್ಯಂಶವುಳ್ಳ ಕಾವ್ಯಗಳನ್ನು ಉಲ್ಲೇಖಿಸಲಾಗಿದೆ. ಗದಗ ಪ್ರದೇಶವು ಕನ್ನಡ ಸಾಹಿತ್ಯಕ್ಕೆ ತನ್ನದೇ ಆದ ಕೊಡುಗೆಯನ್ನು ನೀಡಿದೆ. ಇವುಗಳ ಅಧ್ಯಯನವೂ ಇಲ್ಲಿದೆ.

ಅಧ್ಯಾಯ ಏಳು "ಗದಗ ಪರಿಸರದ ಜೈನ ಪರಂಪರೆ : ಆಧುನಿಕತೆ" ಗದಗ ಪರಿಸರದಲ್ಲಿ ವೇದಗಳ ಕಾಲದಿಂದ ಇಂದಿನವರೆಗೆ ಇಲ್ಲಿನ ಸಮಾಜದಲ್ಲಿ ಜೈನ ಪರಂಪರೆಯ ಕಂಡ ಏರಿಳಿತಗಳನ್ನು ಕುರಿತು ಸಮಗ್ರ ಅಧ್ಯಯನ ಕೈಗೊಂಡು ವಿಶ್ಲೇಷಣೆ ಮಾಡಲಾಗಿದೆ. ಪ್ರಸ್ತುತ ಗದಗ ಪರಿಸರದಲ್ಲಿನ ಜೈನ ಸಮಾಜ ಹಾಗೂ ಜೈನೇತರರ ಧೋರಣೆಗಳನ್ನು ವಿವೇಚನೆಗೆ ಒಳಪಡಿಸಿ ವಿವರಿಸಲಾಗಿದೆ. ವೇದಕಾಲದ ಜೈನ ಸಮಾಜದ ತತ್ವಗಳ ವಿವೇಚನೆ ವೃಷಭನಾಥನ ಕಾಲದ ಜೈನ ಸಮಾಜ, ಮಹಾವೀರನ ಕಾಲದ ಜೈನ ಸಮಾಜ ಈ ಪರಿಸರದಲ್ಲಿ ಬೆಳೆದು ಬಂದ ಬಗೆ ಹಾಗೂ ಆಳರಸರ ಧೋರಣೆಗಳು. ಜನ ಸಾಮಾನ್ಯರ ನಿಲುವುಗಳನ್ನು ಕುರಿತು ಪ್ರಸ್ತುತ ಸಮಾಜದಲ್ಲಿ ಜೈನ ಪರಂಪರೆಯ ಮಹತ್ವ ಹಾಗೂ ಪ್ರಾಮುಖ್ಯತೆಯನ್ನು ಕುರಿತು ಕಂಡುಕೊಳ್ಳುವುದರ ಜೊತೆಗೆ ಅವುಗಳಿಂದ ಉಂಟಾಗುವ ಕಾರಣ ಪರಿಣಾಮಗಳನ್ನು ಕುರಿತು ಶೋಧಿಸಿ ಅಧ್ಯಯನ ಕೈಗೊಳ್ಳಲಾಗಿದೆ. ಇಂದಿನ

ಯುಗಮಾನದಲ್ಲಿ ಜೈನ ಪರಂಪರೆಯ ಮೌಲ್ಯಗಳನ್ನು ಪ್ರತಿಪಾದಿಸಿರುವ ತತ್ವಗಳನ್ನು ಜನ ಸಾಮಾನ್ಯರಿಗೆ ಅವುಗಳ ಅರಿವು ಮೂಡಿಸಿ ಅನುಸರಿಸುವಂತೆ ಅವುಗಳ ಸಂರಕ್ಷಣೆ ಮಾಡುವತ್ತ ಗಮನಹರಿಸುವುದು ಈ ಅಧ್ಯಾಯದ ಪ್ರಮುಖ ಅಂಶವಾಗಿದೆ.

ಅಧ್ಯಾಯ ಎಂಟು "ಸಮಾರೋಪ" ಮಹಾಪ್ರಬಂಧದ ಎಲ್ಲಾ ಅಧ್ಯಾಯಗಳ ಅಧ್ಯಯನದಿಂದ ಕಂಡುಕೊಂಡಿರುವ ಫಲಿತಗಳನ್ನು ಕ್ರೋಢೀಕರಿಸಿ, ವಿವೇಚಿಸಿ, ಉಲ್ಲೇಖಿಸಲಾಗುವುದು. ಅಧ್ಯಯನದ ಕಾಲದಲ್ಲಿ ಶೋಧಿಸಿದ ಪ್ರಮುಖ ಅಂಶಗಳನ್ನು ಹಾಗೂ ಕಂಡುಕೊಳ್ಳದೆ ಇರುವ ಅಂಶಗಳ ಕಡೆಗೂ ಗಮನಹರಿಸಿ ಅವುಗಳ ಸಾಧ್ಯಾಸಾಧ್ಯತೆಯನ್ನು ಚರ್ಚಿಸಿ ಅವುಗಳ ಮಹತ್ವ ಪ್ರಭಾವ ಪರಿಣಾಮಗಳನ್ನು ವಿಶ್ಲೇಷಣೆಗೆ ಒಳಪಡಿಸಿ ವಿವರಿಸುವುದು. ಈ ಪರಿಸರದಲ್ಲಿ ಕಂಡು ಬರುವ ಜೈನ ಪರಂಪರೆಯ ಸ್ಥಳಗಳು ಪ್ರಮುಖ ವ್ಯಕ್ತಿಗಳು ಸಾಧನೆಗಳು ಹಾಗೂ ಸಾಧ್ಯತೆ-ದಿಕ್ಕುದೆಸೆಗಳನ್ನು ಕುರಿತು ವಿವರಿಸುವುದು. ಈ ಅಧ್ಯಾಯ ಕೊನೆಗೆ ಅನುಬಂಧದಲ್ಲಿ ಅಧ್ಯಯನದ ಸಮಯದಲ್ಲಿ ಸಂಗ್ರಹಿಸಲಾದ ಛಾಯಾಚಿತ್ರಗಳು ಈ ಪರಿಸರದ ನಕ್ಷೆಗಳು ಅಧ್ಯಯನಕ್ಕೆ ಸಂಬಂಧಪಟ್ಟ ಪರಾಮರ್ಶನ ಗ್ರಂಥಗಳು ಹಾಗೂ ಜೈನ ಧರ್ಮದ ಜೈನ ಪಾರಿಭಾಷಿಕ ಪದಕೋಶಗಳ ವಿವರ, ಕ್ಷೇತ್ರ ಅಧ್ಯಯನದಲ್ಲಿನ ಕಾಲದಲ್ಲಿ ಜನಸಮಾನ್ಯರ ಹೇಳಿಕೆಗಳ ವಿವರ ವ್ಯಕ್ತಿಗಳ ವಿವರ ಹೀಗೆ ಸಮಗ್ರವಾದ ಮಾಹಿತಿಯ ಜೊತೆಗೆ ಫಲಿತಗಳನ್ನು ಕಾಲಾನುಕ್ರಮವಾಗಿ ವಿಶ್ಲೇಷಣೆ ಮಾಡಿ ವಿವರಣೆಗೆ ಒಳಪಡಿಸಲಾಗಿದೆ.

ಹೀಗೆ ಈ ಮಹಾಪ್ರಬಂಧದ ವಿನ್ಯಾಸಕ್ಕೆ ಅನುಗುಣವಾಗಿ ಅಧ್ಯಯನ ಕೈಗೊಂಡು ಗದಗ ಪರಿಸರಕ್ಕೆ ಹಾಗೂ ಜೈನ ಪರಂಪರೆಗೆ ಮೌಲ್ಯ ತಂದು ಕೊಡುವುದು ಈ ಮಹಾಪ್ರಬಂಧದ ಪ್ರಮುಖ ಆಶಯವಾಗಿದೆ.

ಜೈನ ಪರಂಪರೆಯನ್ನು ಗದಗ ಪರಿಸರದಲ್ಲಿನ ಪ್ರಮುಖ ನೆಲೆಗಳನ್ನು, ವಾಸ್ತುಶಿಲ್ಪ ಕಲೆಯ ಬೀಡುಗಳಾದ ಬಸದಿಗಳನ್ನು ಇಲ್ಲಿ ಆಳ್ವಿಕೆ ನಡೆಸಿದ ಅರಸು ಮನೆತನಗಳ ಪ್ರದೇಶಗಳನ್ನು ಸಾಹಿತ್ಯ ಕೃತಿಗಳನ್ನು ಸಂಶೋಧನಾ ಮಹಾಪ್ರಬಂಧಗಳನ್ನು ಹಾಗೂ ಸಂಪನ್ಮೂಲ ವ್ಯಕ್ತಿಗಳನ್ನು ಸಂಪರ್ಕಿಸಿ ಮಾಹಿತಿ ಸಂಗ್ರಹಿಸಿ, ಶೋಧಿಸಿ ವಿಷಯವನ್ನು ಕಾಲಾನುಕ್ರಮವಾಗಿ ಕೋಢ್ರಿಕರಿಸಿ ಮಹಾಪ್ರಬಂಧ ರಚಿಸಲಾಗಿದೆ. ರಚನೆಗೆ ಅಳವಡಿಸಿಕೊಳ್ಳಲಾದ ವಿಧಾನಗಳನ್ನು ಕೆಳಗಿನಂತೆ ವಿವರಿಸಲಾಗಿದೆ.

ಜೈನ ಪರಂಪರೆ ಹಾಗೂ ಗದಗ ಪರಿಸರಕ್ಕೆ ಸಂಬಂಧಿಸಿದ ಶಾಸನಗಳು, ಸ್ಮಾರಕಗಳು, ಸಾಹಿತ್ಯಿಕ ಕೃತಿಗಳು ಹಾಗೂ ಸಂಶೋಧನಾ ಮಹಾಪ್ರಬಂಧಗಳು ಪ್ರಾದೇಶಿಕ ಕೃತಿಗಳು ಮತ್ತು ಸಂಪನ್ಮೂಲ ವ್ಯಕ್ತಿಗಳನ್ನು ಸಂಪರ್ಕಿಸಿ, ಚರ್ಚಿಸಿ, ಅಧ್ಯಾಯ ಕೈಗೊಳ್ಳಲಾಗಿದೆ.

ಗದಗ ಪರಿಸರ ಮತ್ತು ಸುತ್ತಮುತ್ತಲಿರುವ ಜೈನ ಪರಂಪರೆಗೆ ಸಂಬಂಧಿಸಿದ ಸ್ಥಳಗಳ ಕ್ಷೇತ್ರ ಅಧ್ಯಯನದ ಮೂಲಕ ನೈಜ ಸ್ಥಿತಿ-ಗತಿಗಳನ್ನು ಅವಲೋಕನ ಮಾಡುವುದರೊಂದಿಗೆ ಅಧ್ಯಯನ ಕೈಗೊಳ್ಳಲಾಗಿದೆ.

ಕ್ಷೇತ್ರ ಕಾರ್ಯದಲ್ಲಿ ಕಂಡು ಬಂದಿರುವ ಸಂದೇಹಗಳನ್ನು ಜೈನ ಸಮಾಜದ ಸದ್ಯದ ಸ್ಥಿತಿ-ಗತಿಗಳನ್ನು ಕುರಿತು ಸಂಪನ್ಮೂಲ ವ್ಯಕ್ತಿಗಳ ಜೊತೆ ಮಾರ್ಗದರ್ಶಕರ ಜೊತೆ ಪರಂಪರೆಗೆ ಸಂಬಂಧಿಸಿದ ಸಂಘಟನೆಗಳ ನಾಯಕರ

ಜೊತೆ ಚರ್ಚಿಸಿದ ನಂತರ ಬಂದ ಫಲಿತಗಳನ್ನು ಕ್ರೋಢೀಕೃರಿಸಿ ಅಧ್ಯಯನಕ್ಕೆ ಉಪಯುಕ್ತವಾದ ಅಂಶಗಳನ್ನು ವಿಶ್ಲೇಷಣೆಗೆ ಒಳಪಡಿಸಿ ಜನ ಸಾಮಾನ್ಯರ ನಿಲುವುಗಳನ್ನು ಉಲ್ಲೇಖಿಸಲಾಗಿದೆ.

ಗದಗ ಪರಿಸರ ಹಾಗೂ ಜೈನ ಪರಂಪರೆಗೆ ಸಂಬಂಧಿಸಿದ ಅಂಶಗಳನ್ನು ಕೂಲಂಕುಷವಾಗಿ ಚರ್ಚಿಸಲು ವಿವರಿಸಲು ಬಾರದ ಸಂದರ್ಭದಲ್ಲಿ ಈ ಅಧ್ಯಯನ ವಿಧಾನವನ್ನು ಕೈಗೊಳ್ಳಲಾಗಿದೆ. ಮೇಲುನೋಟಕ್ಕೆ ಜೈನ ಧರ್ಮೀಯರು ಹಾಗೂ ಜನ ಸಾಮಾನ್ಯರು. ತಮ್ಮ ಸಂಪ್ರದಾಯಗಳ ಬಗ್ಗೆ ಇತರರಿಗೆ ತಿಳಿಸಲು, ಚರ್ಚಿಸಲು ಮುಂದೆ ಬರದೆ ಇದ್ದಾಗ ಅದರ ಬಗ್ಗೆ ಸಂಶೋಧಕರು ನೈಜ ಅಂಶಗಳನ್ನು ಹೊರಗೆ ಹಚ್ಚಿ ಆ ಕ್ಷೇತ್ರಗಳ ಅಲ್ಲಿನ ನೈಜ ಅಂಶಗಳನ್ನು ಶೋಧಿಸುವುದು ಈ ವಿಧಾನದ ಪ್ರಮುಖ ಅಂಶವಾಗಿದೆ. ಆದ್ದರಿಂದ ನನ್ನ ಈ ಪ್ರಬಂಧಕ್ಕೆ ಸಂಬಂಧಿಸಿದ ಕೆಲವು ಸ್ಥಳಗಳ ಬಗ್ಗೆ ಸಂಪ್ರದಾಯಗಳ ಬಗ್ಗೆ ಇದ್ದ ಸಂದೇಹಗಳನ್ನು ಬಗೆಹರಿಸುವ ನಿಟ್ಟಿನಲ್ಲಿ ಈ ಅಧ್ಯಯನ ವಿಧಾನವನ್ನು ಅಳವಡಿಸಿಕೊಂಡಿದ್ದೇನೆ.

ಜೈನ ಪರಂಪರೆಯನ್ನು ಇದೂವರೆಗೂ ಅಧ್ಯಯನ ಕೈಗೊಂಡ ಸಂಶೋಧನಕಾರರು, ಸಂಪನ್ಮೂಲ ವ್ಯಕ್ತಿಗಳನ್ನು ಸಂಪರ್ಕಿಸಿ ಸಂದರ್ಶನ ನಡೆಸಿ ವಿಷಯ ಸಂಗ್ರಹ ಮಾಡಲಾಗಿದೆ. ಈ ಪರಿಸರದಲ್ಲಿ ಜೈನ ಮುನಿವರರನ್ನು ಜೈನ ಧರ್ಮಕ್ಕೆ ಸಂಬಂಧಪಟ್ಟ ಸಂಘ-ಸಂಸ್ಥೆಗಳನ್ನು ಸ್ಥಳಗಳನ್ನು ಸಂದರ್ಶಿಸಿ ಮಾಹಿತಿ ಕಲೆಹಾಕಲಾಗಿದೆ. ಗದಗ ಪರಿಸರದಲ್ಲಿನ ಜೈನ ಸಮುದಾಯವನ್ನು ಸಂದರ್ಶಿಸುವುದು ಅವರ ಸಧ್ಯದ ಸ್ಥಿತಿ-ಗತಿಯನ್ನು ಕುರಿತು, ಕೌಟುಂಬಿಕ ಮಾಹಿತಿಯನ್ನು ಕುರಿತು ಜೈನ ಪರಂಪರೆಯನ್ನು ಜೈನೇತರರ ಅಭಿಪ್ರಾಯಗಳನ್ನು ಸಂಗ್ರಹಿಸಿ ವಿಶ್ಲೇಷಣೆಯನ್ನು ಈ ವಿಧಾನದ ಮೂಲಕ ಮಾಡಲಾಗಿದೆ.

ಪ್ರಾಚೀನ ಕಾಲದಿಂದ ಇಂದಿನವರೆಗೆ ಲಭ್ಯವಿರುವ ಮೂಲ ಆಕಾರಗಳಾದ ಶಾಸನಗಳು, ಸ್ಮಾರಕಗಳು, ಸಾಹಿತ್ಯಿಕ ಕೃತಿಗಳಲ್ಲಿನ ಕಾಲ ನಿರ್ಣಯಗಳನ್ನು ಆಧಾರವಾಗಿಟ್ಟು ಅಂಕಿ ಸಂಖ್ಯೆಗಳ ಕಾಲವನ್ನು ಎಲ್ಲಾರಿಗೂ ಒಪ್ಪಿತವಾದ ಹಾಗೂ ಒಪ್ಪಿತವಾಗುವ ಅಂಶಗಳನ್ನು ಅಳವಡಿಸಿಕೊಳ್ಳುವುದು. ಸರಕಾರದಿಂದ ಹೊರಹೊಮ್ಮುವ ಅಂಕಿ ಸಂಖ್ಯೆ ಗಣತಿಯನ್ನು ಅಳವಡಿಸಿಕೊಳ್ಳುವುದು. ಇತ್ತೀಚೆಗೆ ಅಳವಡಿಕೊಳ್ಳಲಾದ ಅಭಿವೃದ್ಧಿ ಅಧ್ಯಯನ ವರದಿಗಳನ್ನು ಆಯಾ ಕ್ಷೇತ್ರಗಳಲ್ಲಿ ಮೂಡಿ ಬಂದ ಸಾಧನೆಗಳ ರೂಪು ರೇಷವನ್ನು ಅಂಕಿ-ಅಂಶಗಳ ಮೂಲಕ ವಿವರಣೆಗೆ ಒಳಪಡಿಸುವುದು ಈ ವಿಧಾನದ ಮುಖ್ಯ ಅಂಶವಾಗಿದೆ. ಹೀಗಾಗಿ ಪ್ರಸ್ತುತ ಈ ಪರಿಸರ ಹಾಗೂ ಪರಂಪರೆಗೆ ಸಂಬಂಧಿಸಿದ ನಿಖರವಾದ ಅಂಕಿ ಅಂಶಗಳನ್ನು ತಿಳಿದು ಅವುಗಳ ವಿಶ್ಲೇಷಣೆ ಕೈಗೊಳ್ಳಲು ಈ ವಿಧಾನ ಸಹಾಯಕವಾಗಿದೆ.

ಹೀಗೆ ನನ್ನ ಈ ಮಹಾಪ್ರಬಂಧದ ಅಧ್ಯಯನ ಕಾರ್ಯದಲ್ಲಿ ಈ ಮೇಲಿನ ಪ್ರಮುಖ ಆರು ವಿಧಾನಗಳನ್ನು ಆಧಾರವಾಗಿಟ್ಟುಕೊಂಡು ನನ್ನ ಈ ಮಹಾಪ್ರಬಂಧದ ರಚನೆಯ ರೂಪುರೇಷವನ್ನು ತಯಾರಿಸಿದ್ದೇನೆ. ಮತ್ತು ನನ್ನ ಅಧ್ಯಯನಕ್ಕೆ ಸೂಕ್ತ ಅಧ್ಯಯನ ವಿಧಾನಗಳು ಇವು ಎಂಬುದನ್ನು ಮನಗಂಡು ಅಧ್ಯಯನವನ್ನು ಕೈಗೊಂಡಿದ್ದೇನೆ.

## ೫. ಅಧ್ಯಯನದ ಮಹತ್ವ :

ಪ್ರಸ್ತುತ ಮಹಾಪ್ರಬಂಧದ ಪ್ರಾಮುಖ್ಯತೆ ಹಡಗಿರುವುದು "ಜೈನ ಪರಂಪರೆ" ಎಂಬ ಪರಿಕಲ್ಪನೆಯಲ್ಲಿ ಜೈನ ಪರಂಪರೆಯು ಜಾಗತಿಕ ಮಟ್ಟದಲ್ಲಿ ರಾಷ್ಟ್ರ, ರಾಜ್ಯ, ಹಾಗೂ ಗದಗ ಪರಿಸರದಲ್ಲಿ ಉಂಟುಮಾಡಿರುವ ಪ್ರಭಾವವನ್ನು ಅರಿಯಲು ಸಮಗ್ರವಾದ ಅಧ್ಯಯನ ಅವಶ್ಯಕವಾಗಿರುವುದರಿಂದ ಈ ಮಹಾಪ್ರಬಂಧದ ಅಧ್ಯಯನವು ಸೂಕ್ತವೆನಿಸಿದೆ. ಬದುಕಿನ ಎಲ್ಲಾ ಸ್ತರಗಳಲ್ಲಿಯೂ ಅಂಟಿರುವ ಕಲ್ಮಶವನ್ನು ನೀಗಿ, ಹಸನುಮಾಡುವ ಶಕ್ತಿಯುಳ್ಳ ಈ ಧರ್ಮವು, ಮನುಷ್ಯನ ಮನಸ್ಸನ್ನು ಹೆಚ್ಚು ಹೆಚ್ಚು ಅಂತರ್ಮುಖಿಯಾಗಿ ಮಾಡಬಲ್ಲದು. ಅಂತೆಯೇ ಸಂತರು, ಮುನಿಗಳು ತಮ್ಮ ಆಚರಣೆಗಳಿಂದ ಪರಿಶುದ್ಧರಾದ ಮೇಲೆ ಅಂತರ್ಮುಖಿಗಳಾಗಿ ದಿವ್ಯಚಿಂತನದಲ್ಲಿ ತೊಡಗುತ್ತಾರೆ. ಧರ್ಮವು ಜೀವನದ ಬಗೆಗೆ ಗೌರವ ಆದರಗಳನ್ನು ಹುಟ್ಟಿಸುತ್ತದೆ. ಮನುಷ್ಯನ ಪ್ರಯತ್ನಗಳಿಗೆ ಹೋರಾಟಕ್ಕೆ ಸಾರ್ಥಕತೆಯನ್ನು ನೀಡುತ್ತದೆ. ಬದುಕಿನಲ್ಲಿ ಶ್ರದ್ಧೆಯನ್ನು ಒಡಮೂಡಿಸುತ್ತದೆ. ಎಂಬುದನ್ನು ಪ್ರಸ್ತುತ ಜೈನ ಪರಂಪರೆಯ ಅಧ್ಯಯನದಲ್ಲಿ ಕಂಡು ಬರುವುದರಿಂದ ಗದಗ ಪರಿಸರದಲ್ಲಿನ, ಮುನಿಗಳು, ಕವಿಗಳು, ಕಲೆ-ವಾಸ್ತುಶಿಲ್ಪ ಕೇಂದ್ರಗಳ ಬಗ್ಗೆ ಶ್ರದ್ಧೆಯನ್ನು ಬೆಳೆಸಿಕೊಂಡು ಗೌರವ ಆದರವನ್ನು ಬೆಳೆಸಿಕೊಂಡು ಲೌಕಿಕ-ಪಾರಲೌಕಿಕ ಸಿದ್ಧಿಯನ್ನು ಬೆಳೆಸಿಕೊಳ್ಳುವಂತೆ ಮಾಡುವುದು ಈ ಮಹಾಪ್ರಬಂಧ ಪ್ರಮುಖ ಅಂಶವಾಗಿದೆ. ಇಂದಿನ ಜಾಗತಿಕರಣದ ಸಂದರ್ಭದಲ್ಲಿ ಧರ್ಮದ ಬಗ್ಗೆ, ಮೌಲ್ಯಗಳ ಬಗ್ಗೆ ಮನುಷ್ಯನು ಹೊಂದಿರುವ ಮನೋಭಾವವನ್ನು ಬದಲಾಯಿಸಿಕೊಂಡು ಮನುಷ್ಯನು ತನ್ನ ಬದುಕನ್ನು ಅರ್ಥಪೂರ್ಣವಾಗಿಸಿಕೊಳ್ಳುವುದು ಈ ಅಧ್ಯಯನದ ಮಹತ್ವವಾಗಿದೆ.

***

# ಅಧ್ಯಾಯ - ೨
# ಗದಗ ಪರಿಸರದ ಜೈನ ಪರಂಪರೆ : ನೆಲೆ-ಹಿನ್ನೆಲೆ

ಪೀಠಿಕೆ

೨.೧.೧. ಚಾರಿತ್ರಿಕ ನೆಲೆ-ಹಿನ್ನೆಲೆ

೨.೧.೨. ರಾಜಕೀಯ ನೆಲೆ-ಹಿನ್ನೆಲೆ

೨.೧.೩. ಧಾರ್ಮಿಕ ನೆಲೆ-ಹಿನ್ನೆಲೆ

ಅಧ್ಯಾಯ ೨

# ಗದಗ ಪರಿಸರದ ಜೈನ ಪರಂಪರೆ : ನೆಲೆ–ಹಿನ್ನೆಲೆ

---

**ಪೀಠಿಕೆ :**

ಗದಗ ಜಿಲ್ಲೆಯು ಪೌರಾಣಿಕವಾಗಿ ಹಾಗೂ ಚಾರಿತ್ರಿಕವಾಗಿ ಪ್ರಾಚೀನ ಕಾಲದಿಂದಲೂ ವಿಶಿಷ್ಟ ಸ್ಥಾನ ಪಡೆದುಕೊಂಡು ಬಂದಿರುವ ಈ ಜಿಲ್ಲೆಯು ಯಾವ ಅರಸು ಮನೆತನಗಳ ಖಾಯಂ ರಾಜಧಾನಿಯಾಗದಿದ್ದರೂ ಸಾಮ್ರಾಜ್ಯಗಳ ತಿರುಳುನಾಡಾಗಿ ರಾಜಕೀಯ, ಧಾರ್ಮಿಕ ಮತ್ತು ಶೈಕ್ಷಣಿಕ ಕೇಂದ್ರವಾಗಿ ಚರಿತ್ರೆಯಲ್ಲಿ ವಿಜೃಂಭಿಸಿದೆ. ಈ ನಗರದ ಬದುಕಿನ ಒಂದು ಸೂತ್ರವೆಂದರೆ ಸಾಮರಸ್ಯವನ್ನು ಅನೇಕ ಸ್ತರಗಳಲ್ಲಿ ಗುರುತಿಸಬಹುದು. ಇವುಗಳಲ್ಲಿ ಅತೀ ಮುಖ್ಯವಾದುದು ಧಾರ್ಮಿಕ ಸ್ತರ. ಪ್ರಸ್ತುತ ಈ ಅಧ್ಯಾಯದಲ್ಲಿ ಗದಗ ಪರಿಸರ ಮತ್ತು ಇಲ್ಲಿ ಬೆಳೆದು ಬಂದ ಜೈನ ಪರಂಪರೆಯ ನೆಲೆ ಹಿನ್ನೆಲೆಯನ್ನು ಕುರಿತು ವಿಸ್ತ್ರತವಾಗಿ ವಿವರಣೆಗೆ ಒಳಪಡಿಸಲಾಗಿದೆ. ಪರಿಸರದ ಚರಿತ್ರೆಗಿಂತ ಇಲ್ಲಿ ಬೆಳೆದು ಬಂದ ಪರಂಪರೆಯ ಮಹತ್ವವನ್ನು ಅರಿಯುವುದು ಮುಖ್ಯವಾಗಿದೆ.

ಪ್ರಸ್ತುತ ಗದಗ ಜಿಲ್ಲೆಯ ಪೌರಾಣಿಕ, ಚಾರಿತ್ರಿಕ, ಭೌಗೋಳಿಕ ಧಾರ್ಮಿಕ ಮತ್ತು ಸಾಮಾಜಿಕ, ಸಾಂಸ್ಕೃತಿಕ ಹಿನ್ನೆಲೆಯನ್ನು ಕುರಿತು ಅಧ್ಯಯನ ಕೈಗೊಳ್ಳುವುದು ಈ ವಿಭಾಗದ ಮುಖ್ಯ ಅಂಶ. ಗದಗ ಪರಿಸರವು ಸಾಧಿಸಿದ ಸಾಧನೆಗಳ ಬೆಳಕನ್ನು ಚಲ್ಲುವುದು ಇದರ ಮುಖ್ಯ ಅಂಶವಾಗಿದೆ. ಗದಗ ಮತ್ತು ಬೆಟಗೇರಿ ಎಂಬ ಎರಡು ಊರುಗಳಿಂದ ಅಸ್ತಿತ್ವಕ್ಕೆ ಬಂದಿರುವ ಈ ಜಿಲ್ಲೆಯ ಕೇಂದ್ರಸ್ಥಾನ ಅತ್ಯಂತ ಪುರಾತನವಾದ ಸ್ಥಳವಾಗಿದೆ. “ಶಾಸನಗಳ ಉಗಮ ದಾನ ಧರ್ಮಗಳಲ್ಲಿ” ಎಂದು ಶಾಸನ ತಜ್ಞ ಶ್ರೀ ಆರ್. ಎಸ್. ಪಂಚಮುಖಿಯವರ ನುಡಿ[೧] ಈ ಶಾಸನ ಸಾಹಿತ್ಯಕ್ಕೆ ಬರೆದ ಭಾಷ್ಯ. ಹಲವು ಶಾಸನಗಳಲ್ಲಿ ಗದಗವನ್ನು ‘ಗಲದುರ್ಗ’ ಕಲ್‌ದುರ್ಗ, ಗರದುರ್ಗ, ಕರ್ತಕ, ಕೃತಪುರ ಹಾಗೂ ಗದಗು ಎಂದು ವಿಧವಿಧವಾಗಿ ವಿವರಿಸಲಾಗಿದೆ.[೨] ಕ್ರಿ.ಶ. ೧೦೦೨ರ ಅಹವಮಲ್ಲನ ತ್ರಿಕೋಟೇಶ್ವರ

---

೧. ಡಾ. ಆರ್. ಎಸ್. ಪಂಚಮುಖಿ, ಕನಾಟಕದ ಅರಸು ಮನೆತನಗಳು, ಪು. ೭೬.

೨. ಶಾಸನಕಪಿ ಮಲ್ಲನ–ಕೃತಪುರ ಮಹಾತ್ಮೆ.

ದೇವಾಲಯದಲ್ಲಿನ ಶಾಸನಗಳಲ್ಲಿ 'ಕದ್ದುಗ್ಗಿಗೆ' ಎಂದು ಉಲ್ಲೇಖಿಸಿರುವುದು ಕಂಡು ಬಂದಿದೆ. ಗದುಗಿನ ಭಾಗವಾಗಿರುವ ಬೆಟಗೇರಿಯು 'ಬಟ್ಟಗೆರೆ" ಎಂದು ರಾಷ್ಟ್ರಕೂಟರ ಇಂದ್ರ ಕ್ರಿ.ಶ. ೯೧೮ರ ಶಾಸನದಲ್ಲಿ ಉಲ್ಲೇಖಗೊಂಡಿದೆ. ಗದಗ ಜಿಲ್ಲೆಯು ಪೌರಾಣಿಕವಾಗಿಯೂ ಪ್ರಸಿದ್ಧವಾಗಿದೆ. ಲಕ್ಕುಂಡಿಯನ್ನು ಶ್ರೀರಾಮ ನಿರ್ಮಿತ ಮಹಾ ಗ್ರಾಮವೆಂದು ರಾಮಾಯಣದ ಶ್ರೀ ರಾಮನ ಜೊತೆ ಸೇರಿಸಿ ೧೧-೧೨ನೆಯ ಶತಮಾನದ ಶಾಸನಗಳೇ ಹೇಳುತ್ತವೆ. ರೋಣವು ದ್ರೋಣಪುರವಾಗಿತ್ತೆಂದು ದ್ರೋಣನದು ಒಂದು ಪ್ರತಿಮೆಯೂ ಅಲ್ಲಿನ ಬಸವ ದೇವಾಲಯದಲ್ಲಿದೆ. ದ್ರೋಣ ಎಂಬ ಹೆಸರಿನಿಂದ ರೋಣ ನಿಷ್ಪತ್ತಿಯಾಯಿತೆಂದು ಅಭಿಪ್ರಾಯವಿದೆ. ಗದಗವನ್ನು ಕೃತಪುರವೆಂದೂ ಜನಮೇಜಯನು ಯಜ್ಞ ಮಾಡಿದ ಸ್ಥಳವೆಂದೂ ಅವನೇ ಅಲ್ಲಿನ ಅಗ್ರಹಾರವನ್ನು ಸ್ಥಾಪಿಸಿದನೆಂದು ಹೇಳಿಕೆಗಳಿವೆ.

ಗದಗ ಜಿಲ್ಲೆಯಲ್ಲಿ ಇತಿಹಾಸ ಪೂರ್ವದಲ್ಲಿನ ಜನರು ಬಳಸುತ್ತಿದ್ದ ವಸ್ತುಗಳ ಅವಶೇಷಗಳು ಕೃಷಿ-ಪಶುಪಾಲನೆ ಆರಂಭಿಸಿದಾಗ ಅವರು ಬಳಸುತ್ತಿದ್ದ ಕಪ್ಪು, ಬಿಳಿ, ಕೆಂಪು ಅಥವಾ ಬೂದು ಬಣ್ಣದ ಮಡಕೆ ಕುಡಿಕೆಗಳನ್ನೊಳಗೊಂಡ ಆ ಕಾಲದ ನಿವೇಶನಗಳು ನರಗುಂದ ಮತ್ತು ರೋಣ ತಾಲ್ಲೂಕುಗಳಲ್ಲಿ ದೊರತಿವೆ. ಶಿಲಾಯುಗದ ನಂತರ ಕಬ್ಬಿಣದ ಬೃಹತ್ ಶಿಲಾಸಂಸ್ಕೃತಿಯ ಕಾಲದ ಬಿಳಿ ಬಿಳಿ ಬಣ್ಣದ ಚಿತ್ರಗಳನ್ನೊಳಗೊಂಡ ಮಡಕೆಗಳು, ಕಬ್ಬಿಣದ ಬಾಣ, ಚಾಕು, ಬರ್ಜಿ ಮುಂತಾದವುಗಳ ಜೊತೆಗೆ ಸಂಗೀತ ಸಾಧನಗಳು ರೋಣ ತಾಲೂಕಿನಲ್ಲಿ ದೊರೆತಿವೆ.

ಗದಗ ಪರಿಸರವು ಅನೇಕ ಅರಸು ಮನೆತನಗಳ ಆಳ್ವಿಕೆಗೆ ಒಳಪಟ್ಟಿತ್ತು ಎಂಬುದನ್ನು ಶಾಸನಗಳಿಂದ, ಸಾಹಿತ್ಯಿಕ ಕೃತಿಗಳಿಂದ ತಿಳಿದು ಬಂದಿದೆ. ಈ ಪರಿಸರದಲ್ಲಿ ಆಳಿದ ಗಂಗರು ಬದಾಮಿ ಚಾಲುಕ್ಯರು, ರಾಷ್ಟ್ರಕೂಟರು, ಕಲ್ಯಾಣದ ಚಾಲುಕ್ಯರು ಕಲಚೂರಿಗಳು ಹೊಯ್ಸಳರ ಆಡಳಿತ ಸಾಗಿ ಬಂದು ವಿಜಯನಗರ ಸಾಮ್ರಾಜ್ಯದ ಕಾಲದಲ್ಲಿ ವಿಶೇಷ ಖ್ಯಾತಿಯನ್ನು ಪಡೆಯಿತು. ೧೭೬೩ರಲ್ಲಿ ಗದಗ ಬಿಜಾಪುರದ ವಶವಾಯಿತು. ವೆಲ್ಲೆಸ್ಲಿಯು ೧೮೯೯ರಲ್ಲಿ ಡಂಬಳಕೋಟೆಯನ್ನು ವಶಪಡಿಸಿಕೊಂಡ ನಂತರ ಆತನ ಆಳ್ವಿಕೆಗೆ ಒಳಪಟ್ಟಿದ್ದ ಡಂಬಳ ಗದಗ ಪ್ರದೇಶಗಳು ಪೇಶ್ವಾಯ ದಂಡಾಧಿಕಾರಿಗೆ ಮರಳಿ ನೀಡಲ್ಪಟ್ಟವು. ಕೊನೆಗೆ ಮರಾಠಯುದ್ಧದಲ್ಲಿ ಸರ್ ಥಾಮಸ್ ಮನ್ರೋ ಕ್ರಿ.ಶ. ೧೮೧೮ರಲ್ಲಿ ಗದುಗಿನ ಮೇಲೆ ಎರಗಿದಾಗ ಅಲ್ಲಿನ ಕೋಟೆಯು ಅವನ ವಶವಾಯಿತು. ಅನಂತರ ಈ ಪ್ರದೇಶವು ಬ್ರಿಟಿಷರ ಆಳ್ವಿಕೆಗೆ ಒಳಪಟ್ಟಿತ್ತು.

ಧಾರವಾಡ ಜಿಲ್ಲೆಯು ೧೮೩೦ರಲ್ಲಿ ಈಸ್ಟ ಇಂಡಿಯಾ ಕಂಪನಿ ಡೈರೆಕ್ಟರುಗಳ ತೀರ್ಮಾನದಂತೆ ರಚಿಸಿ ಮುಂಬೈ ಪ್ರಾಂತ್ಯಕ್ಕೆ ಸೇರಿಸಲಾಯಿತು. ಅಂದಿನ ಧಾರವಾಡ ಜಿಲ್ಲೆಯು ಬೆಳಗಾವಿ, ಬಿಜಾಪುರ, ಸೊಲ್ಲಾಪುರ ಜಿಲ್ಲೆಯ ಹಲವು ಪ್ರದೇಶಗಳನ್ನು ಒಳಗೊಂಡಿತ್ತು. ೧೮೩೬ರಲ್ಲಿ ಬೆಳಗಾವಿ ಜಿಲ್ಲೆ ಪ್ರತ್ಯೇಕಗೊಂಡಿತು. ನಂತರ ೧೮೫೭ರಲ್ಲಿ ನರಗುಂದಕ್ಕೆ ಸೇರಿದ್ದ ಕೆಲವು ಹಳ್ಳಿಗಳು ಬ್ರಿಟೀಷರ ವಶವಾದವು. ೧೯೬೨ರಲ್ಲಿ ಧಾರವಾಡ ಹುಬ್ಬಳ್ಳಿ ಪಟ್ಟಣಗಳನ್ನು ಸೇರಿಸಿ ಮಹಾನಗರವೆಂದು ಪರಿಗಣಿಸಲಾಯಿತು. ನಂತರ ಜಮಖಂಡಿ ಸಂಸ್ಥಾನ

ಕಿರೇಮಿರ್ಜಾ ಸಂಸ್ಥಾನ, ಹಿರೇಮಿರ್ಜಾ ಸಂಸ್ಥಾನಕ್ಕೆ ಸೇರಿದ್ದ ಶಿಗ್ಗಿ ಮತ್ತು ಈಗಲೂ ಪಟ್ಟಣವಾಗಿರುವ ಲಕ್ಷ್ಮೇಶ್ವರ ಮತ್ತು ಸಾಂಗ್ಲಿ ಸಂಸ್ಥಾನಕ್ಕೆ ಸೇರಿದ್ದ ಶಿರಹಟ್ಟಿ ಪಟ್ಟಣಗಳು, ಶಿರಹಟ್ಟಿ ತಾಲೂಕಿನಲ್ಲಿಯೇ ಇವೆ. ೧೭ ತಾಲೂಕುಗಳನ್ನೊಳಗೊಂಡಿದ್ದ ಧಾರವಾಡ ಜಿಲ್ಲೆಯನ್ನು ೧೯೯೭ರಲ್ಲಿ ವಿಭಜಿಸಿ ಗದಗ ಮತ್ತು ಹಾವೇರಿ ಜಿಲ್ಲೆಗಳಾಗಿ ರಚಿಸಲಾಯಿತು.[೩]

ಹೊಸದಾಗಿ ರಚನೆಯಾದ ಗದಗ ಜಿಲ್ಲೆಯ ಪರಿಸರದ ಸಾಂಸ್ಕೃತಿಕ ಪರಂಪರೆಯೂ ಶ್ರೀಮಂತವಾಗಿದ್ದು, ಸಾಹಿತ್ಯ, ಧಾರ್ಮಿಕ, ಸಾಮಾಜಿಕ, ನಾಟಕ ರಂಗಕ್ಕೆ ಮಹತ್ವವಾದ ಕೊಡುಗೆ ನೀಡಿದೆ. ಆದಿಕವಿ ಪಂಪ ಅಣ್ಣಿಗೇರಿಯವನು, ದಾನಚಿಂತಾಮಣಿಯೆಂದು ಪ್ರಸಿದ್ಧವಾದ ಅತ್ತಿಮಬ್ಬೆ ರನ್ನ ಕವಿಗೆ ಆಶ್ರಯ ನೀಡಿದವಳು ಲಕ್ಕುಂಡಿಯವಳು. ಕನ್ನಡ ಗದ್ಯ ಸಾಹಿತ್ಯಕ್ಕೆ ಅಪೂರ್ವ ಕಾಣಿಕೆ ನೀಡಿದ ನಾಗವರ್ಮ, ದುರ್ಗಸಿಂಹರು ಸವಡಿಯವರು. ಮಹಾಕವಿ ಕುಮಾರವ್ಯಾಸನ ಭಾರತ, ಹುಟ್ಟಿದ್ದು ಇದೇ ಪುಣ್ಯ ಭೂಮಿಯಲ್ಲಿ. ಅವನಷ್ಟೇ ಪ್ರಸಿದ್ಧನಾದ ಚಾಮರಸ ಇದೇ ಪರಿಸರದವನು. ಇಂದಿಗೂ ಸಹ ಉಜ್ವಲ ಸಾಹಿತ್ಯಿಕ ಪರಂಪರೆಯನ್ನು ಡಾ. ಆರ್. ಸಿ. ಹಿರೇಮಠ, ಡಾ. ಗಿರಡ್ಡಿ ಗೋವಿಂದ, ಡಾ. ಜೆ. ಎಸ್. ಆಮೂರು ಚನ್ನವೀರ ಕಣವಿ, ಎನ್. ಕೆ. ಕುಲಕರ್ಣಿ. ಹುಯಿಲಗೋಳ ನಾರಾಯಣರವರು ಜಿ. ಬಿ. ಜೋಶಿ ಕೀರ್ತಿನಾಥ ಕುರ್ತಕೋಟಿ ಬೆಳೆಸಿಕೊಂಡು ಬಂದಿದ್ದಾರೆ. ಇಂದು ಆ ಪರಂಪರೆಯನ್ನು ಗದಗ ಪರಿಸರದಲ್ಲಿ ಯುವ ಲೇಖಕರು, ಸಂಶೋಧಕರು, ಸಾಹಿತಿಗಳು ಅದನ್ನು ಮುಂದುವರಿಸಿದ್ದಾರೆ.

ಗದಗ ಜಿಲ್ಲೆಯಲ್ಲಿ ಗದಗ, ರೋಣ, ನರಗುಂದ, ಮುಂಡರಗಿ, ಶಿರಹಟ್ಟಿ ತಾಲೂಕುಗಳು ಸಮಾವೇಶಗೊಳ್ಳುತ್ತಿವೆ. ಗದಗ ಜಿಲ್ಲೆಯ ಅನೇಕ ಐತಿಹಾಸಿಕ ಮಹತ್ವದ ಸ್ಥಿತಿಗಳನ್ನು ಒಳಗೊಂಡಿದೆ. ಬೆಳ್ವಲ ೩೦೦ ವಿಭಾಗದ ರಾಜಧಾನಿ ಅಣ್ಣಿಗೇರಿ. ಪುಲಿಗೇರಿ ೩೦೦ ವಿಭಾಗದ ರಾಜಧಾನಿ ಲಕ್ಷ್ಮೇಶ್ವರ ಸಾಂಸ್ಕೃತಿಕ ಮಹತ್ವ ಪಡೆದ ಲಕ್ಕುಂಡಿ, ಗದಗ, ಮುಳಗುಂದ, ರೋಣ, ಡಂಬಳ ಮೊದಲಾದ ಗ್ರಾಮಗಳು ಗದಗ ಜಿಲ್ಲೆಯಲ್ಲಿವೆ. ಸದ್ಯ ಗದಗ ಜಿಲ್ಲೆಯಲ್ಲಿ ೩೩೯ ಗ್ರಾಮಗಳಿವೆ. ಪ್ರಸ್ತುತ ಗದಗ ಜಿಲ್ಲೆಯಲ್ಲಿವೆ. ಸದ್ಯ ಗದಗ ಜಿಲ್ಲೆಯಲ್ಲಿ ೩೩೯ ಗ್ರಾಮಗಳಿವೆ. ಪ್ರಸ್ತುತ ಗದಗ ಜಿಲ್ಲೆಯು ಐದು ತಾಲೂಕು ಕೇಂದ್ರಗಳ ಚಾರಿತ್ರಿಕ, ಭೌಗೋಳಿಕ, ಪೌರಾಣಿಕ ಸಾಮಾಜಿಕ ಹಾಗೂ ಧಾರ್ಮಿಕ ಸಾಂಸ್ಕೃತಿಕ ಮಹತ್ವವನ್ನು ಪ್ರಸ್ತುತವಾಗಿ ಅಧ್ಯಯನಕ್ಕೆ ಒಳಪಡಿಸಲಾಗಿದೆ.

ಭವ್ಯ ಇತಿಹಾಸವನ್ನು ಹೊಂದಿದ ಗದಗ ತಾಲೂಕು ಮಹಾನ್‌ವೀರರ ನಾಡಾಗಿದ್ದು ಸಾಹಿತ್ಯ, ಧರ್ಮ, ಕಲೆ ಮತ್ತು ವಾಸ್ತುಶಿಲ್ಪಕ್ಕೆ ಅಪರಿಮಿತ ಕೊಡುಗೆ ನೀಡಿದೆ. ಬೆಟಗೇರಿಯ ೯೧೮ರ ಶಾಸನ ಗದಗ ಪರಿಸರದ ಜನತೆ, ವಿದ್ವಾಂಸರು, ದೇವಪೂಜಾ ನಿಷ್ಠರೂ, ಕಲಾ ಸಂಸ್ಕೃತಿಯ ಪ್ರಿಯರು ಎಂಬುದನ್ನು ವರ್ಣಿಸುತ್ತದೆ. ಶ್ರೀ ವೀರ ನಾರಾಯಣನ ದಿವ್ಯ ಸನ್ನಿಧಿ ಕುಮಾರವ್ಯಾಸನ ಸಾಹಿತ್ಯ ಸೃಷ್ಟಿ, ಪಂಚಾಕ್ಷರಿ ಪುಟ್ಟರಾಜ ಗವಾಯಿಗಳ ಸಂಗೀತ

---

೩. ಜಿಲ್ಲಾ ಅಭಿವೃದ್ಧಿ ಅಧ್ಯಯನ-ಗದಗ ಜಿಲ್ಲೆ, ಪು. ೨೭.

ಸೌರಭ, ಡಾ. ಸಿದ್ಧಲಿಂಗ ಮಹಾಸ್ವಾಮಿಗಳ ವಿದ್ಯಾ ವಿಕಾಸ ಇವೆಲ್ಲ ಸರಸ್ವತಿಯ ನೆಲೆವಿಡಾದ ಗದುಗೀನ ಕೀರ್ತಿಗೆ ಕಿರೀಟಪ್ರಾಯವಾಗಿವೆ. ಜೈನ ಕೇಂದ್ರ ಮುಳಗುಂದ, ಶಿಲ್ಪಕಲಾ ಮುಕುಟ ಮಣಿಯಾದ ಲಕ್ಕುಂಡಿ, ಸಹಕಾರಿ ರಂಗದ ಕಾಶಿಯಾದ ಕಣಗಿನಹಾಳ, ಪ್ರಾಚೀನ ಕಾಲದ ಮಹಾ ಅಗ್ರಹಾರವಾಗಿದ್ದ ಕೋಟುಮಚಗಿ ಮುಂತಾದ ಗ್ರಾಮಗಳ ಹಿರಿಮೆ ಗದುಗಿನ ಕೀರ್ತಿಗೆ ಮುತ್ತು ಪೋಣಿಸಿವೆ. ಇವೆಲ್ಲವುಗಳಿಂದಾಗಿ ಗದಗ ತಾಲೂಕು ಕರ್ನಾಟಕದಲ್ಲಿಯೇ ಪ್ರಮುಖ ಸಾಂಸ್ಕೃತಿಕ ಕೇಂದ್ರವಾಗಿ ರೂಪುಗೊಂಡಿದೆ.

ಗದಗ ಐತಿಹಾಸಿಕವಾಗಿಯೂ ವಿಶೇಷ ಮಹತ್ವವನ್ನು ಪಡೆದಿದೆ. ಗದಗ ತಾಲೂಕಿನ ಬೆನಕನಕೊಪ್ಪ, ಮಲಪ್ರಭಾ ಕೊಳ್ಳದ ದಂಡೆಯಲ್ಲಿದ್ದು ನೂತನ ಶಿಲಾಯುಗದ ಪ್ರಮುಖ ನೆಲೆಯಾಗಿದೆ. ಕೊಲ್ಲೂರು ಗ್ರಾಮವು ಇತಿಹಾಸ ಆರಂಭ ಯುಗದ (ಶಿಲಾಯುಗ) ಪ್ರಮುಖ ನೆಲೆಯಾಗಿದ್ದು ಇಲ್ಲಿ ಕೆಂಪು ಲೇಪನದ ಬಿಳಿವರ್ಣದ ಚಿತ್ರಿತ ಮಡಕೆಯ ಭಾಗ ದೊರತಿದೆ. ಕೊಪ್ಪಳದಲ್ಲಿ ದೊರೆತ ಅಶೋಕನ ಶಾಸನಗಳಿಂದ ನರಗುಂದ ತಾಲೂಕಿನ ವಾಸನದಲ್ಲಿ ದೊರೆತ ವಶಿಷ್ಟ ಪುತ್ರ ಪುಳಮಯಿ ಶಾಸನಗಳಿಂದ ಗದಗ ಭಾಗವು ಅವರ ಆಳ್ವಿಕೆಯಲ್ಲಿತ್ತೆಂದು ಹೇಳಬಹುದಾಗಿದೆ. ಬದಾಮಿ ಚಾಲುಕ್ಯರ ಉದಯದವರೆಗೂ ಗದಗ ಹಾಗೂ ಅದರ ಸುತ್ತಮುತ್ತಲಿನ ಪ್ರದೇಶಗಳು ಬನವಾಸಿ ಕದಂಬರ ಮೇರೆಗಳಾಗಿದ್ದವು. ಬದಾಮಿ ಚಾಲೂಕ್ಯರ ಕಾಲದಿಂದಲೂ ವಿಜಯನಗರದವರೆಗೆ ಗದಗ ಅಂದಿನ ಪ್ರಮುಖ ಆಡಳಿತ ಕೇಂದ್ರವಾಗಿದ್ದ "ಬೆಲವೊಲ-೩೦೦"ರ ಪ್ರಮುಖ ಭಾಗವಾಗಿತ್ತೆಂದು ಹೇಳಬಹುದು. ಕಲ್ಯಾಣದ ಚಾಲುಕ್ಯರ ಕಾಲ (೯೭೩ರಿಂದ ೧೧೮೯)ದಲ್ಲಿ ತೈಲಪ ಅರಸನ ಕಾಲದಲ್ಲಿ ಶೋಭರಸ ಬೆಲವೊಲ-೩೦೦ರ ಅಧಿಕಾರಿಯಾಗಿ ಕಾರ್ಯ ನಿರ್ವಹಿಸುತ್ತಿದ್ದನೆಂದೂ ಆಗ ಗದಗ ೭೨ ಮಹಾಜನರಿರುವ ಮಹಾ ಅಗ್ರಹಾರವಾಗಿತ್ತು. ನಂತರ ಬಂದ ೬ನೆಯ ವಿಕ್ರಮಾದಿತ್ಯನ ಕಾಲದಲ್ಲಿ ದಾನಚಿಂತಾಮಣಿ ಅತ್ತಿಮಬ್ಬೆ ಲಕ್ಕುಂಡಿಯಲ್ಲಿ ಬ್ರಹ್ಮ ಜಿನಾಲಯವನ್ನು ನಿರ್ಮಿಸಿದಳು. ಇವನ ಸಹೋದರನಾದ ಜಯಸಿಂಹ ಬೆಳವೊಲ-೩೦೦, ಪುಲಿಗೇರಿ-೩೦೦ರ ಮಾಂಡಲಿಕನಾಗಿ ರಾಜ್ಯಭಾರ ಮಾಡುತ್ತಿದ್ದಾನೆಂದು ತೋರುತ್ತದೆ. ಕಲಚೂರಿಗಳ ಕಾಲದಲ್ಲಿ ಮಹಾಪ್ರಧಾನ ಕೇಶವಯ್ಯ ನರಯಂಗತ-೧೨ (ನರೇಗಲ್) ಗದಗ ಭಾಗಗಳನ್ನು ಆಳುತ್ತಿದ್ದನೆಂದು ತೋರುತ್ತದೆ. ೧೨ನೇ ಶತಮಾನದ ಅಂತ್ಯ ಭಾಗದಲ್ಲಿ ಗದಗ ಪ್ರದೇಶವು ಯಾದವರ ಹಾಗೂ ಹೊಯ್ಸಳರ ಯುದ್ಧಭೂಮಿಯಾಗಿ ಮಾರ್ಪಟ್ಟಿತು. ಕ್ರಿ.ಶ. ೧೧೯೦ರ ಸೊರಟೂರು ಶಾಸನವು ಇದನ್ನು "ಸೊರಟೂರ ಕಾಳಗ" ಎಂದು ಉಲ್ಲೇಖಿಸುತ್ತದೆ.[೪]

ಹಿಂದು ಧರ್ಮದ ರಕ್ಷಣೆಗಾಗಿ ತಲೆಯೆತ್ತಿದ ವಿಜಯನಗರ ಸಾಮ್ರಾಜ್ಯದಲ್ಲಿ ಗದಗ ಪ್ರದೇಶವು 'ಗದಗ ದೇಶ" ಎಂಬ ಆಡಳಿತ ವಿಭಾಗವಾಗಿ ಪ್ರಸಿದ್ಧಿ ಹೊಂದಿತ್ತು. ಕ್ರಿ.ಶ. ೧೬೭೩ರ ಹೊತ್ತಿಗೆ ಇದು ಬಂಕಾಪುರ ವಿಭಾಗದ ಒಂದು ಮುಖ್ಯವಾದ ಜಿಲ್ಲೆಯಾಗಿರುವುದ ಕಂಡು ಬರುತ್ತದೆ. ನಂತರ ವಿಜಾಪುರದ ಆದಿಲ್‌ಶಾಹಿ ಮನೆತನದ ಆಡಳಿತಕ್ಕೆ ಒಳಗಾಗಿತ್ತು. ಅಬ್ದುಲ್ ಕಾಸೀಂಖಾನನು ಅದರ ಆಡಳಿತಕ್ಕೆ ಅಧಿಕಾರಿಯಾಗಿದ್ದನು. ೧೮೪೮ರಲ್ಲಿ ವೆಲ್ಲೆಸ್ಲಿಯ ಸಾಮ್ರಾಜ್ಯಶಾಹಿ ನೀತಿಯಿಂದ ಬ್ರಿಟಿಷರ ಆಳ್ವಿಕೆಗೆ ಒಳಪಟ್ಟಿತು.

೪. ಕ್ರಿ.ಶ. ೧೧೯೦ರ ಸೊರಟೂರು ಶಾಸನ.

ಬ್ರಿಟಿಷರ ಆಳ್ವಿಕೆಯಲ್ಲಿ ಗದಗು ಸ್ವಾತಂತ್ರ್ಯ ಹೋರಾಟ ಹಾಗೂ ಏಕೀಕರಣ ಚಳುವಳಿಯಲ್ಲಿಯೂ ಮಹತ್ವದ ಪಾತ್ರವಹಿಸಿತು. ೧೯೧೬ರಲ್ಲಿ ಬಾಲಗಂಗಾಧರ ತಿಲಕರು ೧೯೨೧ರಲ್ಲಿ ಮಹಾತ್ಮ ಗಾಂಧೀಜಿಯವರು ೧೯೨೮ರಲ್ಲಿ ನೆಹರೂರವರು ಗದಗುಗೆ ಭೇಟಿ ನೀಡಿ ಸ್ವತಂತ್ರದ ಕಿಚ್ಚು ಹಚ್ಚಿದ್ದರು. ೧೯೪೬ರಲ್ಲಿ ರೂಪುಗೊಂಡ ಕರ್ನಾಟಕ ಏಕೀಕರಣ ಸಮಿತಿಯ ಕಾರ್ಯದರ್ಶಿಯಾಗಿ ಅಂದಾನಪ್ಪ ದೊಡ್ಡಮೇಟಿ ಆಯ್ಕೆಯಾದರು. ೧೯೫೬ರಲ್ಲಿ ಕರ್ನಾಟಕ ಏಕೀಕರಣಗೊಂಡಿತು. ಭಾರತ ಸ್ವಾತಂತ್ರ್ಯದ ಸುವರ್ಣ ಮಹೋತ್ಸವದ ಸಂದರ್ಭದಲ್ಲಿ ೨೪-೦೮-೧೯೯೭ರಿಂದ ನೂತನ ಗದಗ ಜಿಲ್ಲೆ ಅಸ್ತಿತ್ವಕ್ಕೆ ಬಂದಿತು. ಗದಗ ಒಂದು ಜಿಲ್ಲಾ ಕೇಂದ್ರವಾಗಿದೆ. ಗದಗ-ಬೆಟಗೇರಿ ಎಂಬ ಎರಡು ಊರುಗಳಿಂದ ಕೂಡಿದ ಸಂಯುಕ್ತ ಪುರಸಭೆಯಿದೆ. ಗದಗದಂತೆ ಬೆಟಗೇರಿಯೂ ಪುರಾತನ ಸ್ಥಳವಾಗಿದೆ. ಸದ್ಯ ಗದಗ ತಾಲೂಕು ೬೧ ಗ್ರಾಮಗಳನ್ನೊಳಗೊಂಡಿದೆ.

ರೋಣವು ಪ್ರಾಚೀನ ಕಾಲದಲ್ಲಿ ಪುಲಿಗೇರಿ ೩೦೦ಕ್ಕೆ ಸೇರಿದ್ದು ೧೦೪ ಮಹಾಜನರನ್ನು ಒಳಗೊಂಡಿದ್ದ ಅಗ್ರಹಾರವಾಗಿತ್ತು. ಊರಿನ ಪ್ರಾಚೀನ ಹೆಸರು ದ್ರೋಣಪುರ, ಪ್ರಾಚೀನ ಶಿಲಾಶಾಸನಗಳು ದೊರೆತ ಈ ತಾಲೂಕಿನಲ್ಲಿ ಭಾವೈಕ್ಯತೆಯನ್ನು ಸಾರುವ ದೇವಾಲಯಗಳಿದ್ದು ಸೂಡಿ ಗ್ರಾಮದಲ್ಲಿ ನಾಣ್ಯಗಳನ್ನು ಮುದ್ರಿಸುವ ಟಂಕಸಾಲೆ ಇದ್ದದ್ದು ಶಾಸನಗಳಿಂದ ತಿಳಿದು ಬರುತ್ತದೆ. ಇಂದಿನ ರೋಣ ತಾಲೂಕು ಹಿಂದೆ ಬದಾಮಿ ಚಾಲುಕ್ಯರು, ರಾಷ್ಟ್ರಕೂಟರ, ಕಲ್ಯಾಣದ ಚಾಲುಕ್ಯರು, ಕಲಚೂರಿಗಳ, ಯಾದವರ, ಹೊಯ್ಸಳರ, ವಿಜಯನಗರದ ಅರಸರ ಆಡಳಿತದಲ್ಲಿತ್ತು. ೬ನೇ ವಿಕ್ರಮಾದಿತ್ಯನ ತಂಗಿ ಇಮ್ಮಡಿ ಜಯಸಿಂಹನ ಅಕ್ಕ, ರಣಭೈರವಿ ಎಂಬ ಬಿರುದನ್ನು ಹೊಂದಿದ ಅಕ್ಕದೇವಿ ಕ್ರಿ.ಶ. ೧೦೫೦ರಲ್ಲಿ ಕಿಸುಕಾಡು ೭೦, ತೂರಗೆರೆ೬, ಮಾಸವಾಡಿ ೧೪೦ ಪ್ರದೇಶವನ್ನು ಆಳುತ್ತಿದ್ದಳೆಂದು ಶಾಸನಗಳಿಂದ ತಿಳಿದು ಬಂದಿದೆ. ಈ ರೀತಿಯಾಗಿ ಐತಿಹಾಸಿಕ ಮಹತ್ವ ಪಡೆದ ರೋಣವು ಗದಗ ಜಿಲ್ಲೆಯಲ್ಲಿಯೇ ಹೆಚ್ಚು ಗ್ರಾಮಗಳನ್ನು ಹೊಂದಿದೆ. ಒಟ್ಟು ೯೪ ಹಳ್ಳಿಗಳನ್ನೊಳಗೊಂಡಿದೆ. ನರೇಗಲ್ಲ, ರೋಣ, ಗಜೇಂದ್ರಗಡದಲ್ಲಿ ಪುರಸಭೆಗಳು ಕಾರ್ಯನಿರ್ವಹಿಸುತ್ತಿವೆ.

ಡಾ. ಎಂ. ಎಂ. ಕಲ್ಬುರ್ಗಿಯವರು ಮುಂಡರ+ಕೆಯ್=ಮುಂಡರಗೆಯೂ=ಮುಂಡರಗಿ" ಆಯಿತೆಂದು ಅರ್ಥೈಸಿದ್ದಾರೆ. ಇದು ಜನಾಂಗವಾಚಿ ಎಂದು ಗುರುತಿಸಿದ್ದಾರೆ. ಮುಂಡರಗಿಯ ಪ್ರಾಚೀನ ಹೆಸರು ಮೃಡಗಿರಿ ಮುಂದೆ ಇದೆ 'ಮುಂಡರಗಿ'ಯಾಗಿದೆ. ಈ ತಾಲೂಕಿನಲ್ಲಿ ಐತಿಹಾಸಿಕ ಪ್ರಸಿದ್ಧಿಯನ್ನು ಪಡೆದ ಗ್ರಾಮಗಳಿವೆ. ಚಾರಿತ್ರಿಕ, ಭೌಗೋಳಿಕ, ಧಾರ್ಮಿಕ, ಸಾಂಸ್ಕೃತಿಕ ಮಹತ್ವವನ್ನು ಪಡೆದ ಈ ತಾಲೂಕಿನ ಕಪ್ಪತಗುಡ್ಡದಲ್ಲಿನ ರಾಜ್ಯದ ಮೊಟ್ಟಮೊದಲ ಪವನ ಶಕ್ತಿ ಯೋಜನೆಯ ರಾಜ್ಯದ ವಿದ್ಯುತ್ ಉತ್ಪಾದನೆಯಲ್ಲಿ ಇತಿಹಾಸದಲ್ಲಿ ಮೈಲುಗಲ್ಲಾಗಿದೆ. ಸ್ವಾತಂತ್ರ್ಯ ಸಂಗ್ರಾಮದಲ್ಲಿ ಹೋರಾಡಿದ ಭೀಮರಾಯನಿಂದಾಗಿ ಈ ಊರು ಪ್ರಸಿದ್ಧವಾಗಿದೆ. ಇಂದು ೫೩ ಗ್ರಾಮಗಳನ್ನೊಳಗೊಂಡ ಮುಂಡರಗಿ ತಾಲೂಕು ಪ್ರಾಚೀನ ಹಿನ್ನೆಲೆ. ಸಾಂಸ್ಕೃತಿಕ, ಇತಿಹಾಸ, ಧಾರ್ಮಿಕ ಪರಂಪರೆ, ರಾಜಕೀಯ ಸಂಬಂಧಗಳಿದ್ದುದರ ಬಗೆಗೆ ಚರಿತ್ರೆ ಸಾಕ್ಷಿಯಾಗಿದೆ. ಈ ತಾಲೂಕಿನಲ್ಲಿ

ಬರುವ ಗ್ರಾಮಗಳು ಪ್ರಾಚೀನ ಕಾಲದಲ್ಲಿ ರಾಜಧಾನಿಗಳಾಗಿ, ಅಗ್ರಹಾರಗಳಾಗಿ, ಧಾರ್ಮಿಕ ಕೇಂದ್ರಗಳಾಗಿ ಶಿಲ್ಪಕಲೆಯ ಕಣಜಗಳಾಗಿ ಪುಣ್ಯಕ್ಷೇತ್ರಗಳಾಗಿ ಮರೆದಿರುವದಕ್ಕೆ ಚರಿತ್ರೆಯಲ್ಲಿ ಸಾಕ್ಷಾಧಾರಗಳಿವೆ.[೫]

ಐತಿಹಾಸಿಕ ಪರಂಪರೆಯನ್ನು ಹೊಂದಿದ ಮತ್ತು ಹಿಂದೂ-ಮುಸ್ಲಿಂ ಭಾವೈಕ್ಯತೆಗೆ ಹೆಸರಾದ ನಾಡು ಶಿರಹಟ್ಟಿ ತಾಲೂಕು. "ಶಿರಹಪುರ" ಎಂದು ಇತಿಹಾಸದಲ್ಲಿ ದಾಖಲಾಗಿರುವ ಶಿರಹಟ್ಟಿ ವಿಜಾಪೂರದ ಆದಿಲ್‌ಶಾಹಿ ಸುಲ್ತಾನರ ಕಾಲದಲ್ಲಿ ಲಕ್ಷ್ಮೇಶ್ವರ ಉಪವಿಭಾಗದ ಒಂದು ಭಾಗವಾಗಿತ್ತು. ಕೆಲಕಾಲ ಅಂಕುಶಖಾನ್‌ರ ಜಹಗೀರಾಗಿ ಇದ್ದ ಶಿರಹಟ್ಟಿಯನ್ನು ಲಕ್ಷ್ಮೇಶ್ವರದ ಜೊತೆಗೆ ಖಾನಗೌಡ ಎಂಬ ದೇಸಾಯಿ ೧೬೦೭ರಲ್ಲಿ ದೇಶಗತಿಯಾಗಿ ಪಡೆದನು. ನಂತರ ಪೇಶ್ವೆಗಳು ಹಾಗೂ ಸಾಂಗ್ಲಿ ಸಂಸ್ಥಾನಿಕರು ಶಿರಹಟ್ಟಿಯನ್ನು ತಮ್ಮ ವಶದಲ್ಲಿ ಇಟ್ಟುಕೊಂಡಿದ್ದರು.

ಪಂಪನ ಕಾವ್ಯದಲ್ಲಿ ಬರುವ 'ತಿರುಳುಗನ್ನಡ ನಾಡು' ಎಂದು ಉಲ್ಲೇಖಿತವಾಗುವ ಇಂದಿನ ಲಕ್ಷ್ಮೇಶ್ವರ ಧಾರ್ಮಿಕ ಕೇಂದ್ರವಾಗಿ ಪುಲಿಗೇರಿ-೩೦೦ರ ರಾಜಧಾನಿಯಾಗಿ ಶಿರಹಟ್ಟಿ ತಾಲೂಕಿನ ದೊಡ್ಡ ಪಟ್ಟಣವಾಗಿ ಗದಗ ಜಿಲ್ಲೆಯಲ್ಲಿ ಗದಗ ನಗರವನ್ನು ಹೊರತುಪಡಿಸಿ ಎರಡನೇ ದೊಡ್ಡನಗರ ಎಂದು ಗುರುತಿಸಿಕೊಂಡಿದೆ. ಸದ್ಯ ಶಿರಹಟ್ಟಿಯ "ಶಿಥಿಲವಾದ ಕೋಟೆ, ಅವಲಿಂಗಮ್ಮನ ಮಠ ಹಾಗೂ ಫಕ್ಕೀರ ಸ್ವಾಮಿಗಳ ಮಠಗಳು ನೋಡತಕ್ಕ ಸ್ಥಳಗಳು. ಶಿರಹಟ್ಟಿ ತಾಲೂಕಿನಲ್ಲಿ ೬೨ ಗ್ರಾಮಗಳಿವೆ.

ಕರ್ನಾಟಕದ ಗಂಡುಮೆಟ್ಟಿನ ನಾಡು, ಹತ್ತಿಯ ಕಣಜ, ಬಂಡಾಯದ ಭೂಮಿ, ಸಾಹಿತ್ಯಿಕ ಸಾಂಸ್ಕೃತಿಕ ಸೊಗಡನ್ನು ಹೊರಹೊಮ್ಮಿಸಿದ ಈ ನರುಗಂಪಿನ ಪ್ರದೇಶಕ್ಕೆ ಕರ್ನಾಟಕ ಐತಿಹಾಸಿಕ ಪರಂಪರೆಯಲ್ಲಿ ಒಂದು ವಿಶಿಷ್ಟವಾದ ಸ್ಥಾನವಿದೆ ಹಿಂದೆ ಇದನ್ನು 'ಮಹಾಂತಗಡ' ಎಂದು ಕರೆಯುತ್ತಿದ್ದರು. ಕುಂತಳ ಪ್ರದೇಶಕ್ಕೆ ತಿಲಕ ಪ್ರಾಯವಾದ "ಬೆಳ್ವೊಲ-೩೦೦" ನಾಡಿನ ಪ್ರಸಿದ್ಧವಾದ ೧೮ ಗ್ರಹಾರಗಳಲ್ಲಿ ಒಂದಾದ ನರಗುಂದ ಸೌಂದರ್ಯದ ಬಿಡಾಗಿತ್ತೆಂದು ಅನೇಕ ಶಾಸನಗಳು ಕವಿಗಳು ಮನತುಂಬಿ ವರ್ಣಿಸಿದ್ದುಂಟು.[೬]

ಗದಗ ಜಿಲ್ಲೆಯಲ್ಲಿಯೇ ಅತ್ಯಂತ ಚಿಕ್ಕ ತಾಲೂಕಾಗಿರುವ ನರಗುಂದ ೩೯ ಗ್ರಾಮಗಳನ್ನೊಳಗೊಂಡಿದೆ. ೧೯೮೦ರ ರೈತ ಚಳುವಳಿಯಿಂದಾಗಿ ಪ್ರಸಿದ್ಧಿ ಹೊಂದಿರುವುದಲ್ಲದೆ ಆಂಗ್ಲರ ವಿರುದ್ಧ ಸಿಡಿದೆದ್ದು ಬಾಬಾ ಸಾಹೇಬರು ಸ್ವಾತಂತ್ರ್ಯ ಕಹಳೆ ಊದಿದ ಕರ್ಮಭೂಮಿ.

ಹಿಗೆ ಗದಗ ಪರಿಸರವು ಚಾರಿತ್ರಿಕವಾದ ಮಹತ್ವವನ್ನು ಪಡೆದಿದ್ದು ಇಂದು ಪರಿಣಾಮಕಾರಿಯಾದ ಬದಲಾವಣೆಗಳತ್ತ ಮುನ್ನುಗ್ಗುತ್ತಿದೆ. ಗದಗ ಪರಿಸರವು ಐತಿಹಾಸಿಕ ಪರಂಪರೆ ದೇಶದ ಪ್ರಗತಿಶೀಲ ನೆಲೆಗೆ ಉನ್ನತ ಮಟ್ಟದ ಕಾಣಿಕೆ ನೀಡಿದೆ. "ಹೊಸ ಚಿಗುರು ಹಳೇ ಬೇರೂ ಕೂಡಿರಲು ಮರಸೊಬಗು" ಎಂಬಂತೆ ಇಂದು ಕೂಡಾ ಹಳೆಯದರ ಸ್ಥಳದಲ್ಲಿ ಹೊಸ ಹೊಸ ಟಿಸಿಲುಗಳು ಬೆಳೆಯುತ್ತಿವೆ, ಚಿಗುರುತ್ತಿವೆ. ಅವು ಕುಡಿಯೊಡೆದು ಸಾವಿರಾರು ಹೂಗಳು ಅರಳುತ್ತವೆ. ಫಲಗಳನ್ನು ನೀಡುತ್ತಿವೆ. ಹೀಗೆ ನಿರಂತರವಾಗಿ ಬೆಳೆದು ಬಂದ ಈ ಬೃಹತ್

---

೫. ಕ್ರಿ.ಶ. ೧೧೨೪ರ ಡಂಬಳ ಶಾಸನ, ಮುಂಡರಗಿ

೬. ಕ್ರಿ.ಶ. ೮೬೦ರ ಕೊಣ್ಣೂರು ಶಾಸನ.

ನಾಡಿನ ಮಹಾವೃಕ್ಷಕ್ಕೆ ಟಿಸಿಲೊಂದನ್ನು ಸಮೀಕ್ಷಿಸುವುದೇ ಈ ಗದಗ ಪರಿಸರದ ಐತಿಹಾಸಿಕ ದರ್ಶನ.

ಗದಗ ಜಿಲ್ಲೆ ಕರ್ನಾಟಕ ರಾಜ್ಯದ ಉತ್ತರಕ್ಕಿದ್ದು ಉತ್ತರ ಅಕ್ಷಾಂಶ ೧೫,೧೫ ಪೂರ್ವರೇಖಾಂಶ ೭೫-೨೦ ಮತ್ತು ೭೫-೪೭ರ ಮಧ್ಯದಲ್ಲಿದೆ. ಗಡಿ ಜಿಲ್ಲೆಗಳಾಗಿ ಪೂರ್ವಕ್ಕೆ ಕೊಪ್ಪಳ, ಪಶ್ಚಿಮಕ್ಕೆ ಧಾರವಾಡ, ಉತ್ತರಕ್ಕೆ ಬಾಗಲಕೋಟೆ ಮತ್ತು ದಕ್ಷಿಣಕ್ಕೆ ಹಾವೇರಿ, ಬಳ್ಳಾರಿ ಜಿಲ್ಲೆಗಳಿವೆ. ಗದಗ ಜಿಲ್ಲೆಯ ಒಟ್ಟು ವಿಸ್ತೀರ್ಣ ೪೬೬೬ ಚ.ಕಿ. ಇದೆ. ಐದು ತಾಲೂಕು ಹೊಂದಿರುವ ಗದಗ ಜಿಲ್ಲೆ ತಾಲೂಕಾವಾರು ವಿಸ್ತೀರ್ಣತೆ ಇಂತಿದೆ. ಗದಗ-೧೧೯೭ ಚ.ಕಿ.ಮೀ., ಶಿರಹಟ್ಟಿ-೯೪೯ ಚ.ಕಿ.ಮೀ., ಮುಂಡರಗಿ-೮೮೪ ಚ.ಕಿ.ಮೀ., ನರಗುಂದ-೪೩೫ ಚ.ಕಿ.ಮೀ. ಹಾಗೂ ರೋಣ-೧೨೯೧ ಚ.ಕಿ.ಮೀ. ವಿಸ್ತೀರ್ಣ ಹೊಂದಿವೆ.

ಇದು ಒಂದು ಒಳನಾಡು ಬಯಲು ಪ್ರದೇಶದ ಜಿಲ್ಲೆ. ಉತ್ತರದ ಗಡಿಯಲ್ಲಿ ಮಲಪ್ರಭೆ, ದಕ್ಷಿಣದ ಗಡಿಯಲ್ಲಿ ತುಂಗಭದ್ರೆ ನದಿಗಳು ಹರಿಯುತ್ತವೆ. ಇದಲ್ಲದೆ ಜಿಲ್ಲೆಯಲ್ಲಿ ಹರಿದಿರುವ ಬೆಣ್ಣೆಹಳ್ಳ ರೋಣ ತಾಲೂಕಿನಲ್ಲಿ ಮಲಪ್ರಭಾ ನದಿಯನ್ನು ಸೇರುತ್ತದೆ. ಜಿಲ್ಲೆಯಾದ್ಯಂತ ಕಪ್ಪುಮಣ್ಣು ಅಲ್ಲಲ್ಲಿ ಮಸಾರಿ ಕೆಂಪು ಭೂಮಿಯೂ ಇದೆ. ಉಷ್ಣಾಂಶದಿಂದ ಕೂಡಿದ ಹಿತಕರ ಮತ್ತು ಆರೋಗ್ಯಕರ ಹವಾಮಾನವನ್ನು ಜಿಲ್ಲೆಯೊಳಗೊಂಡಿದೆ. ಸರ್ವಧರ್ಮಗಳ ಸಮನ್ವಯ ಬೀಡು ಗದಗ ಪರಿಸರ ಪ್ರಾಚೀನ ಕಾಲದಿಂದಲೂ ವಿವಿಧ ಮತ, ಧರ್ಮ ಪಂಥಗಳ ನೆಲೆವೀಡಾದ ಗದಗು ಪ್ರದೇಶ ಹಿಂದು-ಮುಸ್ಲಿಂ ಬಾಂಧವರು ಸದಸ್ಯರಾಗಿರುವ ಪಂಚರ ಟ್ರಸ್ಟ್ ಇದೆ. ಡಂಬಳ ಪ್ರಾಚೀನ ಕಾಲದಲ್ಲಿ ಬೌದ್ಧ ತಾರ್‌ವಿಹಾರ ಕೇಂದ್ರವಾಗಿತ್ತು. ಮುಳಗುಂದ, ಲಕ್ಕುಂಡಿ ಹಾಗೂ ಲಕ್ಷ್ಮೇಶ್ವರ ಪ್ರಮುಖ ಜೈನ ಕೇಂದ್ರಗಳಾಗಿದ್ದವು. ಶೈವ, ವೈಷ್ಣವ ಪಂಥಗಳ ಕೇಂದ್ರವಾಗಿದ್ದು ಮಹಾಜನರು ನೆಲೆಸಿರುವ ಅಗ್ರಹಾರವಾಗಿತ್ತು. ಗದುಗಿನ ಪರಿಸರವು ಮಧ್ಯಯುಗದಲ್ಲಿ ಮುಸ್ಲೀಂ ಆಧುನಿಕ ಯುಗದಲ್ಲಿ ಕ್ರಿಶ್ಚಿಯನ್ ಧರ್ಮಗಳು ಗದುಗಿನ ಪರಿಸರದಲ್ಲಿ ಹಾಸುಹೊಕ್ಕಾಗಿ ಅನೇಕ ಸಾಂಸ್ಕೃತಿಕ ಕೊಡುಗೆಗಳನ್ನು ನೀಡಿದೆ. ಹೀಗೆ ಗದಗ ಪರಿಸರವು ಬೌದ್ಧಧರ್ಮ, ಜಿನಧರ್ಮ, ಶೈವಧರ್ಮ, ವೈಷ್ಣವ ಧರ್ಮ, ಇಸ್ಲಾಂ ಧರ್ಮ, ಕ್ರೈಸ್ತಧರ್ಮಗಳು ಪ್ರಾಚೀನತೆಯಿಂದ ಇಂದಿನವರೆಗೂ ಬೆಳೆದು ಜನರು ಸೌಹಾರ್ದತೆಯಿಂದ ಬಾಳಿ ಈ ಭಾಗದ ಜನರ ನಂಬಿಕೆ ಆಚರಣೆ, ಧಾರ್ಮಿಕ ವಿಧಿ ವಿಧಾನ ಸಂಸ್ಕೃತಿ ಪರಂಪರೆಗೆ ಅನನ್ಯ ಕೊಡುಗೆಗಳನ್ನು ನೀಡಿದ್ದಾರೆ. ಶಿರಹಟ್ಟಿಯ ಫಕೀರೇಶ್ವರಮಠ, ವರವಿಯ ಮೌನೇಶ್ವರ ದೇವಾಲಯಗಳು, ಮುಂಡರಗಿಯ ಅನ್ನದಾನೇಶ್ವರ ಮಠ, ಬಳಗಾನೂರಿನ ಚಿಕ್ಕೇನಕೊಪ್ಪ ಶರಣರ ಮಠ, ಗದಗಿನ ತೋಂಟದಾರ್ಯ ಮಠಗಳು ಹಿಂದೂ, ಮುಸ್ಲೀಂ ಭಾವೈಕ್ಯತೆಯ ಕೇಂದ್ರಗಳಾಗಿವೆ. ಗದುಗಿನ ಜಗದ್ಗುರು ಡಾ. ತೋಂಟದ ಸಿದ್ಧಲಿಂಗ ಮಹಾಸ್ವಾಮಿಗಳು ರಾಷ್ಟ್ರೀಯ ಕೋಮು ಸೌಹಾರ್ದತೆ ಪ್ರಶಸ್ತಿ ಪಡೆದಿದ್ದಾರೆ. ಹೀಗೆ ಗದಗ ಪ್ರದೇಶ, "ಸರ್ವಧರ್ಮಗಳ ಸಮನ್ವಯ ನಾಡಾಗಿದೆ.[೭]

ಅಜ್ಞಾನ, ಅಂಧಕಾರ, ಮೂಢನಂಬಿಕೆ, ಕಂದಾಚಾರಗಳೆಂಬ ಕೂಪದಲ್ಲಿ ಬಿದ್ದು ಹೊರಳಾಡುವ ಪಾಮರರನ್ನು ಪುನೀತರಾಗಿಸಲು ಈ ನಾಡಿನಲ್ಲಿ ಅನೇಕ ಆಧ್ಯಾತ್ಮ ಸೂರ್ಯರು ಉದಯಿಸಿ ಕತ್ತಲೆಯನ್ನು ಕಳೆದಿದ್ದಾರೆ.

---

೭. ಗದಗ ಜಿಲ್ಲಾ ಅಭಿವೃದ್ಧಿ ಅಧ್ಯಯನ, ಹಂಪಿ ವಿ.ವಿ. ೧೬.

ಗದಗ ಪರಿಸರದಲ್ಲಿ ಸಮಾಜದ ಬೇರೆ ಬೇರೆ ಜನಾಂಗಗಳ ಅಭಿವೃದ್ಧಿ, ರಕ್ಷಣೆಗಳ ಜವಾಬ್ದಾರಿಯನ್ನು ಹೊತ್ತ ಹಲವು ಸಂಘಗಳಿದ್ದವೆಂದು ತಿಳಿಯುತ್ತದೆ. ಅವುಗಳಲ್ಲಿ ಉಗುರು ಮುನ್ನೂರ್ವರು ಸಂಘದ ಸದಸ್ಯರು ಸಿಂಹ ಪರಾಕ್ರಮಿಗಳಾಗಿದ್ದರೆಂದು ಹೂಸೂರು ಶಾಸನ ಹೇಳುತ್ತದೆ. ತಲ್ಲಗರಯ್ವತ್ತಾಕ್ಕಲು, ಸಾಲೇಶರಯ್ಯದಿಂಬರು, ಐವತ್ತುಕಾಲು ಕೂಣಿ ಸಾಸಿರ್ವರು, ಬಂಟ ಸಾಸಿರ್ವರು ಹೀಗೆ ಮೊದಲಾದ ಸಾಮಾಜಿಕ ಸಂಘಗಳು ಜಿನ ಸೇವೆಯಲ್ಲಿ ತಮ್ಮನ್ನು ತೊಡಗಿಸಿಕೊಂಡಿದ್ದವು. ಹೀಗೆ ನಾಡು ಸಾಮರಸ್ಯ ಬಿಡು ಆಗಿ ಸಾಂಸ್ಕೃತಿಕ ಸಮೃದ್ಧಿಯ ನಾಡಾಗಿತ್ತೆಂದು ಹೇಳಬಹುದು. ಹೀಗೆ ಸಮಾಜದ ವಿವಿಧ ಧರ್ಮಗಳು ಸಂಘ ಸಂಸ್ಥೆಗಳನ್ನು ಹುಟ್ಟುಹಾಕಿ ಸಾಮಾಜಿಕ ಪ್ರಗತಿಯನ್ನುಂಟು ಮಾಡುತ್ತಿವೆ.

ಒಂದು ಪ್ರದೇಶದ ಆರ್ಥಿಕ ರಚನೆಯು ಮೂರು ವಲಯಗಳನ್ನು ಹೊಂದಿರುತ್ತವೆ. ಅವುಗಳನ್ನು ಪ್ರಾಥಮಿಕ ವಲಯ, ದ್ವಿತಿಯ ವಲಯ ಮತ್ತು ತೃತೀಯ ವಲಯಗಳೆಂದು ವರ್ಗಿಕರಿಸಲಾಗಿದೆ. ಗದಗ ಜಿಲ್ಲೆಯು ಆರ್ಥಿಕ ಅಭಿವೃದ್ಧಿಯನ್ನು ಈ ಮೂರು ವಲಯಗಳನ್ನು ಅವಲಂಬಿಸಿದೆ. ಆದರೆ ಈ ವಲಯಗಳಲ್ಲಿ ಉಂಟಾಗುವ ಏರಿಳಿತಗಳಿಂದ ಮಂದಗತಿಯಲ್ಲಿ ಅಭಿವೃದ್ಧಿ ಸಾಗುತ್ತಿದೆ.

ಒಂದು ದೇಶದ ಅಭಿವೃದ್ಧಿ ಮತ್ತು ಸುಭದ್ರತೆಗಳು ಅದರ ಹಣಕಾಸಿನ ವ್ಯವಸ್ಥೆಯನ್ನು ಅವಲಂಬಿಸಿರುತ್ತವೆ. ಕಲ್ಯಾಣ ಚಾಲುಕ್ಯರ ಅರ್ಥವ್ಯವಸ್ಥೆಯನ್ನು ತಿಳಿಯುವಲ್ಲಿ ಗದಗ ಪರಿಸರದ ಶಾಸನಗಳು ಆಕರಗಳಾಗುತ್ತವೆ.[೮] ತೆರಿಗೆಯ ಒಟ್ಟು ಪ್ರಮಾಣ, ತೆರಿಗೆ ಸಂಗ್ರಹಿಸುವ ರೀತಿ, ಅಂದಿನ ಆರ್ಥಿಕ ವ್ಯವಸ್ಥೆಯ ರೂಪುರೇಷೆಗಳು ನಾಣ್ಯವ್ಯವಸ್ಥೆ ಮೊದಲಾದವುಗಳನ್ನು ಇಲ್ಲಿಯ ಶಾಸನಗಳಿಂದ ತಿಳಿಯಬಹುದು. ನಾಣ್ಯಗಳು (ಗದ್ಯಣ, ಪೊನ್, ವೀಸ, ಹಾನ) ಅಳತೆಗಳು.

**ಉದ್ಯಮ ಸಂಘಗಳು :** ತೆಲ್ಲಿಗ ರೈವತ್ತೊಕ್ಕಾಲ, ಉಗುರ ಮುನ್ನೂರ್ವರು, ಐನೂರ ನಾಲ್ವರು, ಐಯ್ಯಾವೂಳ್ ಐನೂರ್ವರು, ನಖರರು, ಮುಂಮುರಿದಂಡ, ಎಂಟುಹಿಟ್ಟು, ವಡ್ಡ ವ್ಯವಹಾರಿ, ನಾನಾದೇಶಿ–ಎಬ್ಬಿಯನಾನಾದೇಶಿ, ಪದಿನಮವರುಸೆಟ್ಟಿಯರು.

ಗದಗ ಜಿಲ್ಲೆ ಐದು ವಿಧಾನಸಭಾ ಕ್ಷೇತ್ರಗಳನ್ನು ಹೊಂದಿದ್ದು, ನಗರಸಭೆ, ಪುರಸಭೆ, ಪಟ್ಟಣಪಂಚಾಯಿತಿ, ಪಂಚಾಯಿತಿ ಕ್ಷೇತ್ರ ವಿಂಗಡಣೆಯ ಮೂಲಕ ಆಡಳಿತ ವಿಕೇಂದ್ರಿಕರಣ ಮಾಡಲಾಗಿದೆ. ಇದರಿಂದ ಆಡಳಿತವನ್ನು ಸುಗಮವಾಗಿ ಸಾಗಿಸಿಕೊಂಡು ಹೋಗಲು ಸಹಾಯಕವಾಗಿದೆ. ಪ್ರಾಚೀನ್ ಕಾಲದಿಂದ ಇಂದಿನವರೆಗೆ ಗದಗ ಪರಿಸರದಲ್ಲಿ ಬೆಳೆದು ಬಂದಿರುವ ಆಡಳಿತ ವ್ಯವಸ್ಥೆ ಸುಧಾರಣೆಯ ಕಡೆ ವಾಲಿದೆ.

ಪ್ರಾಚೀನ ಕಾಲದಲ್ಲಿ ಅಗ್ರಹಾರ, ಬ್ರಹ್ಮಪುರಿ ಘಟಕಾ ಸ್ಥಾನಗಳು ವಿದ್ಯಾಕೇಂದ್ರಗಳಾಗಿದ್ದವು. ಮುಳಗುಂದ ನಾಡಿನ ಕುರ್ತಕೋಟಿ, ನೀಲಗುಂದ, ಎಳವತ್ತಿ ಗ್ರಾಮಗಳು ಅಗ್ರಹಾರಗಳಾಗಿದ್ದು ವಿದ್ಯಾ ಕೇಂದ್ರಗಳಾಗಿಯೂ

---

೮. ನಾಗಾವಿ ಶಾಸನದಲ್ಲಿ ಉಲ್ಲೇಖವಾಗಿದೆ ಮತ್ತು ಮುಳಗುಂದ ನಾಡು–ಒಂದು ಅಧ್ಯಯನ ಕೃತಿಯಲ್ಲಿ ಉಲ್ಲೇಖವಿದೆ.

ಕಾರ್ಯ ನಿರ್ವಹಿಸುತ್ತಿದ್ದವು. ಮಳಗುಂದದಲ್ಲಿ ಬ್ರಹ್ಮಪುರಿ ಇದ್ದಿತು. ಇವೆಲ್ಲವೂ ಆ ಕಾಲದಲ್ಲಿ ರಾಜರ ಉದಾರ ಪೋಷಣೆಯಲ್ಲಿ ಕಾರ್ಯ ನಿರ್ವಹಿಸುತ್ತಿದ್ದವೆಂದು ತಿಳಿಯುತ್ತದೆ. ಗದುಗಿನ ಸಮೀಪದ ನಾಗಾವಿ ವೇದಕಾಲದ ಒಂದು ಪ್ರಸಿದ್ಧ ವಿದ್ಯಾಕೇಂದ್ರವಾಗಿದ್ದಿತು.

ಗದಗ, ನಾಗಾವಿ, ಕೊಟಮಚಗಿ, ಸೂಡಿ, ಜಕ್ಕಲಿ, ನರೇಗಲ್ಲಗಳು ಪ್ರಮುಖ ವಿದ್ಯಾಕೇಂದ್ರಗಳಾಗಿದ್ದವು. ಕುರ್ತಕೋಟಿ, ನೀಲಗುಂದ, ಎಳವತ್ತಿ ಗ್ರಾಮಗಳು ಅಗ್ರಹಾರಗಳಾಗಿದ್ದವು. ವಿದ್ಯಾಕೇಂದ್ರಗಳಾಗಿಯೂ ಕಾರ್ಯ ನಿರ್ವಹಿಸುತ್ತಿದ್ದವು. ಮುಳಗುಂದದಲ್ಲಿ 'ಬ್ರಹ್ಮಪುರಿ' ಇದ್ದಿತು.[೯]

ಸೂಡಿಯ ಒಂದು ಶಾಸನ (ಕ್ರಿ.ಶ. ೧೦೫೪)ವು ಸೂಡಿ ನಾಡಿನ ಒಂದು ಸುಪ್ರಸಿದ್ಧ ವಿದ್ಯಾಕೇಂದ್ರವಾಗಿತ್ತೆಂದು ಅಲ್ಲಿ ವಿದ್ಯಾರ್ಥಿಗಳಿಗೆ ಎಂದರೆ ದೇಶದ ಬೇರೆ ಬೇರೆ ಭಾಗಗಳಿಂದ ಬಂದ ವಿದ್ಯಾರ್ಥಿಗಳಿಗೆ ವಿದ್ಯಾಭ್ಯಾಸ ನಡೆಯುತ್ತಿತ್ತೆಂದೂ ಹೇಳುತ್ತಾ ಅಲ್ಲಿಯ ಮುಖ್ಯಸ್ಥರಾದ ಸೋಮೇಶ್ವರ ಪಂಡಿತ ತನ್ನ ತಪೋವಿಖ್ಯಾತಿ, ವಿಮಲಚರಿತಖ್ಯಾತಿ, ವಿದ್ಯಾಚತುರಜ್ಯೋತಿ, ಅಖಿಲ ಸದ್ಗುಣಖ್ಯಾತಿ, ಮೊದಲಾದವುಗಳಿಂದ ಅನೇಕ ರಾಜರಿಂದ ಪೂಜಿತನಾಗಿದ್ದುದನ್ನು ತಿಳಿಸುತ್ತದೆ.

### ೨.೧. ಗದಗ ಪರಿಸರದ ಜೈನ ಪರಂಪರೆಯ ನೆಲೆ–ಹಿನ್ನೆಲೆ :

ಗದಗ ಪರಿಸರದಲ್ಲಿನ ಕೆಲವು ಸ್ಥಳಗಳು ಜೈನ ಪರಂಪರೆಯ ಪ್ರಮುಖ ನೆಲೆಗಳಾಗಿದ್ದು ಜೈನ ಧರ್ಮದ ತತ್ವಗಳನ್ನು ಪ್ರಚಾರಗೈದು ಉತ್ತರ ಕರ್ನಾಟಕದಲ್ಲಿ ಪ್ರಚಲಿತವಿದ್ದ ದಿಗಂಬರ ಯಾಪನೀಯ ಪಂಥದ ಗಣ ಗಚ್ಛಗಳು, ಸಂಘ ಸಂಸ್ಥೆಗಳು ಸ್ಥಾಪನೆಯಾಗಿ ಜನ ಸಾಮಾನ್ಯರ ನಂಬಿಕೆಗೆ ಪಾತ್ರವಾಗಿದ್ದವು. ಎಂಬುವುದನ್ನು ಈ ಕ್ಷೇತ್ರದಲ್ಲಿನ ಪ್ರಮುಖ ಜೈನ ಪರಂಪರೆಯ ನೆಲೆಗಳ ಅಧ್ಯಯನದಿಂದ ಕಂಡುಕೊಳ್ಳಲಾಗಿದೆ.

### ೨.೧.೧. ಚಾರಿತ್ರಿಕ ನೆಲೆ–ಹಿನ್ನೆಲೆ :

ಇಂದಿನ ಕರ್ನಾಟಕ ರಾಜ್ಯದ ಗದಗ ಜಿಲ್ಲೆಯ ಶಿರಹಟ್ಟಿ ತಾಲೂಕಿನಲ್ಲಿರುವ ಲಕ್ಷ್ಮೇಶ್ವರವು ಬಹು ಪುರಾತನವಾದ ಪಟ್ಟಣವಾಗಿದೆ. ಈಗ ಈ ಊರಲ್ಲಿ ಲಭ್ಯವಾಗಿರುವ ಶಾಸನಗಳು, ವೀರಗಲ್ಲುಗಳು, ಹಳೆಯ ಬಸದಿ ಗುಡಿ ಹಾಗೂ ಮಸೀದಿಗಳು ಈ ಊರಿನ ಪ್ರಾಚೀನತೆಯನ್ನು ಸಾರಿ ಹೇಳುತ್ತವೆ.

ಅಂದಿನ ಪುಲಿಗೆರೆ ನಾಡು ನಾಡೋಜ ಪಂಪನ ತಿರುಳ್ಗನ್ನಡದ ಬೀಡು, ಅಧ್ಯಯನ ಧಾರ್ಮಿಕ ನೆಲೆಬೀಡು, ಲಕ್ಷ್ಮರಸನ ಸಂಪದ್ಭರಿತ ನಾಡು, ಮೇರು ಶಿಲ್ಪಕಲೆಗಳ ಗೂಡು, ಗತ ವೈಭವದ ಅವಶೇಷಗಳ ಕಾಡುಗಳನ್ನು ಹೊಂದಿದ ಪುಲಿಗೇರೆ ಇಂದಿಗೂ ತನ್ನ ಸತ್ಪರಂಪರೆಗಳನ್ನು ಉಳಿಸಿ ಬೆಳೆಸಿಕೊಂಡು ಬಂದಿರುವ

---

೯. ಡಾ. ಬಿ. ಆರ್. ಹಿರೇಮಠ, ಕನಾಟಕದ ವರ್ತಕರು ಕೃತಿಯಲ್ಲಿ ಉಲ್ಲೇಖಗೊಂಡಿವೆ.

ಕಲಾರತ್ನಗಳ ಖಣಿಯಾಗಿ, ಸಾಹಿತ್ಯ ಮತ್ತು ಸಂಸ್ಕೃತಿಯ ಕೇಂದ್ರವಾಗಿ, ವ್ಯಾಪಾರೋದ್ದಿಮೆಯ ಪ್ರಮುಖ ತಾಣವಾಗಿ ರೈತರ ನೆಲೆವಿಡಾಗಿ ನಿಸರ್ಗ ಸೌಂದರ್ಯದಿಂದ ಮರೆಯುತ್ತ ಇಂದಿಗೂ ನಾಗಲೋಟದಿಂದ ಬೆಳೆಯುತ್ತಿರುವ ವಿಜ್ಞಾನ ಪ್ರಪಂಚಕ್ಕೆ ಸಮರ್ಥವಾಗಿ ನಿಂತುಕೊಂಡು ತನ್ನ ಸರ್ವತೋಮುಖವಾದ ಪ್ರಗತಿಯನ್ನು ಸಾಧಿಸಲೆತ್ನಿಸುತ್ತಿರುವ ಅಂದಿನ ಪುಲಿಗೆರೆಯೇ ಇಂದಿನ ಆದರ್ಶ ನಗರ ಲಕ್ಷ್ಮೇಶ್ವರವಾಗಿದೆ.

ಲಕ್ಷ್ಮೇಶ್ವರವು ೧೫೦:೦೫ ಉತ್ತರ ಅಕ್ಷಾಂಶ ೭೫:೨೫ ಪೂರ್ವ ರೇಖಾಂಶದ ಮೇಲಿದೆ. ಇಲ್ಲಿ ವರ್ಷಕ್ಕೆ ಸುಮಾರು ೩೫° ಮಳೆ ಬೀಳುತ್ತದೆ. ಭೂಗುಣವು ಊರಿನ ಪೂರ್ವಕ್ಕೆ ಕಪ್ಪು ಮಡಿಕಟ್ಟು, ಪಶ್ಚಿಮ-ದಕ್ಷಿಣಕ್ಕೆ ಮಸಾರಿ ಭೂಮಿ, ಉತ್ತರ ಭಾಗಕ್ಕೆ ಎರಿ ಭೂಮಿಯಿದೆ. ನೆಲಗಡಲೆ, ಹತ್ತಿ, ಜೋಳ, ಎಣ್ಣೆಕಾಳು, ಗೋಧಿ, ಮೆಣಸಿನಕಾಯಿ ಇಲ್ಲಿಯ ಪ್ರಮುಖ ಬೆಳೆಗಳಾಗಿವೆ.

ಲಕ್ಷ್ಮೇಶ್ವರಕ್ಕೆ ಪೂರ್ವದಲ್ಲಿ ಪುಲಿಗೆರೆ-ಹುಲಿಗೆರೆ, ಪುಲಿಗೆರೆ-ಪುಲಿಕರ ನಗರ, ಹುಲಿಕರ ನಗರ, ಪುಲಿಗೆರೆ ಮುನ್ನೂರು' ಹೀಗೆ ಅನೇಕ ಹೆಸರುಗಳನ್ನು ಹೊಂದಿರುವುದು ಶಾಸನಗಳಿಂದ ತಿಳಿದು ಬರುತ್ತದೆ. ಈ ನಾಡನ್ನು ಲಕ್ಷ್ಮಣರಸನೆಂಬ ಮಾಂಡಲೀಕ ಅರಸನು ಆಳುತ್ತಿರುವಾಗ ಊರಿನ ಮಧ್ಯದಲ್ಲಿರುವ ಶಿವಾಲಯವೊಂದನ್ನು ಜೀರ್ಣೋದ್ಧಾರ ಮಾಡಿ ಊರಿನ ಪುಲಿಗೆರೆ ಹೆಸರನ್ನೇ ಬದಲಾಯಿಸಿ ಲಕ್ಷ್ಮೇಶ್ವರವೆಂಬ ಪುನರ್ ನಾಮಕರಣ ಮಾಡಿದರು. ಕಾಲಾಂತರದಲ್ಲಿ ಲಕ್ಷ್ಮೇಶ್ವರ ಎಂಬ ಹೆಸರು ಜನರ ವಾಡಿಕೆಯಲ್ಲಿ ಲಕ್ಷ್ಮೇಶ್ವರವೆಂದಾಗಿ ಉಳಿಯಿತು. ಭಾರತವು ಸ್ವಾತಂತ್ರ್ಯ ಪಡೆಯುವ ಪೂರ್ವದಲ್ಲಿ ಅನೇಕ ಸಂಸ್ಥಾನಗಳನ್ನು ಹೊಂದಿತ್ತು. ಅಂದು ಈ ಊರು ಮಿರಜ ಸಂಸ್ಥಾನದ ಅಧೀನದಲ್ಲಿತ್ತು. ಸಂಸ್ಥಾನಗಳ ಮಿಲನಿಕರಣದ ನಂತರ ಇಲ್ಲಿಯೂ ಪ್ರಜಾಪ್ರಭುತ್ವ ಪದ್ಧತಿ ಜಾರಿಯಲ್ಲಿ ಬಂದಿತು. ಸಂಸ್ಥಾನದ ಅಧೀನದಲ್ಲಿದ್ದಾಗ ಸಂಸ್ಥಾನಿಕರು ಊರಿನ ಸುಧಾರಣೆಯ ಕಡೆಗೆ ಗಮನ ಹರಿಸಲಿಲ್ಲ. ಊರಿನಲ್ಲಿ ಸುಧಾರಣೆಗಳೆಲ್ಲವೂ ಇತ್ತೀಚಿನವು.

ತಿರುಳ್ಗನ್ನಡದ ನಾಡಿನ ಪಟ್ಟಣವೆಂಬ ಹೆಸರಾದ ಪುಲಿಗೆರೆಯಲ್ಲಿ ಸಾಮಾನ್ಯವಾಗಿ ಎಲ್ಲಾ ಜಾತಿ, ಮತ, ಪಂಥಗಳ ಜನರು ವಾಸಿಸುತ್ತಿದ್ದರು. ಅದರಲ್ಲಿಯೂ ಕರ್ನಾಟಕದಲ್ಲಿ ಪ್ರಮುಖ ಪಂಥಗಳೆಂದು ಹೆಸರಾದ ಶೈವ, ಬ್ರಾಹ್ಮಣ, ಜೈನ ಮೂರು ಪಂಥಗಳು ಈ ಊರಿನಲ್ಲಿ ಸಹಕಾರ ಸೌಹಾರ್ದತೆಯಿಂದ ಬದುಕಿ ಬಾಳಿಬಂದಿದ್ದವೆಂದು ತಿಳಿಯುತ್ತದೆ. ಹಿಂದಿನ ಕಾಲದಲ್ಲಿ ಶ್ರವಣಬೆಳಗೊಳ, ಹೊಂಬುಜ, ಹಲಸಿ, ಲಕ್ಕುಂಡಿ, ಮುಳಗುಂದ, ಕೂಗಳಿ, ಕೊಪ್ಪಳ ಮೊದಲಾದ ಊರುಗಳು ಜೈನ ಧರ್ಮದ ಬೀಡುಗಳಾಗಿದ್ದಂತೆ ಪುಲಿಗೆರೆಯೂ ಜೈನ ಧರ್ಮದ ಬಹು ಮುಖ್ಯ ಕೇಂದ್ರವಾಗಿತ್ತು.

'ಪುಲಿಗೆರೆ-೩೦೦' ಎಂದು ಪ್ರಸಿದ್ಧವಾದ ನಾಡಿನಲ್ಲಿ ಏಳನೂರಕ್ಕು ಹೆಚ್ಚು ಬಸದಿಗಳು ಇದ್ದವೆಂದು ಹೇಳುವುದು ಇಂದಿಗೂ ಈ ಪರಿಸರದಲ್ಲಿ ರೂಢಿಯಲ್ಲಿದೆ. ಜೈನ ಹಾಗೂ ಜೈನೇತರ ಅರಸರು ಜೈನ ಧರ್ಮಕ್ಕೆ ಹಾಗೂ ಜೈನ ಧರ್ಮದ ಆಚಾರ್ಯರಿಗೆ ತೋರಿಸಿದ ಭಕ್ತಿ. ಲಕ್ಷ್ಮೇಶ್ವರದಲ್ಲಿ ಬಸದಿಗಳಿಗೇನೂ ಬಡತನವಿರಲಿಲ್ಲ. ಶಂಖಬಸದಿ, ತೀರ್ಥ ಬಸದಿ, ಮುಕ್ಕರ ಬಸದಿ, ರಾಚಮಲ್ಲ ಬಸದಿ, ಗಂಗಕಂದರ್ಪಜಿನ ಮಂದಿರ, ಗಂಗ

ಪೆರ್ಮಾಡಿ ಚೈತ್ಯಾಲಯ, ಪೆರ್ಮಾಡಿ ಬಸದಿ, ಶ್ರೀ ವಿಜಯ ಬಸದಿ, ಮರುದೇವಿ ದೇವಾಲಯ, ಧವಲ ಜಿನಾಲಯ, ಗೊಗ್ಗಿಯ ಬಸದಿ, ಆನೆ ಸಜ್ಜೆ ಬಸದಿ, ಶಾಂತಿನಾಥ ಬಸದಿ ಮೊದಲಾಗಿ ಹಲವಾರು ಬಸದಿಗಳಿದ್ದವೆಂದು ಶಿಲಾಶಾಸನಗಳಿಂದ ತಿಳಿದು ಬರುತ್ತದೆ. ಇವುಗಳಲ್ಲೆಲ್ಲ ಶಂಖ ಬಸದಿಯು ಎಲ್ಲಕ್ಕೂ ಪ್ರಾಚೀನವಾದದ್ದಿದ್ದು ಇಂದಿಗೂ ಸುಸ್ಥಿತಿಯಲ್ಲಿರುತ್ತದೆ. ಈ ಬಸದಿಗಳ ಯಾದಿಯಲ್ಲಿ ಸುರಹೊನ್ನಯ ಬಸದಿಯನ್ನು ಸೇರಿಸಿಕೊಳ್ಳಬಹುದು. ಶಿವಶರಣ ಆದಯ್ಯನು ಸೋಮನಾಥಪುರದ ಸೋಮನಾಥ ದೇವರನ್ನು ತಂದು ಸ್ಥಾಪನೆ ಮಾಡಿದ್ದು ಈ ಬಸದಿಯಲ್ಲಿಯೇ. ಹೀಗೆ ರಾಜ, ಮಹಾರಾಜರಿಂದ ಶೆಟ್ಟಿ-ಸಾಮಂತರು, ಆಡಳಿತಾಧಿಕಾರಿಗಳಿಂದ ನಿರ್ಮಾಣಗೊಂಡ ಬಸದಿಗಳಲ್ಲಿ ಘನ ವಿದ್ವಾಂಸರಾದ ಜೈನ ಆಚಾರ್ಯರು (ಮುನಿಗಳು) ಇರುತ್ತಿದ್ದರು. ಪ್ರಸಿದ್ಧ ಜೈನಾಚಾರ್ಯರು ೭ನೇ ಶತಮಾನದಿಂದ ೧೬ನೆಯ ಶತಮಾನದವರೆಗೂ ಪುಲಿಗೆರೆಯಲ್ಲಿ ಇದ್ದರು ಅವರಿಗೆ ಜೈನೇತರ ರಾಜರೂ ಮರ್ಯಾದೆ ಕೊಡುತ್ತಿದ್ದರಲ್ಲದೇ ಅವರ ಮಾತಿಗೆ ಮನ್ನಣೆ ಕೊಟ್ಟು ಬಸದಿಗಳಿಗೆ ದತ್ತಿ ಕೊಡುತ್ತಿದ್ದರು. ಅದರಂತೆ ಅನೇಕ ಜನ ಶ್ರೀಮಂತರೂ ಬಸದಿಗಳಿಗೆ ದಾನಗಳನ್ನು ಮಾಡಿ ಅವುಗಳ ಜೀರ್ಣೋದ್ಧಾರ ಮುಂತಾದ ಕಾರ್ಯಗಳನ್ನು ಮಾಡುತ್ತಿದ್ದರು.

ಪೂಜ್ಯ ಪಾದರ ಶಿಷ್ಯ ಉದಯದೇವ ನಿರವದ್ಯೆಯತಿಪತಿ ಚಾಲುಕ್ಯದೊರೆ ವಿಜಯಾದಿತ್ಯನಿಗೆ ಗುರುವಾಗಿದ್ದನೆಂಬ ಅಂಶವೂ ಹಾಗೂ ವಿಜೇಂದ್ರ ಜಿನಾಲಯವನ್ನು ಜೀರ್ಣೋದ್ಧಾರ ಮಾಡಿಸಿದ ಪದ್ಮಸೇನನು ರಾಜ ಗುರುವಾಗಿದ್ದನೆಂಬ ಅಂಶವೂ ಗಮನಾರ್ಹವಾಗಿವೆ. ಪುಲಿಗೇರಿಯಲ್ಲಿ ಬಾಳಿಹೋದ ಜೈನಾಚಾರ್ಯರ ಬಗೆಗೂ ಹಾಗೂ ಬಸದಿಗಳಿಗೆ ದತ್ತಿಗಳನ್ನು ಕೊಟ್ಟವರ ಬಗೆಗೆ ಶಾಸನಗಳಲ್ಲಿ ಉಲ್ಲೇಖಗಳಿವೆ.[೧೦]

೧. ಎರೆಯಮ್ಮನ (ಎರಡನೆಯ ಪುಲಿಕೇಶಿ) ಕಾಲದಲ್ಲಿ ದುರ್ಗಶಕ್ತಿ ಎಂಬುವನು ಶಂಖ ಜಿನಾಲಯದ ನಿತ್ಯಪೂಜೆಗೆಂದು ಐದುನೂರು ನಿವರ್ತನ ಭೂಮಿಯನ್ನು ಕೊಟ್ಟನು.

೨. ಮೂಲ ಸಂಘದ ದೇವಗಣ ತಿಲಕನಾದ ಧ್ರುವ ದೇವಚಾರ್ಯ ಎಂಬುವನ ಧರ್ಮೋಪದೇಶದ ಪ್ರಕಾರ ಶಂಖ ಬಸದಿಯ ದುರಸ್ತಿಗೆ ಪೂಜೆಗೆ ಮತ್ತು ದಾನಶಾಲೆಗೆ ಬೆಳವಲ-೩೦೦ರಲ್ಲಿ ಹಡಗಿಲೆ ಎಂಬ ಗ್ರಾಮವನ್ನು ವಿನಾಯಾದಿತ್ಯ (ಕ್ರಿ.ಶ. ೬೮೩) ಮಹಾರಾಜನು ದಾನಕೊಟ್ಟನು.

೩. ಅರಸು ವಿಜಯಾದಿತ್ಯನು (೭೩೦) ನಿರವದ್ಯ ಪಂಡಿತನ ಹೇಳಿಕೆಯ ಪ್ರಕಾರ 'ಕದ್ದಮ' ಗ್ರಾಮವನ್ನು ಶಂಖಜಿನಾಲಯಕ್ಕೆ ದತ್ತಿ ಕೊಟ್ಟನು.

೪. ಎರಡನೆಯ ವಿಕ್ರಮಾದಿತ್ಯನು (೭೩೫) ಧವಳ ಜಿನೇಂದ್ರಾಲಯಕ್ಕೆ ಐವತ್ತು ನಿವರ್ತನದಷ್ಟು ಭೂಮಿ ದಾನ ಮಾಡಿದನು.

೫. ಯಾದವ ರಾಮಚಂದ್ರನ (೧೨೯೫) ಕಾಲದ ಒಂದು ಶಾಸನವು 'ಸೀಮಯ ಪದ್ಮಯ' ಎಂಬುದವರು ತಾವುಕೊಂಡ ಭೂಮಿಯನ್ನು ಶಾಂತಿನಾಥ ದೇವಾಲಯಕ್ಕೆ ದತ್ತಿಕೊಟ್ಟ ವಿಷಯವನ್ನು ಹೇಳುತ್ತದೆ.

---

೧೦. ಆರ್. ಶರಣಮ್ಮ, 'ಪುಲಿಗೇರಿ ನಾಡು-ಒಂದು ಅಧ್ಯಯನ'.

ಶಂಖಬಸದಿಯವರಿಗೂ ಒಂದೆರಡು ಸಲ ಕೆಳಗೆ ಕಾಣಿಸಿದಂತೆ ನ್ಯಾಯಾಲಯ ಹತ್ತುವ ಪ್ರಸಂಗಗಳು ನಡೆದವೆಂದು ಕಾಣುತ್ತದೆ.

೧. ವಿಜಯ ನಗರದ ಅರಸ ೧ನೇ ದೇವರಾಯನ (೧೪೧೨)ರ ಕಾಲದ ಒಂದು ಆಚಾರ್ಯ ಶಾಸನದ ಪ್ರಕಾರ ಪುಲಿಗೆರೆಯ ಶಂಖಬಸದಿಯ ಹೇಮದೇವಾಚಾರ್ಯ ಎಂಬುವರಿಗೂ ಅದೇ ಊರಿನ ಸೋಮನಾಥ ದೇವಾಲಯದ ಆಚಾರಣೆ ಶಿವರಾಮ ದೇವಯ್ಯ ಎಂಬುವರಿಗೂ ದೇವಸ್ಥಾನದ ಭೂಮಿಯ ಸಲುವಾಗಿ ವಿವಾದ ಉಂಟಾಯಿತು. ನಾಗಣ್ಣ ಎಂಬ ದಣ್ಣಾಯಕನಿಗೆ ಈ ವಿವಾದವು ಒಪ್ಪಿಸಲ್ಪಟ್ಟಾಗ ಅವನು ಎರಡು ಪಕ್ಷಗಳ ಕಾಗದ ಪತ್ರಗಳನ್ನು ಸಂಗಮದೇವ ಎಂಬ ಪುರೋಹಿತ ಹಾಗೂ ಇನ್ನೂ ಕೆಲವು ಪಂಡಿತರಿಂದ ಪರೀಕ್ಷಿಸಿ ಶಂಖಬಸದಿಯ ಹೇಮಾದ್ರಿಯ ಪರವಾಗಿ ಜಯಪತ್ರ ಬರೆಯಿಸಿ ಕೊಟ್ಟನು.

೨. ಶಂಖಬಸದಿಯ ಶಂಖಣಾರ್ಯ ಮತ್ತು ಹೇಮಣಾರ್ಯ ಎಂಬುವರ ನೇತೃತ್ವದಲ್ಲಿ ಜೈನರಿಗೂ ಹಾಗೂ ದಕ್ಷಿಣ, ಸೋಮೇಶ್ವರ ದೇವರ ಗುಡಿಯ ಕಾಳಹಸ್ತದೇವ ಮತ್ತು ಶಿವರಾಮ ದೇವ ಎಂಬುವರಿಗೂ ಅಷ್ಟದಿಕ್ಪಾವಾದಿಗಳು. ಧ್ವಜಪತಾಕಾದಿಗಳ ಉಪಯೋಗದಲ್ಲಿ ವಿವಾದ ಉಂಟಾಗಿತ್ತೆಂದೂ ಅವುಗಳನ್ನು ತಪ್ಪಾಗಿ ಉಪಯೋಗಿಸಿದ್ದನ್ನು ಒಪ್ಪಿ ಅವುಗಳನ್ನು ಅಮೇಲೆ ಉಪಯೋಗಿಸುವುದಿಲ್ಲವೆಂದು ಜೈನರು ಪ್ರಮಾಣ ಪೂರ್ವಕ ಜಯಪತ್ರವನ್ನು ಕೊಟ್ಟಂತೆ ಕ್ರಿ.ಶ. ೧೫೩೮ರ ಒಂದು ಶಾಸನದಲ್ಲಿ ಉಲ್ಲೇಖವಿದೆ.

ಹೀಗೆ ಪುಲಿಗೆರೆಯು ೫ನೆಯ ಶತಮಾನದಿಂದ ೧೧ನೆಯ ಶತಮಾನದವರೆಗೆ ಇಲ್ಲಿ ಜೈನ ಧರ್ಮವು ಪ್ರಭಾವಶಾಲಿಯಾಗಿ ಬೆಳೆದು ಬಂದಿತ್ತು. ಧಾರ್ಮಿಕ, ಸಾಹಿತ್ಯಿಕ, ಸಾಂಸ್ಕೃತಿಕ, ವಾತಾವರಣದಿಂದ ಕೂಡಿದ ಲಕ್ಷ್ಮೇಶ್ವರದಲ್ಲಿ ಇತರ ಕವಿಗಳಿದ್ದಂತೆ ಜೈನ ಧರ್ಮದ ಕವಿಗಳೂ ಬಾಳಿ, ಸಾಹಿತ್ಯ ರಚನೆ ಮಾಡಿಕೊಂಡು ಬಂದಿದ್ದಾರೆ. ಅವರಲ್ಲಿ ಮುಖ್ಯ ಪಂಡಿತ, ಆಚಣ್ಣ, ಸಿಂಹರಾಜ ಪ್ರಮುಖರು, ಪುಲಿಗೇರಿ ಒಂದು ವ್ಯಾಪಾರೀ ಕೇಂದ್ರವೂ ಆಗಿತ್ತು. ಶಾಸನಗಳಲ್ಲಿ ಉಕ್ತವಾದ ಶೆಟ್ಟಿ ಶ್ರೀಮಂತರ ಆಧಾರದಿಂದಲೂ ಈ ಮಾತು ಸ್ಪಷ್ಟವಾಗುತ್ತದೆ.

ಹಿಂದಿನ ಕಾಲದಂತೆ ಬಹುಶಃ ಅದೇ ಪರಂಪರೆಯಲ್ಲಿ ಇಂದು ಸಹ ಜೈನಧರ್ಮವು ಸಮಾಜದಲ್ಲಿ ಉನ್ನತ ಸ್ಥಾನಮಾನಗಳಿಸಿಕೊಂಡಿರುವುದರ ಜೊತೆಗೆ ಆರ್ಥಿಕವಾಗಿಯೂ ಸುಸ್ಥಿತಿಯಲ್ಲಿರುವ ಜೈನ ವ್ಯಾಪಾರಸ್ಥರಲ್ಲಿಂದು ಜೈನ ಧರ್ಮದ ತತ್ವವನ್ನು ಜೀವನದಲ್ಲಿ ಅಳವಡಿಸಿಕೊಂಡು ಶ್ರಾವಕ ಧರ್ಮವನ್ನು ಬಿಟ್ಟು ಶ್ರಮಣ ಧರ್ಮವನ್ನು ಸ್ವೀಕರಿಸಿದ ಶ್ರೀ ರಾಯಪ್ಪನವರು ಬರಗಾಲಿ ಎಂಬ ಸದ್ಗೃಹಸ್ಥರು ಸನ್ಯಾಸವನ್ನು ಸ್ವೀಕರಿಸಿ ದಿಗಂಬರ ಮುನಿಗಳಾಗಿ ಜೈನರಿಗೆ ಪವಿತ್ರ ಕ್ಷೇತ್ರವಾದ ಸಮ್ಮೇದಗಿರಿಯಲ್ಲಿ ಮುಕ್ತರಾದರು. ಭಗವಾನ್ ಮಹಾವೀರ ಜಯಂತಿ ಮೊದಲಾದ ಜೈನ ಪರ್ವಗಳನ್ನು ಆಚರಿಸುವ ಜೈನ ಸಾಹಿತ್ಯದಲ್ಲಿ ಆಸಕ್ತಿ ಇರುವ ಅನೇಕ ಸಾತ್ವಿಕ ಶ್ರವಕರು ಇನ್ನು ಲಕ್ಷ್ಮೇಶ್ವರದಲ್ಲಿ ಇದ್ದರೆ ಹೀಗೆ ಪುರಾತನ ಕಾಲದಿಂದಲೂ ಪುಲಿಗೆರೆಯಲ್ಲಿ ಕರ್ನಾಟಕ ಸಂಸ್ಕೃತಿಯನ್ನು ಪೋಷಿಸುತ್ತ ಬಂದ ಶ್ರಮಪ್ಪಿಗೆ ಉಳಿದ ಧರ್ಮಗಳಂತೆ ಜೈನ ಧರ್ಮ ವನ್ನು ಸುಪಾತ್ರವನ್ನಾಡುತ್ತ ಬಂದು ಪವಿತ್ರವಾಗಿದೆ. ಪಾವನವಾಗಿದೆ.

ಪ್ರಸ್ತುತ ಗದಗ ಜಿಲ್ಲೆಯ ಗದಗ ತಾಲೂಕಿನ ಆಗ್ನೇಯಕ್ಕೆ ೧೨ಕಿ.ಮೀ. ದೂರದಲ್ಲಿರುವ ಲಕ್ಕುಂಡಿ ೧೪,೨೭೦ ಎಕರೆಗಳಷ್ಟು ವಿಸ್ತೀರ್ಣವಿದ್ದು ೧೮ಸಾವಿರ ಜನಸಂಖ್ಯೆ ಹೊಂದಿದೆ. ಕಪ್ಪು ಮಣ್ಣಿನ ಹಾಗೂ ಕೆಂಪು ಮಣ್ಣಿನಿಂದ ಕೂಡಿದ ಭೂಮಿಯಾಗಿದೆ. ಪ್ರಾಚೀನ ಕಾಲದಲ್ಲಿ ಲಕ್ಕುಂಡಿ ಶಿಕ್ಷಣ ಕೇಂದ್ರವಾಗಿ, ಜೈನ ಪರಂಪರೆಯ ಕೇಂದ್ರವಾಗಿ ಪ್ರಸಿದ್ಧಿಯನ್ನು ಪಡೆದಿದೆ.

ಲಕ್ಕುಂಡಿಯು ವಾಸ್ತುಶಿಲ್ಪ ಕಲೆಯ ನೆಲೆಯಾಗಿದ್ದು ದಕ್ಷಿಣ ಭಾರತದ ಶಿಲ್ಪಕಲಾ ಮುಕುಟಮಣಿ ಎಂದು ಹೆಸರಾಗಿದೆ. ಹೀಗಾಗಿ ಪ್ರಾಚೀನ ಘನತೆಯನ್ನು ಹಾಗೂ ಪರಂಪರೆಯನ್ನು ಎತ್ತಿ ತೋರಿಸುವ ಪ್ರದೇಶ ಇದಾಗಿದೆ. ಈ ಪ್ರದೇಶಕ್ಕೆ ಪೌರಾಣಿಕ, ಚಾರಿತ್ರಿಕ, ಧಾರ್ಮಿಕ, ರಾಜಕೀಯ ಸುದೀರ್ಘ ಇತಿಹಾಸವಿದೆ. ಲಕ್ಷ ಕುಂಡಲಿ ಹಾಕಿಯಾಗ ಮಾಡಿದ ಸ್ಥಳವೆಂದು "ಲೇಹ ಖಂಡಪುರ" ಎಂದು ಲಕ್ಕುಂಡಿಯನ್ನು ಕರೆಯಲಾಗಿತ್ತು ಎಂದು ಗದುಗಿನ ಕೃತಪುರ ಮಹಾತ್ಮೆಯಲ್ಲಿ ಉಲ್ಲೇಖವಿದೆ. ಮಧ್ಯಕಾಲೀನ ಅವಧಿಯಲ್ಲಿ ಈ ಪ್ರದೇಶ 'ಲೋಕ್ಕಿಗುಂಡಿ' ಎಂದು ಹೆಸರಾಗಿತ್ತು. ತಗ್ಗಾದ ಈ ಪ್ರದೇಶದಲ್ಲಿ 'ಲೆಕ್ಕಿಜಾತಿಯ ಗಿಡಗಳು ಬೆಳೆಯುತ್ತಿದ್ದವು ಎಂಬುದು ಒಂದು ಅರ್ಥವಾದರೆ (ಲೆಕ್ಕ ಎಂದರೆ ಹಣ) ಸಂಪತ್ತು ಕುಡಿ ಬಿದ್ದಿರುವ ಗುಂಡಿಯೆಂದು ಇನ್ನೊಂದು ಅರ್ಥ. ಪ್ರಾಚೀನ ಲಕ್ಕುಂಡಿಯ ಸುತ್ತ ಏಳು ಗ್ರಾಮಗಳಿದ್ದುದರಿಂದ ಇದನ್ನು 'ಏಳೂರಪುರ' ಎಂದು ಕರೆಯುತ್ತಿದ್ದರು. ಹೊನ್ನಿನ ಮಳೆ ಸುರಿದ ತಾಣವಾದ ಲಕ್ಕುಂಡಿಯೆಂಬುದಕ್ಕೆ 'ಲೋಹಗುಂಡಿ'ಯ ಹೆಸರೇ ಸೂಚಿಸುತ್ತದೆ. ೧೧-೧೨ನೇ ಶತಮಾನದಲ್ಲಿ ಬೆಳವಲ-೩೦೦ ಎಂಬ ನಾಡಿನ ಒಂದು ಭಾಗವಾಗಿತ್ತು. ೧೮ ಅಗ್ರಹಾರಗಳಲ್ಲಿ ಲಕ್ಕುಂಡಿಯೂ ಒಂದಾಗಿತ್ತು. ೧೧ನೆಯ ಶತಮಾನದಿಂದ ಇದರ ಅಧಿಕೃತವಾದ ಇತಿಹಾಸ ತಿಳಿದು ಬರುತ್ತದೆ. ೮೦೦ ವರ್ಷಗಳ ಹಿಂದೆ ಇದು ಹೊಯ್ಸಳರ ಉಪರಾಜಧಾನಿಯಾಗಿತ್ತು. ಆ ಕಾಲದಲ್ಲಿನ ಪುರಾತನ ಬಸದಿಗಳು ಶಾಸನಗಳು, ಸಾಹಿತ್ಯ ಕೃತಿಗಳು ಈ ಪ್ರದೇಶದ ಧಾರ್ಮಿಕ ಹಾಗೂ ಚಾರಿತ್ರಿಕ ನೆಲೆಯನ್ನು ಸಾರಿ ಹೇಳುತ್ತವೆ.[೧೨] ಇಲ್ಲಿನ ಬ್ರಹ್ಮದೇವಾಲಯದ ಬ್ರಹ್ಮೇಶ್ವರ ಜಿನಾಲಯದಲ್ಲಿನ ಬ್ರಹ್ಮ ಸರಸ್ವತಿಯ ಮೂರ್ತಿಗಳು ಕಲಾರಸಿಕರನ್ನು ತನ್ಮಯಗೊಳಿಸುತ್ತವೆ.

ಜಿನದತ್ತ ಅತ್ತಿಮಬ್ಬೆಯ ಕಾರ್ಯಕ್ಷೇತ್ರ ಲೊಕ್ಕಿಗದ್ಯಾಣಗಳು ಸಿದ್ಧವಾಗುತ್ತಿದ್ದ ಟಂಕಸಾಲೆಯ ಸ್ಥಳ. ಜೈನ ಮತ್ತು ವೈದಿಕ ಧರ್ಮದ ಕೇಂದ್ರ ಸ್ಥಳ ಅಜಗಣ್ಣ ಮತ್ತು ಮುಕ್ತಾಯಕ್ಕರ ಕರ್ಮಭೂಮಿ ಶಾಸನದಲ್ಲಿ ಉಲ್ಲೇಖಿಸಿದ ನೂರೊಂದು ಗುಡಿಗಳು, ನೂರೊಂದು ಬಾವಿಗಳು ಇದ್ದ ಊರು ಇಂದು ಸದ್ಯದ ಲಕ್ಕುಂಡಿಯಲ್ಲಿ ಕೇವಲ ೧೭ ದೇವಾಲಯ ೧೪ ಬಾವಿಗಳು ಮಾತ್ರ ಉಳಿದಿವೆ.

ಶ್ರೀಮತಿ ಹನುಮಾಕ್ಷಿ ಗೋಗಿಯವರು ಲಕ್ಕುಂಡಿಯಲ್ಲಿ ೭೧ ಹೊಸ ಶಾಸನಗಳನ್ನು ಶೋಧಿಸಿದ್ದಾರೆ. ಅವುಗಳಲ್ಲಿ ಲಕ್ಕುಂಡಿಯ ವಸ್ತು ಸಂಗ್ರಹಾಲಯದಲ್ಲಿರುವ ತೀರ್ಥಂಕರ ವಿಗ್ರಹದ ಕೆಳಗೆ 'ಹಮ್ಮಿಯಕ್ಕ" ಎಂಬ ಹೆಣ್ಣು ಮಗಳು ಅತ್ತಿಮಬ್ಬೆಯ ಹಾಗೆ ತೀರ್ಥಂಕರ ವಿಗ್ರಹಗಳನ್ನು ಮಾಡಿಸಿದಳೆಂದು ಹೇಳುತ್ತದೆ. ಲಕ್ಕುಂಡಿಯ

---

೧೨. ಲಕ್ಕುಂಡಿಯ ಶಾಸನಗಳು, ಶ್ರೀಮತಿ ಹನುಮಕ್ಷಿ ಗೋಗಿ

ಶಾಸನದ ಒಂದು ತುಣುಕು ಗದಗ ಮ್ಯೂಜಿಯಂನಲ್ಲಿದೆ. ಇನ್ನು ಮೂರು ತುಣುಕುಗಳು ಸಿಗಬೇಕಾಗಿದೆ ಇದು ಅತ್ತಿಮಬ್ಬೆಯು ಬ್ರಹ್ಮೇಶ್ವರ ಜಿನಾಲಯ ಮಾಡಿಸಿದಾಗ ಹಾಕಿಸದ ಮೂಲ ಶಾಸನದ ತುಣುಕಾಗಿದೆ.

ಕುಂಬಾರ ಓಣಿಯ ಈಶ್ವರ ದೇವಾಲಯದ ಹಿಂದೆ ಇದ್ದ ಶಾಸನ (ಈಗ ಲಕ್ಕುಂಡಿ ವಸ್ತು ಸಂಗ್ರಹಾಲಯದಲ್ಲಿದೆ.)ದಲ್ಲಿ ಜೀನೇಶ್ವರ ದೇವರಿಗೆ ಗಂಧ, ಧೂಪ ಮೊದಲಾದವುಗಳಿಗೆ ಅಭಿನವ ಪಾಶುಪತ ಮಿರಿಲಜೆಯ ಬ್ರಹ್ಮಲಿಂಗ ಪಂಡಿತರ ಶಿಷ್ಯ ಪವಿತ್ರರಾಗಿ ಬೇಯರಿಗೆ ದಾನ ಬಿಟ್ಟ ವಿವರಗಳಿವೆ. ಇಲ್ಲಿ 'ಜಿನೇಶ್ವರ' ಎಂಬ ಹೆಸರು ವಿಶಿಷ್ಟವಾಗಿದೆ.

ಜೈನಧರ್ಮದ ಯಾಪನೀಯ ಶಾಖೆಗೆ ಸಂಬಂಧಿಸಿದಂತೆ ಲಕ್ಕುಂಡಿಯ ಶಾಸನ (ಈಗ ಲಕ್ಕುಂಡಿ ವಸ್ತು ಸಂಗ್ರಹಾಲಯದಲ್ಲಿದೆ.) ಬಹಳ ಮಹತ್ವದ ಮಾಹಿತಿಯನ್ನು ಒದಗಿಸುತ್ತದೆ. ಶಾಸನದ ಆರಂಭಕ್ಕೆ ಯಾಪನೀಯ ಸಂಘದ ೧೬ ಗಜಗಳ ಹೆಸರು ಬರುತ್ತದೆ. ಗಣಗಳ ಮುನಿಗಳ ಹೆಸರೂ ಈ ಶಾಸನದಲ್ಲಿ ಶಾಸನಕಾರ ಉಲ್ಲೇಖಿಸಿದ್ದಾನೆ. ಇದನ್ನು ಗಮನಿಸಿದಾಗ ಯಾವಪನೀಯ ಸಂಘಕ್ಕೆ ದೊಡ್ಡ ಪರಂಪರೆ ಇದ್ದದು ತಿಳಿದು ಬರುತ್ತದೆ.

ಬ್ರಹ್ಮ ಜಿನಾಲಯದ ಎದುರಿನ ಪಾಟೀಲರ ಹಿತ್ತಲಲ್ಲಿರುವ ಶಾಸನ ಕ್ರಿ.ಶ. ೧೧೮೪ರ ４ನೆಯ ಸೋಮೇಶ್ವರ ಖಸನವಾಗಿದ್ದು ಇದರಲ್ಲಿ ಮೂಲಸಂಘ, ಪುಸ್ತಕಗಚ್ಛ, ಇಂಗಳೇಶ್ವರ ಗಣದ ಮಾಘನಂದಿ ಮತ್ತು ಆತನ ಶಿಷ್ಯರ ಉಲ್ಲೇಖವಿದೆ.

ವಸುದೈವಕ ಬಾಂಧವ (ರೊಚಣ, ದಂಡನಾಯಕನಾಗಿದ್ದು ಬಿರುದು) ಜಿನಾಲಯದ ಶಾಂತಿನಾಥ ದೇವರಿಗೆ ಬೆಳ್ವೊಲ ೩೦೦ರೊಳಗಿನ ಬಿಳಹೊಡ ಗ್ರಾಮ ದಾನ ಬಿಟ್ಟ ಉಲ್ಲೇಖವಿದೆ. ಆರಂಭದ ೩೯ ಸಾಲುಗಳು ಸಂಸ್ಕೃತದಲ್ಲಿದ್ದು ನಂತರ ದತ್ತಿಯ ವಿವರಗಳು ಕನ್ನಡದಲ್ಲಿವೆ.

ಲಕ್ಕುಂಡಿ ವಸ್ತು ಸಂಗ್ರಹಾಲಯದಲ್ಲಿರುವ ಪಾದಪೀಠದ ಮೇಲಿನ ಶಾಸನದಲ್ಲಿ ನರೇಂದ್ರಸೇನ ರೋಣರ ತ್ರೈವಿದ್ಯ ದೇವರಗುಡ್ಡ ಕೋಣರ ನಾಗಸೆಟ್ಟಿಯ ಮಗ ಜೀಮಿಸೆಟ್ಟಿಯು ತಮ್ಮಬ್ಬೆನಾಗಿಯಕ್ಕನಿಗೆ ಶಾಂತಿನಾಥ ಬಸದಿ ಮಾಡಿಸಿದ ಉಲ್ಲೇಖವಿದೆ. ಇನ್ನೊಂದು ಪಾದ ಪೀಠದ ಮೇಲೆ ಮೂಲ ಸಂಘ ಬಲಾತ್ಕರ ಗಣ ಚಿದಾನಂದ ಭಟ್ಟಾರಕರ ಗುಡ್ಡ ಬರಸೆಟ್ಟಿಯ ಅನಂತನ ನೋಂಪಿಯ ಪ್ರತಿಮೆ ಎಂಬ ವಿಷಯವಿದೆ. ಲಕ್ಕುಂಡಿಯಲ್ಲಿ ನೋಂಪಿಯ ಬಸದಿ ಇದ್ದುದು ತಿಳಿದು ಬರುತ್ತದೆ. ಹದಿನಾರು ನೋಂಪಿಗಳನ್ನು ಕೈಕೊಳ್ಳುವುದಕ್ಕಾಗಿ ನೋಂಪಿಯ ಬಸದಿಯಿರಬೇಕು. ನೋಂಪಿಗಳಲ್ಲಿ ಅನಂತನ ನೋಂಪಿ ಒಂದಾಗಿದ್ದು ಅದಕ್ಕೆ ಸಂಬಂಧಿಸಿದ ಮೂರ್ತಿ ಇದಾಗಿರಬೇಕು.

ಅತ್ತಿಮಬ್ಬೆ ಬ್ರಹ್ಮ ಜಿನಾಲಯ ಕಟ್ಟಿಸಿ ದಾನ ಕೊಟ್ಟ ಗ್ರಾಮ ಸುರಿಕಿ. ಇದು ೧೨ ಹಳ್ಳಿಗಳನ್ನೊಳಗೊಂಡ ಚಿಕ್ಕ ವಿಭಾಗವಾಗಿದ್ದು ಬೆಳ್ವೊಲ-೩೦೦ ಅಥವಾ ಪುಲಿಗೇರಿ ೩೦೦ರ ಉಪವಿಭಾಗವಾಗಿರುವ ಸಾಧ್ಯತೆ ಇದೆ. ಸುರುಕಿ ಗ್ರಾಮವನ್ನು ಈಗಿನ ಚುರಚಿಹಾಳ ಗ್ರಾಮವಾಗೀರಬೇಕೆಂದು ಶ್ರೀಮತಿ ಹನುಮಾಕ್ಷಿ ಗೋಗಿಯವರು ತಿಳಿಸುತ್ತಾರೆ.[೧೩]

---

೧೩. ಇದೇ ಕೃತಿಯಲ್ಲಿ ಈ ರೀತಿಯಾಗಿ ಅಭಿಪ್ರಾಯ ಪಡುತ್ತಾರೆ.

ಹೀಗೆ ಲಕ್ಕುಂಡಿಯು ಜೈನ ಪರಂಪರೆಯುಳ್ಳ ಪ್ರಮುಖ ಕೇಂದ್ರವಾಗಿ ಅತ್ತಿಮಬ್ಬೆಯು ಜೈನ ತತ್ವಗಳನ್ನು ಪ್ರಸಾರ ಮಾಡಿದ ಕರ್ಮಭೂಮಿ ಪ್ರಸಿದ್ಧಿ ಪಡೆದ ಸ್ಥಳವಾಗಿದೆ. ಇಂದು ಈ ಪರಿಸರದಲ್ಲಿ ಜೈನರು ಜೈನ ಧರ್ಮದ ಪರಂಪರೆಯನ್ನು ಉಳಿಸಿಕೊಂಡು ಬಂದಿದ್ದಾರೆ. ಇಂದಿಗೂ ಸುಸ್ಥಿತಿಯಲ್ಲಿರುವ ಬ್ರಹ್ಮಜಿನಾಲಯ ಜೈನ ಪರಂಪರೆಯ ಕೇಂದ್ರವಾಗಿ ಜೈನ ಧರ್ಮದ ತತ್ವಗಳ ಸೆಲೆಯಾಗಿ-ನೆಲೆಯಾಗಿ ಪ್ರಾಮುಖ್ಯತೆಯನ್ನು ಪಡೆದುಕೊಂಡಿದೆ.

ಈಗಿನ ಗದಗ ಜಿಲ್ಲೆಯ ಮುಳಗುಂದ ಪ್ರಾಚೀನ ಕಾಲದಲ್ಲಿ ಮುಳಗುಂದ-೧೨ ಎಂದು ಖ್ಯಾತವಾಗಿದ್ದಿತು. ೧೨ ಗ್ರಾಮಗಳಿಗೆ ರಾಜಕೀಯವಾಗಿ ಬೆಳೆದ ಈ ಗ್ರಾಮದ ಮೊಟ್ಟ ಮೊದಲ ಉಲ್ಲೇಖ ೬ನೆ ಶತಮಾನದ ಶಿರಗುಪ್ಪಿ ಶಾಸನದಲ್ಲಿ ಮುಳಗುಂದದ ಪ್ರಸ್ತಾಪವಿದೆ. ಹಾಗೂ ಮುಳಗುಂದವನ್ನು ವಾನಸತ್ತಿ ಅರಸರು ಆಳುತ್ತಿದ್ದರೆಂದು ಈ ಶಾಸನದಲ್ಲಿ ಹೇಳಲಾಗಿದೆ.

ಕ್ರಿ.ಶ. ೧ನೆಯ ಶತಮಾನದ ಗ್ರೀಕ್ ಭೌಗೋಳಿಕಾರ ಟಾಲೆಮಿಯ ಬರಹದಲ್ಲಿ ಹೆಸರಿಸಿರುವ 'ಮೋರಂಡ' ಎಂದರೆ ಈಗಿನ ಮುಳಗುಂದವೆಂದು ತಿಳಿಯಲಾಗಿದೆ. ಕ್ರಿ.ಶ. ೮೬೬ರ ನೀಲಗುಂದ ಶಾಸನ ಕ್ರಿ.ಶ. ೮೭೫ರ ಸೌದತ್ತಿ ಶಾಸನ, ಹುನಗುಂದ ತಾಲೂಕು ನಂದವಾಡಿಗೆಯ ಕ್ರಿ.ಶ. ೧೦೫೩ರ ಶಾಸನ, ರಾಣೆಬೆನ್ನೂರು ತಾಲೂಕು ಬೆನಕೊಂಡದ ಕ್ರಿ.ಶ. ೧೨೮೪ರ ಶಾಸನಗಳಲ್ಲಿ ಮುಳಗುಂದದ ಉಲ್ಲೇಖಗಳಿವೆ.[೧೪]

ಮುಳಗುಂದ ನಾಡಿನ ಸಂಸ್ಕೃತ ಜೈನ ಕವಿ ಮಲ್ಲಷೇಣ ತನ್ನ "ಮಹಾಪುರಾಣದ ಪ್ರಶಸ್ತಿ ಪದ್ಯದಲ್ಲಿ (ತೀರ್ಥ ಶ್ರೀಮೂಲ ಗುನ್ದನಾಮ್ನ ನಗರೇ) ಎಂದು ಪ್ರಶಂಸಿಸಿದ್ದಾನೆ. ಈ ನಾಡಿನ ಸುಪ್ರಸಿದ್ಧ ಜೈನ ಕವಿ ನಯಸೇನ "ಧರ್ಮಾಮೃತ"ವನ್ನು ರಚಿಸಿರುವುದು ಈ ಪುಣ್ಯಭೂಮಿಯಲ್ಲಿಯೇ.

ಮುಳುಗುಂದ ನಾಡು ಬೆಳ್ವೊಲ-೩೦೦ ಮತ್ತು ಪುಲಿಗೆರೆ-೩೦೦ ಸಂಧಿಸುವ ಅಂಚಿನಲ್ಲಿದೆ. ಒಂದೆಡೆ ಗುಡ್ಡ, ಇನ್ನೊಂದೆಡೆ ಬಯಲು ಪ್ರದೇಶವನ್ನು ಹೊಂದಿದ ಇದರ ಪೂರ್ವಕ್ಕೆ ಮೊಸವಾಡಿ-೧೪೦ ಪ್ರದೇಶವಿದೆ. ಈಗ ಈ ಪ್ರದೇಶದ ಗ್ರಾಮಗಳ ಗದಗ ಜಿಲ್ಲೆಯ ವ್ಯಾಪ್ತಿಗೆ ಸೇರಿವೆ. ಪಶ್ಚಿಮಕ್ಕೆ ಚಿಂಚಲಿ-೫೦ರ ಪ್ರದೇಶವಿದೆ. ಇದರ ಕೆಲವು ಗ್ರಾಮಗಳು ಗದಗ ಜಿಲ್ಲೆ ಮತ್ತು ಹುಬ್ಬಳ್ಳಿ ತಾಲೂಕಿನಲ್ಲಿ ಬರುತ್ತದೆ. ಉತ್ತರಕ್ಕೆ ಈಗಿನ ಗದಗ ಜಿಲ್ಲೆಯ ಪ್ರದೇಶವಿದೆ. ಈ ನಾಡಿನ ಗಡಿಗೆ ಹೊಂದಿಕೊಂಡಿರುವ ಐತಿಹಾಸಿಕವಾಗಿ ಪ್ರಸಿದ್ಧಿ ಪಡೆದ ಗದಗ ಜಿಲ್ಲೆಯ ಲಕ್ಕುಂಡಿ ಇದೆ. ದಕ್ಷಿಣ ಭಾಗಕ್ಕೆ ಪುಲಿಗೆರೆ-೩೦೦ರ ಪ್ರದೇಶವಿದೆ. ಇದರಲ್ಲಿ ಈಗಿನ ಗದಗ, ಹಾವೇರಿ, ಧಾರವಾಡ ಜಿಲ್ಲೆಗಳ ಗ್ರಾಮಗಳು ಸಮಾವೇಶವಾಗಿರುತ್ತವೆ.

ಈ ನಾಡಿನ ೧೨ ಗ್ರಾಮಗಳಲ್ಲಿ ಹೊಸೂರು, ಕುರ್ತಕೋಟಿ, ಕಣವಿ, ಹರ್ತಿ, ಎಲೆಹೊಸೂರು, ವೆಂಕಟಾಪುರ, ಎಲಿಶಿರೂರು, ಕಲ್ಲೂರು, ಯಳವತ್ತಿ, ಶಿರೂರು ಮತ್ತು ನೀಲಗುಂದ ಗ್ರಾಮಗಳು ಮುಳಗುಂದ-೧೨ರ ಗ್ರಾಮಗಳೆಂದು ಶಾಸನಗಳ ಆಧಾರದ ಮೇಲಿಂದ ಇತ್ತೀಚೆಗೆ ಸಂಶೋಧನೆ ಮಾಡಲಾಗಿದೆ. ಹೀಗೆ ಈ ನಾಡಿನ ೧೨ ಗ್ರಾಮಗಳು ಈ ಉಪ ವಿಭಾಗದ ಘಟಕಗಳಾಗಿ ಕಾರ್ಯನಿರ್ವಹಿಸುತ್ತಿದ್ದವು.

---

೧೪. ಮುಳಗುಂದನಾಡು-ಒಂದು ಅಧ್ಯಯನ. ಡಾ. ಧನವಂತ ಹಾಜವಗೋಳ

ಮುಳುಗುಂದ ಆ ಕಾಲದಲ್ಲಿ ಒಂದು ಪ್ರಮುಖ ರಾಜಕೀಯ ಕೇಂದ್ರವಾಗಿದ್ದಿತು. ಕ್ರಿ.ಶ. ೬ನೆಯ ಶತಮಾನದಲ್ಲಿ ಇದನ್ನು ವಾನಸತ್ತಿ ಅರಸರು ನೇರವಾಗಿ ಆಳಿದರು. ಅನಂತರ ಬದಾಮಿ ಚಾಲುಕ್ಯರು, ರಾಷ್ಟ್ರಕೂಟರು, ಗಂಗರು, ಕಲ್ಯಾಣದ ಚಾಲುಕ್ಯರು, ಕಲಚೂರಿಗಳು, ಹೊಯ್ಸಳರು, ಯಾದವರು ಮತ್ತು ವಿಜಯನಗರದ ಅರಸರು ಪರೋಕ್ಷವಾಗಿ ಆಳಿದರು. ಈ ಅರಸು ಮನೆತನಗಳ ಅಧೀನದಲ್ಲಿದ್ದ ಮಹಾಮಂಡಳೇಶ್ವರರು, ಸಾಮಂತರು, ದಂಡಾಧಿಪತಿಗಳು ಇತರ ಅಧಿಕಾರಿಗಳು ಮತ್ತು ಗಾವುಂಡರುಗಳು ಆಡಳಿತ ನಡೆಸುತ್ತಿದ್ದುದರ ವಿಚಾರಗಳು ಶಾಸನಗಳಿಂದ ದೊರಕುತ್ತವೆ.[೧೫]

ಮುಳಗುಂದ ನಾಡಿನ ಪ್ರಮುಖವೂ, ಪ್ರಾಚೀನವೂ ಆದ ಧರ್ಮ ಜೈನ ಧರ್ಮವಾಗಿದೆ. ಈ ಧರ್ಮಕ್ಕೆ ರಾಷ್ಟ್ರಕೂಟರೂ, ಗಂಗರೂ, ಕಲ್ಯಾಣದ ಚಾಲುಕ್ಯರು, ರಾಜಾಶ್ರಯ ನೀಡಿ ಪೋಷಿಸಿಕೊಂಡು ಬಂದ ಸಂಗತಿಯನ್ನು ಇಲ್ಲಿನ ಹಲವಾರು ಶಾಸನಗಳು ಹೇಳುತ್ತವೆ. ರಾಷ್ಟ್ರಕೂಟರು, ಜೈನ ಧರ್ಮದ ಬಗೆಗೆ ವಿಶೇಷ ಕಾಳಜಿಯನ್ನು ಹೊಂದಿದ್ದರು. ಈ ಮನೆತನದ ಸುಪ್ರಸಿದ್ಧ ದೊರೆ ಅಮೋಘವರ್ಷ ನೃಪತುಂಗನ (೮೧೪–೬೪) ಕಾಲದಲ್ಲಿ ಜೈನ ಧರ್ಮ ಮುಳಗುಂದ ನಾಡನ್ನು ಪ್ರವೇಶಿಸಿತು. ಈ ಅವಧಿಯಲ್ಲಿಯೇ 'ಚಂದ್ರಕಾವಾಟ'ದ ಸೇನಗಣಕ್ಕೆ ಸೇರಿದ ಜೈನ ಮುನಿಗಳು ಮುಳಗುಂದ ನಗರವನ್ನು ಪ್ರವೇಶಿಸಿದರು. ಹೀಗೆ ರಾಷ್ಟ್ರಕೂಟರ ಧರ್ಮದೃಷ್ಟಿಯ ಉದಾರ ನೀತಿಯಿಂದಾಗಿ ಜೈನಧರ್ಮ ಸಾಹಿತ್ಯ, ಸಂಸ್ಕೃತಿ, ಕ್ರಮೇಣ ವೃದ್ಧಿ ಹೊಂದಿ ಉಚ್ಛ್ರಾಯ ಸ್ಥಿತಿಗೆ ಏರಿದ್ದವೆಂದು ಹೇಳಬಹುದು.

ಗಂಗರು ಸಿಂಹ ನಂದಿಯತಿಗಳ ಪ್ರೇರಣೆಯಿಂದ ರಾಜ್ಯವನ್ನು ಪಡೆದ ಕಾರಣ ಜೈನ ಧರ್ಮವನ್ನು ತಮ್ಮ ರಾಷ್ಟ್ರೀಯ ಧರ್ಮವನ್ನಾಗಿ ಮಾಡಿಕೊಂಡಿದ್ದರು. ಕಲ್ಯಾಣದ ಚಾಲುಕ್ಯರು ಪರಧರ್ಮ ಸಹಿಷ್ಣುತೆ ಜೈನ ಧರ್ಮಕ್ಕೆ ಅನುಕೂಲಕರವಾಗಿ ಪರಿಣಮಿಸಿತು. ಹೊಯ್ಸಳ ಸಾಮ್ರಾಜ್ಯಕ್ಕೆ ಸುದತ್ತಾಚಾರ್ಯರು ಅಡಿಗಲ್ಲು ಇಟ್ಟ ಕಾರಣ ಈ ಮನೆತನದ ಎಲ್ಲಾ ಅರಸರೂ ಜೈನ ಧರ್ಮಕ್ಕೆ ನಿಷ್ಠರಾಗಿದ್ದರು.

ಕರ್ನಾಟಕದಲ್ಲಿ ಬಹುಮಟ್ಟಿಗೆ ಪ್ರಚಾರದಲ್ಲಿದ್ದದ್ದು ದಿಗಂಬರ ಪಂಥ ಮತ್ತು ಯಾಪನೀಯ ಸಂಘಗಳು ದಿಗಂಬರ ಪಂಥದ ಮೂಲಸಂಘ ಯಾಪನೀಯ ಸಂಘ, ನಂದಿಸಂಘ ಹಾಗೂ ಸಿಂಹ ಸಂಘಗಳು ಈ ನಾಡಿನಲ್ಲಿದ್ದವು. ಎಂಬುವುದು ಮುಳುಗುಂದದಲ್ಲಿ ಲಭ್ಯವಾದ ಕ್ರಿ.ಶ. ೧೬೭೫ರ ಶಾಸನದಿಂದ ತಿಳಿದು ಬರುತ್ತದೆ. ಕುಮಾರಸೇನ, ವೀರಸೇನ, ಕನಕಸೇನ, ಅರ್ಯಸೇನ, ಅಜೀತಸೇನ, ಮೊದಲಾದ ೧೬ ಜನ ಜಿನಮುನಿಗಳು ಇಲ್ಲಿ ಆಗಿ ಹೋಗಿದ್ದಾರೆ. ಈ ಮುನಿಗಳು ಜೈನ ಧರ್ಮದ ಅಧ್ಯಯನ ಆಚರಣೆ, ಪ್ರಚಾರ ಕಾರ್ಯಗಳಲ್ಲಿ ತಮ್ಮನ್ನು ತೊಡಗಿಸಿಕೊಂಡು ಜೈನ ಧರ್ಮಕ್ಕೆ ಉಜ್ವಲ ಕೀರ್ತಿ ಪ್ರಾಪ್ತವಾಗುವಂತೆ ಮಾಡಿದ ಕಾರಣದಿಂದಾಗಿ ಅದು ಈ ನಾಡಿನ ಜನ ಸಾಮಾನ್ಯರ ಧರ್ಮವಾಗಿ ಬೆಳೆಯಲು ಸಾಧ್ಯವಾಯಿತು. ಆದ್ದರಿಂದ ಮುಳಗುಂದವು ಒಂದು ಜೈನ ಪರಂಪರೆಯ ಬೀಡು ಆಗಿ ಪ್ರಸಿದ್ಧಿ ಪಡೆದಿತ್ತು ಎಂಬುವುದಕ್ಕೆ ಇಲ್ಲಿರುವ ನಾಲ್ಕು ಬಸದಿಗಳೇ ಪುರಾವೆಯನ್ನು ಒದಗಿಸುತ್ತವೆ. ಇಲ್ಲಿ ಯಾಪನೀಯ ಪಂಥ, ಪ್ರಸಿದ್ಧವಾಗಿತ್ತು ಎಂಬುವುದು ಶಾಸನಗಳ ಉಲ್ಲೇಖದಿಂದ ತಿಳಿದು ಬರುತ್ತದೆ.

---

೧೫. ಇದೇ ಕೃತಿಯಲ್ಲಿ ಉಲ್ಲೇಖವಿದೆ.

ಕಪೋತಗಿರಿಯ ಅಂಚಿನಲ್ಲಿರುವ ಇಂದಿನ ದೋಣಿ ಪ್ರಾಚೀನ ಇತಿಹಾಸದಲ್ಲಿ ಶಾಸನಗಳಲ್ಲಿ ದ್ರೋಣಾಪುರಿ, ದ್ರೋಣಾಮುಖವೆಂದು ಕರೆಯಲ್ಪಟ್ಟಿದೆ. ೬ನೇ ವಿಕ್ರಮಾದಿತ್ಯನ ಪಿರಿಯರಿಸಿ ಲಕ್ಷ್ಮೀದೇವಿ ಕ್ರಿ.ಶ. ೧೦೮೦ರಲ್ಲಿ ಡೋಣಿಯಲ್ಲಿಯೇ ರಾಜ್ಯಾಡಳಿತ ಪ್ರಾರಂಭಿಸಿದ್ದು ದಾನ ದತ್ತಿಗಳನ್ನು ನೀಡಿದ್ದು ಶಾಸನಗಳಲ್ಲಿ ಉಲ್ಲೇಖಗೊಂಡಿದೆ. ವೀರಶೈವ ಧರ್ಮಿಯಳೆನಿಸಿದ ಈ ಲಕ್ಷ್ಮೀದೇವಿ ತನ್ನ ಆಡಳಿತಾವಧಿಯಲ್ಲಿ ಜೈನ ಹಾಗೂ ಬೌದ್ಧ ಧರ್ಮಗಳಿಗೆ ಅವಕಾಶ ಕೊಟ್ಟು ಪರಧರ್ಮ ಸಹಿಷ್ಣುತೆ ಎಂದೆನಿಸಿಕೊಂಡಳು. ೧೨೯೬ರ ಶಾಸನದಲ್ಲಿ ಇವಳು ಡೋಣಿಯನ್ನಾಳುತ್ತಿದ್ದಾಗ ಶೋಕಶೆಟ್ಟಿ ಎಂಬುವನು ಬಸದಿಗೆ ಭೂದಾನ ಮಾಡಿದ ಉಲ್ಲೇಖವಿದೆ. ೧೨೯೬ರ ಶಾಸನವು ಸೇನಭೋವ ಆದಣ್ಣನ ಮೊಮ್ಮಗನಾದ ಶ್ರೀಕರಣದ ಬೋಪಣ್ಣನು ಪಾರ್ಶ್ವನಾಥ ಮೂರ್ತಿಯನ್ನು ಕಾಣೂರ್ಗಣದ ಮರುದೇವಿ ಅವ್ವೆಯ ಬಸದಿಗೆ ದಾನ ಮಾಡಿದ್ದನ್ನು ಉಲ್ಲೇಖಿಸುತ್ತದೆ.[೧೬]

ಕಲಕೇರಿಯಲ್ಲಿ ಶಾಸನಗಳಿದ್ದು ಒಂದು ಚಾವಡಿಯ ಮುಂದಿರುವ ಮೂರ್ತಿಯ ಪೀಠದ ಮೇಲೆ ಮೂಲ ಸಂಘಕೊಂಡ ಕುಂದಾನ್ವಯ ಕ್ರಾಣೂರಗಣ ಮತ್ತು ತಿಂತ್ರಿಣಿ ಗಚ್ಛದ ಭಾನುಕೀರ್ತಿ ಸಿದ್ಧಾಂತ ದೇವರ ಶಿಷ್ಯನಾದ ಹಾಲಿಗಾವುಂಡನು ಆಚಾರ್ಯ ಸಕಳಚಂದ್ರ ಭಟ್ಟಾರಕರಿಗೆ ಕಲಕೇರಿಯಲ್ಲಿ ಬಸದಿಯನ್ನು ಕಟ್ಟಿಸಿ ಅದರಲ್ಲಿ ಪಾರ್ಶ್ವನಾಥನ ಮೂರ್ತಿ ಸ್ಥಾಪಿಸಿದ್ದನ್ನು ವ್ಯಕ್ತಪಡಿಸುತ್ತದೆ.

ಪ್ರಾಚೀನ ಕಾಲದಲ್ಲಿ "ಕಣ್ಣಾನೂರು" ಎಂದು ಕರೆಯಲ್ಪಡುತ್ತಿದ್ದ ಈಗಿನ ಗದಗ ಜಿಲ್ಲೆಯ ನರಗುಂದ ತಾಲೂಕಿನಲ್ಲಿರುವ ಕೊಣ್ಣೂರು ಪ್ರಾಚೀನ ಕಾಲದಲ್ಲಿ ಕಣ್ವಋಷಿಗಳ ತಪೋಭೂಮಿ ಮಲಪ್ರಭೆಯ ದಡದಲ್ಲಿರುವ ಕೊಣ್ಣೂರು ಜೈನ ಪರಂಪರೆಯ ಕೇಂದ್ರವಾಗಿದ್ದಿತು. ಕ್ರಿ.ಶ. ೮೬೦ರಲ್ಲಿ ಬಂಕೆಯರಸ ಕಟ್ಟಿಸಿದ ಈಗಿನ ಪರಮೇಶ್ವರ ದೇವಾಲಯ ಮೂಲತಃ ಜೈನ ಬಸದಿ ತೀರ ಸರಳವಾದ ದ್ವಾರಬಂಧವನ್ನು ಹೊಂದಿದ ಈ ದೇವಾಲಯದ ಪೀಠದ ಮೇಲೆ ಶಿವಲಿಂಗವಿದೆ ಅದರಂತೆ ತೀರ್ಥಂಕರನ ಪೀಠದ ಅವಶೇಷವೂ ಇದೆ.

ಜೈನಧರ್ಮದ ಚರಿತ್ರೆಯಲ್ಲಿ 'ತಿರುಳ್ಗನ್ನಡ' ನಾಡಿಗೆ ತನ್ನದೇ ಆದ ವಿಶಿಷ್ಠ ಸ್ಥಾನವಿದೆ. ಇದರಲ್ಲಿ ಬರುವ ಕಿಸುಕಾಡು-೭೦ರ ಐಹೊಳೆ ಪುಲಿಗೇರಿ-೩೦೦ರ ಪುಲಿಗೆರೆ ಬೆಳ್ವೊಲ-೩೦೦ರ ಲಕ್ಕುಂಡಿ ಇವುಗಳ ಮಧ್ಯದಲ್ಲಿ ಬರುವ ಮಾಸವಾಡಿ-೧೪೦ರ ಡಂಬಳ ಇವು ಪ್ರಸಿದ್ಧ ಜೈನ ಕೇಂದ್ರಗಳಾಗಿದ್ದವು. ಕರ್ನಾಟಕದಲ್ಲಿ ಲಿಂಗಾಯತ ಧರ್ಮ ಉದಯವಾಗುವವರೆಗೆ ಜೈನಧರ್ಮ ತುಂಬಾ ಪ್ರಬಲವಾದ ಒಂದು ಧರ್ಮವಾಗಿತ್ತು.

ಡಂಬಳದಲ್ಲಿ ದೊರೆಯುವ ಕ್ರಿ.ಶ. ೧೦೫೪ರ ಶಾಸನವು ಜೈನ ಧರ್ಮದ ಉಲ್ಲೇಖವನ್ನೊಳಗೊಂಡ ಪ್ರಥಮ ಪ್ರಾಚೀನ ಶಾಸನವಾಗಿದ್ದು ಕಲ್ಯಾಣ ಚಾಲುಕ್ಯ ಅರಸ ತ್ರೈಲೋಕ್ಯಮಲ್ಲದೇವ ಆಳುತ್ತಿದ್ದಾಗ ಚತುಸ್ಸಮಯ ಸಮುದ್ಧಾರೆನಿಸಿದ ಹದಿನಾರು ಮಹಾಜನ ಸೆಟ್ಟಿಗಳ ಸಮ್ಮುಖದಲ್ಲಿ ಬೀರಯ್ಯ ಸೆಟ್ಟಿಯು ನಗರ ಜಿನಾಲಯಕ್ಕೆ ನೀಡಿದ ಸುವರ್ಣ ದಾನವನ್ನು ತಿಳಿಸುತ್ತದೆ. ಹಾಗೆಯೇ ಈ ದಾನವನ್ನು ಶ್ರಾವಕ ಸಮೂಹದವರು ಕಾಲಾಂತರದಲ್ಲಿ ನಡೆಸಿಕೊಂಡು ಬರುತ್ತಾರೆ ಎಂದು ಸೂಚಿಸುತ್ತದೆ.

---

೧೬. ಕ್ರಿ.ಶ. ೧೨೯೬ರ ಡೋಣಿ ಶಾಸನದಲ್ಲಿ ಉಲ್ಲೇಖವಿದೆ.

ಇನ್ನೊಂದು ಶಾಸನದಲ್ಲಿ ಎಕ್ಕಟಗರ ಕಲ್ಲಿಸೆಟ್ಟಿಯರ ಮೊಮ್ಮಗಳೂ ಮಹಾದೇವ ಸೆಟ್ಟಿಯರ ಮಗಳೂ ಆದ ಮಲ್ಲಿಯಕ್ಕ ಎನ್ನುವವಳು ಬಸದಿಯೊಂದನ್ನು ಕಟ್ಟಿಸಿ ಅಲ್ಲಿ ಪಾರ್ಶ್ವನಾಥ ಪ್ರತಿಮೆ ಪ್ರತಿಷ್ಠಾಪಿಸಿದುದನ್ನು ಪ್ರಸ್ತಾಪಿಸಲಾಗಿದೆ. ಹೀಗೆ ಈ ಊರಿನಲ್ಲಿ ನಗರ ಜಿನಾಲಯ, ಮಲ್ಲಯಕ್ಕನ ಬಸದಿ ಮತ್ತು ದಾಳಿಸೆಟ್ಟಿಯ ಬಸದಿ ಎಂಬ ಮೂರು ಜೈನ ಬಸದಿಗಳಿದ್ದ ಉಲ್ಲೇಖ ಶಾಸನಗಳಲ್ಲಿದ್ದರೂ ಈಗ ಯಾವುದೇ ಬಸದಿಯ ಕುರುಹುಗಳು ದೊರೆತಿರುವುದಿಲ್ಲ. ಆದರೆ ಮಲ್ಲಿಯಕ್ಕನ ಬಸದಿಯ ಪಾರ್ಶ್ವನಾಥ ವಿಗ್ರಹ ಗದಗ ಮ್ಯೂಸಿಯಂನಲ್ಲಿ ಇದೆ. ಹೀಗೆ ಈ ನಾಡಿನಲ್ಲಿ ಪ್ರಬಲವಾಗಿದ್ದ ಜೈನ ಧರ್ಮವು ೧೨ನೆಯ ಶತಮಾನದ ಹೊತ್ತಿಗೆ ಜನತೆಯ ಮೇಲೆ ತನಗಿದ್ದ ಹಿಡಿತವನ್ನು ಕಳೆದುಕೊಂಡಿತು. ಜೈನ ಬಸದಿಗಳು ಡಂಬಳದ ಬಹು ಧಾರ್ಮಿಕ ಪರಿಸರಕ್ಕೆ ಉದಾಹರಣೆ. ಡಂಬಳ ಪರಿಸರದಲ್ಲಿದ್ದ ನಖಕರು ಪ್ರಾಚೀನ ವರ್ತಕರು ಸಂತೆ ಪಟ್ಟಣಗಳಲ್ಲಿ ಸ್ಥಿರವಾದ ಅಂಗಡಿ, ದಿನಸಿ ವ್ಯಾಪಾರಿಗಳಾಗಿದ್ದರಂತೆ. ಇವರ ವಾಸ ಪಟ್ಟಣದಲ್ಲಿ ಮಾತ್ರ ಇವರು ವಿವಿಧ ಸರಕುಗಳನ್ನು ಬಯಲು ಅಂಗಡಿ ಹಾಗೂ ಮಾರುವ ಮಳಿಗೆಯಲ್ಲಿ ವ್ಯಾಪಾರ ಮಾಡುತ್ತಿದ್ದರು. ಇವರನ್ನು ಶಾಸನಗಳಲ್ಲಿ ನಖರರು[೧೭] ಎಂದು ಉಲ್ಲೇಖಿಸುತ್ತವೆ. ನಖರರು ಕಟ್ಟಿಸಿದ ನಖರ ಜಿನಾಲಯ ಅಥವಾ ನಗರ ಜಿನಾಲಯವು ಡಂಬಳದ ೩ ಶಾಸನಗಳಲ್ಲಿ ಉಲ್ಲೇಖಗೊಂಡಿದೆ. ಇವರು ಬೇರೆಡೆಗಳಲ್ಲಿಯೂ ಕರ್ನಾಟಕದಾದ್ಯಂತ ನಗರ ಜಿನಾಲಯ ನಗರೇಶ್ವರ ದೇವಾಲಯಗಳನ್ನು ಕಟ್ಟಿಸಿದ್ದಾರೆ.

ಕ್ರಿ.ಶ. ೧೦೫೯ರ ಶಾಸನದಿಂದ ಹಿಡಿದು ಕ್ರಿ.ಶ. ೧೧೮೬ರವರೆಗಿನ ಕಾಲದಲ್ಲಿ ಧರ್ಮ ಮಾಳಲಿನ ೪ ಶಾಸನಗಳಲ್ಲಿ ಪದಿನಮಿವರು(೧೬) ಸೆಟ್ಟಿಯರ ಉಲ್ಲೇಖವಿದೆ. ಪ್ರಾರಂಭದಲ್ಲಿ ಈ ಶೆಟ್ಟಿಯರು ಜೈನರಾಗಿದ್ದು ಮುಂದೆ ಶೈವ ಪ್ರಭಾವದ ಕಾರಣವಾಗಿ ಬಣಜಗ ಶೆಟ್ಟಿಗಳಾಗಿ ಕ್ರಮೇಣ ಲಿಂಗಾಯತ ಧರ್ಮದಲ್ಲಿ ಸೇರಿದರು ಎನ್ನುವುದಕ್ಕೆ ಡಂಬಳದ ಪ್ರಾಚೀನ ಶಾಸನಗಳೇ ಸಾಕ್ಷಿ ಒದಗಿಸುತ್ತವೆ. ಉದಾಹರಣೆಗೆ ಬಾಚಯ್ಯ ಶೆಟ್ಟಿ ನಗರ ಜಿನಾಲಯಕ್ಕೆ ಆಹಾರ ದಾನ ನೀಡಿದ ವರ್ಣನೆ ದೊರಕುತ್ತದೆ ಮತ್ತು ಸಮಸ್ತ ಜೈನಬಸದಿಗೆ ದತ್ತಿ ಕೊಡುವುದು ಕಂಡು ಬರುತ್ತದೆ.

ಮೂಲ ಡಂಬಳ ಗ್ರಾಮವನ್ನು ಸುತ್ತುವರಿದ ಬೃಹತ್ ಕರಿಕಲ್ಲಿನ ಸುಂದರ ಕೋಟೆಯನ್ನು ೧೧-೧೨ನೆಯ ಶತಮಾನದಲ್ಲಿ ನಿರ್ಮಿಸಲಾಗಿದ್ದು ಕೋಟೆಯ ಬಹುಭಾಗ ಭಗ್ನವಾಗಿದೆ. ಅದರೊಳಗೆ ಜೈನ ಬಸದಿ ಗಣಪತಿ ಮೂರ್ತಿಗಳಿವೆ.

ಜೈನ ಧರ್ಮಕ್ಕೆ ಸಂಬಂಧಿಸಿದ ಕೆಲವು ಸಂಗತಿಗಳು ಅಪ್ರಕಟಿತ ಶಾಸನಗಳಲ್ಲಿ ಅಡಗಿರುವುದು ಕಂಡು ಬರುತ್ತದೆ. ಈಗಿನ ಶಿರಹಟ್ಟಿ ತಾಲೂಕಿನಲ್ಲಿರುವ ಅಕ್ಕಿಗುಂದದಲ್ಲಿ ಉಪಲಬ್ಧವಾದ ಒಂದು ಶಾಸನದಲ್ಲಿ "ಚೌವೀಸ ತೀರ್ಥಂಕರರ ಪಾದ ಪೀಠದ ೧೨ನೆಯ ಶತಮಾನದ ಶಾಸನದಲ್ಲಿ ಹರ್ತಿಯ ಪದುಮಿಗಾವುಂಡಾದಿಗಳಿಂದ ಚೌವೀಸ ತೀರ್ಥಂಕರ ವಿಗ್ರಹ ಪ್ರತಿಷ್ಠಾಪನೆಯಾದುದು ತಿಳಿದು ಬರುತ್ತದೆ. ಇದರಿಂದ ಈ ಪ್ರದೇಶದಲ್ಲಿ ಜೈನ ಧರ್ಮದ ಪ್ರಭಾವವಿತ್ತು ಎಂಬುದು ಕಂಡು ಬರುತ್ತದೆ.

---

೧೭. ಡಾ. ಬಿ. ಆರ್. ಹಿರೇಮಠ, 'ಶಾಸನಗಳಲ್ಲಿ ವರ್ತಕರು,

ಇಂದಿನ ಶಿರಹಟ್ಟಿ ತಾಲೂಕಿನಲ್ಲಿರುವ ಬೆಳ್ಳಟ್ಟಿ ಅಂದು ಪುಲಿಗೇರಿ ೩೦೦ರ ಆಳ್ವಿಕೆಗೆ ಸಂಬಂಧಿಸಿದ ಒಂದು ಗ್ರಾಮವಾಗಿದ್ದು ಈ ಪರಿಸರದಲ್ಲಿ ಜೈನ ಪರಂಪರೆಯು ಪ್ರಬಲವಾಗಿ ಬೆಳೆದಿತ್ತು ಎಂಬುದಕ್ಕೆ ಇಲ್ಲಿ ಲಭ್ಯವಾದ ಶಾಸನಗಳೇ ಸಾಕ್ಷಿಯಾಗಿವೆ. ಗ್ರಾಮದ ಸಮೀಪದ ಗುಡ್ಡದ ಮೇಲೆ ಜೋಗಿಬಂಡಿಯ ಕ್ರಿ.ಶ.೯೯೦ರ ಶಾಸನದಲ್ಲಿ ಅಜ್ಜರಯ್ಯನ ಪೆರ್ಗಡೆ ಆಯತವರ್ಮನು ಬೆಳ್ಳಟ್ಟಿಯಲ್ಲಿ 'ಬೆಳ್ಳಟ್ಟಿ ಗಣದ ಬಸದಿ' ಕಟ್ಟಿಸಿದ ಮಾಹಿತಿ ಇದೆ. ಇದು ಯಾಪನೀಯ ಶಾಖೆಯ ಗಣವಾಗಿರುವುದು ಎಂಬುದು ಲಕ್ಕುಂಡಿ ಶಾಸನದಿಂದ ತಿಳಿದು ಬಂದಿದೆ. ಆದ್ದರಿಂದ ಬೆಳ್ಳಟ್ಟಿ ಪರಿಸರದಲ್ಲಿ ೧೦ನೆಯ ಶತಮಾನದ ಸುಮಾರಿಗೆ ಈ ಭಾಗದಲ್ಲಿ ಯಾಪನೀಯ ಶಾಖೆ ಜನಪ್ರೀಯವಾಗಿತ್ತೆಂಬುದು ಸ್ಪಷ್ಟವಾಗುತ್ತದೆ.

ಇಂದಿನ ರೋಣ ತಾಲೂಕಿನಲ್ಲಿರುವ ನರೇಗಲು ಪ್ರಾಚೀನ ಕಾಲದಲ್ಲಿ ಇಲ್ಲಿ ಒಂದು ಜೈನ ಬಸದಿ ಇತ್ತು. ಆ ಬಸದಿಗೆ ದಾನ ದತ್ತಿಯನ್ನು ನೀಡಿದ ಉಲ್ಲೇಖ ಶಾಸನದಲ್ಲಿ ಸಿಗುತ್ತದೆ. ರಾಷ್ಟ್ರಕೂಟ ೩ನೆಯ ಕೃಷ್ಣನ ಪಾದಪದ್ಮೋಪಜೀವಿ ಗಂಗ ಭೂತಯ್ಯನ ವಲ್ಲಭೆ ಪದ್ಮಬ್ಬರಸಿ ನರೇಗಲ್ಲಿನಲ್ಲಿ ಬಸದಿ ಹಾಗೂ ದಾನಶಾಲೆ ಮಾಡಿಸಿದಾಗ (ಕ್ರಿ.ಶ. ೯೫೦) ಮಾರಸಿಂಗಯ್ಯನೆಂಬುವನು ಜೈನ ಆಚಾರ್ಯನಿಗೆ ಕೆರೆಯೊಂದನ್ನು ದಾನ ಮಾಡಿದ ಉಲ್ಲೇಖವಿದೆ. ಗುಣಚಂದ್ರ ಪಂಡಿತನ ಗುರುಪರಂಪರೆಯೂ ಶಾಸನದಲ್ಲಿದೆ.

ಚಾಲುಕ್ಯ ಚಕ್ರವರ್ತಿ ಜಗದೇಕ ಮಲ್ಲನ ಕಾಲದ ಇನ್ನೊಂದು ಶಾಸನ ನರೇಗಲ್ಲಿನಲ್ಲಿದ್ದು ತುಂಬಾ ತ್ರುಟಿತವಾಗಿದೆ. ಜಿನಾಲಯವೂಂದಕ್ಕೆ ಕೊಟ್ಟ ದಾನದ ಉಲ್ಲೇಖವಿದೆ.

ರೋಣ ತಾಲೂಕಿನ ಗ್ರಾಮ ಜಕ್ಕಲಿಯ ಕಲ್ಮೇಶ್ವರ ದೇವಸ್ಥಾನದ ಎದುರು ಗೊಡೆಗೆ ಆನಿಸಿದ್ದ ಕಲ್ಯಾಣ ಚಾಲುಕ್ಯ ಚಕ್ರವರ್ತಿ ೬ನೆಯ ವಿಕ್ರಮಾದಿತ್ಯನ ಕಾಲದ ಶಿಲಾಶಾಸನದಲ್ಲಿ ಜಿನಾಲಯ. ಜಿನೇಂದ್ರ ಮುಂತಾಗಿ ಉಲ್ಲೇಖ ಬರುತ್ತದೆ. ಇದರಿಂದ ಅಲ್ಲಿಯೂ ಒಂದು ಜಿನಬಸದಿ ಇರುವ ಸಾಧ್ಯತೆ ಇದೆ. ಆದರೆ ಶಾಸನ ಬಹಳ ತ್ರುಟಿತವಾಗಿರುವುದರಿಂದ ವಿಷಯ ಸ್ಪಷ್ಟವಾಗುವದಿಲ್ಲ.

ರೋಣ ತಾಲೂಕಿನಲ್ಲಿರುವ ಈ ಗ್ರಾಮವು ಪ್ರಾಚೀನ ಕಾಲದಲ್ಲಿ ಕಲ್ಯಾಣ ಚಾಲುಕ್ಯ ೨ನೇ ಸೋಮೇಶ್ವರನ ಕನ್ನಡ ಸಂಧಿ ವಿಗ್ರಹಿ ಮತ್ತು ಪ್ರಚಂಡ ದಂಡನಾಯಕ ಜನ್ನಮಯ್ಯ ಜೈನನಾಗಿರಬೇಕೆನಿಸುತ್ತದೆ. ಇವನು ನಿಡಗುಂದಿಯಲ್ಲಿ ತ್ರೈಪುರುಷ ದೇವಾಲಯವನ್ನು ನಿರ್ಮಿಸಿ (೧೦೭೪) ಅದಕ್ಕೆ ಕಳಮನ ಪಳ್ಳಿಯನ್ನು ದಾನವಾಗಿ ಕೊಟ್ಟ ವಿವರ ಶಾಸನದಲ್ಲಿದೆ. ಇದರಿಂದ ಜೈನ ಧರ್ಮದವರೂ ಎಲ್ಲ ಧರ್ಮದ ದೇವತೆಗಳಿಗೆ ಸಮಾನಭಕ್ತಿ ಗೌರವಗಳನ್ನು ತೋರಿಸುವ ಕನ್ನಡಿಗರ ಅನುಕರಣೀಯ ಗುಣಕ್ಕೆ ಸಾಕ್ಷಿಯಾಗಿದೆ.

ರೋಣ ತಾಲೂಕಿನಲ್ಲಿರುವ ಈ ಗ್ರಾಮದಲ್ಲಿಯ ಶಾಸನದಿಂದ ಕಲ್ಯಾಣ ಚಕ್ರವರ್ತಿ ಜಯಸಿಂಹನ ಸಹೋದರಿಯಾದ ಅಕ್ಕದೇವಿ ಆಳ್ವಿಕೆಯ ಕಾಲದಲ್ಲಿ 'ಜಿನ, ಬುದ್ಧ, ಅನಂತ ರುದ್ರಾಗಮ ನಿಗದಿತ ಧರ್ಮಗಳನ್ನು ಪಾಲಿಸುತ್ತಿದ್ದಂತೆ ಉಲ್ಲೇಖಿಸುತ್ತಾ ಅವಳು ಗೋಕಾಗೆ ನೆಲೆವಿಡಿನಲ್ಲಿದ್ದಾಗ ವಿಕ್ರಮ ಪುರದ ಗುಣದ ಬೆಡಂಗಿ

ಜಿನಾಲಯಕ್ಕೆಂದು ಜೈನ ನಾಗಸೇನ ಪಂಡಿತನಿಗೆ ಭೂದಾನ ಮಾಡಿದಂತೆ ಮತ್ತೊಂದು ಶಾಸನ ಹೇಳುತ್ತದೆ. ಹೀಗಾಗಿ ಈ ಪರಿಸರದಲ್ಲಿ ಜೈನರು, ಜೈನ ಪರಂಪರೆ ಇತ್ತು ಎಂಬುದರ ಅಂಶ ಕಂಡು ಬರುತ್ತದೆ.

ಗದಗ ತಾಲೂಕಿನಲ್ಲಿರುವ ಈ ಗ್ರಾಮವು ಪ್ರಾಚೀನ ಕಾಲದಲ್ಲಿ ಇದು ಒಂದು ಜೈನ ಧರ್ಮ ಪರಂಪರೆಯನ್ನು ಬೆಳೆಸಿದ ಪ್ರಮುಖ ಸ್ಥಳವಾಗಿತ್ತು. ಯಾಪನೀಯ ಪಂಥದ ಕೇಂದ್ರವಾಗಿದ್ದು ಬಲದೇವ ಜಿನಾಲಯ ಕಲ್ಯಾಣಿ ಚಾಲುಕ್ಯರ ಕಾಲದಲ್ಲಿ ನಿರ್ಮಾಣವಾದ ಬಸದಿಯಾಗಿದೆ.

ಗದಗನಲ್ಲಿಯೂ ಕಲ್ಯಾಣಿ ಚಾಲುಕ್ಯರ ಕಾಲದ ಜೈನ ಬಸದಿಯೊಂದಿತ್ತು. ಕ್ರಿ.ಶ. ೧೧ನೇ ಶತಮಾನದ ಶಾಸನವೊಂದರಲ್ಲಿ ಚಂದ್ರಭೂಷಣ, ಮುನಿಯು ಸಲ್ಲೇಖನ ವೃತದಿಂದ ಸಮಾಧಿ ಮರಣ ಪಡೆದ ವಿವರಗಳಿವೆ.

ಈಗಿನ ಗದಗ ತಾಲೂಕಿನಲ್ಲಿರುವ ಈ ಗ್ರಾಮ ಪ್ರಾಚೀನ ಕಾಲದಲ್ಲಿ ಮುಳಗುಂದ ನಾಡು-೧೨ರ ಉಪವಿಭಾಗಕ್ಕೆ ಸೇರಿದ ಒಂದು ಗ್ರಾಮವಾಗಿತ್ತು. ಇದು ಒಂದು ಯಾಪನೀಯ ಪಂಥದ ಕೇಂದ್ರವಾಗಿದ್ದುದು ಇಲ್ಲಿರುವ ಯಾಪನೀಯ ಪಂಥದ ಮಠದ ಅವಶೇಷಗಳನ್ನು ಹೊಸೂರಿನಲ್ಲಿ ಈಗಲೂ ಕಾಣಬಹುದು.[೧೮]

ಇಂದಿನ ಮುಂಡರಗಿ ತಾಲೂಕಿನಲ್ಲಿರುವ ಈ ಗ್ರಾಮವು ಜೈನ ಪರಂಪರೆಯ ಕೇಂದ್ರವಾಗಿದ್ದಿತು. ಎಂಬುದನ್ನು ಇಲ್ಲಿ ಸಿಕ್ಕಿರುವ ತೀರ್ಥಂಕರರ ವಿಗ್ರಹಗಳು ಹಾಗೂ ಪಾದಗಟ್ಟೆಗಳಿಂದ ತಿಳಿಯಬಹುದಾಗಿದೆ.

ಇಂದಿನ ಗದಗಿನ ಜಿಲ್ಲೆಯ ಗದಗದಿಂದ ದಕ್ಷಿಣಕ್ಕಿರುವ ಚಿಂಚಲಿ ಗ್ರಾಮವು ಪ್ರಾಚೀನ ಕಾಲದಲ್ಲಿ ಅಂದರೆ ಬೆಳ್ವೊಲ-೩೦೦ರ ಒಂದು ಉಪ ವಿಭಾಗವಾಗಿತ್ತು. ಚಿಂಚಲಿ-೫೦ ಎಂದು ಪ್ರಸಿದ್ಧಿಯನ್ನು ಪಡೆದಿತ್ತು. ಇಲ್ಲಿರುವ ಬಂಡೆಯ ಮೇಲಿರುವ ವೀರಭದ್ರ, ಭೈರವ, ಪಾದಮುದ್ರೆ, ತೀರ್ಥಂಕರ, ನಂದಿ ಛಾಯಾಚಂದ್ರನಾಥ ಮೊದಲಾದ ರೇಖಾಚಿತ್ರಗಳು ಅಪರೂಪದ್ದಾಗಿವೆ. ಇವು ವಿಜಯನಗರ ಅರಸರ ಕಾಲದಲ್ಲಿ ರಚಿತವಾಗಿರುವುದು ಕಂಡು ಬರುತ್ತಿದೆ. ಇಲ್ಲಿರುವ ಛಾಯಾಚಂದ್ರನಾಥವು ಜೈನರ ಒಂದು ಪ್ರಸಿದ್ಧಿಯಾತ್ರಾ ಸ್ಥಳವಾಗಿದೆ. ಪ್ರತಿವರ್ಷ ಯುಗಾದಿ ಪಾಡ್ಯದಂದು ಬಂಡೆಗಲ್ಲುನ ಮೇಲೆ ಚಂದ್ರನಾಥನ ಛಾಯಾ ಮೂಡುತ್ತದೆ. ಎಂಬ ಕಲ್ಪನೆ ಇರುವುದರಿಂದ ಪ್ರತಿವರ್ಷವೂ ಯುಗಾದಿ ಪಾಡ್ಯದಂದು ಜೈನ ಮತಿಯರು ದಿಗಂಬರ ಶ್ವೇತಂಬರ ಮುನಿಗಳ ಶ್ರಾವಕರು ಬಂದು ಪೂಜೆ ವಿಧಿ-ವಿಧಾನಗಳನ್ನು ನೆರವೇರಿಸುತ್ತಾರೆ. ಇಂದಿಗೂ ಪ್ರಸಿದ್ಧಿಯನ್ನು ಪಡೆದಿರುವ ಒಂದು ಜೈನ ಕೇಂದ್ರವಾಗಿದೆ.

ಗದಗನಿಂದ ದಕ್ಷಿಣಕ್ಕೆ ೧೨ಕಿ.ಮೀ. ದೂರದಲ್ಲಿರುವ ಈ ಪ್ರದೇಶ ಮುಳಗುಂದದಿಂದ ಉತ್ತರಕ್ಕೆ ೬ಕಿ.ಮೀ. ದೂರದಲ್ಲಿದೆ. ಪ್ರಾಚೀನ ಮುಳಗುಂದ ನಾಡು-೧೨ರಲ್ಲಿ ಬರುವ ಈ ಪ್ರದೇಶದಲ್ಲಿ ದಿಗಂಬರ ಪರಂಪರೆಯು ಪ್ರಭಾವ ಕಂಡು ಬರುತ್ತದೆ. ಸದ್ಯ ಇಲ್ಲಿ ನಾವಳ್ಳಿ, ಹೂಂಬಣ್ಣವರ ಎಂಬ ಅಡ್ಡನಾಮ ಹೊಂದಿದ ದಿಗಂಬರ ಪಂಥದ ಜೈನರು ವಾಸವಾಗಿದ್ದು ಒಂದು ಬಸದಿಯನ್ನು ನಿರ್ಮಾಣ ಮಾಡಿದ್ದಾರೆ. ಚರ್ತುಮಾಸ ಸಂದರ್ಭದಲ್ಲಿ

---

೧೮. S.I.I. ಸಂ. ೧೧-೧, ನಂ. ೬೫, ಕ್ರ.ಶ. ೧೦೨೮-೨೯ರ ಹೊಸೂರು ಶಾಸನ, ಪು. ೫೫-೫೭.

ಪೂಜೆ ಸಲ್ಲಿಸುತ್ತಾರೆ. ಸದ್ಯ ಗದಗ ಜಿಲ್ಲಾ ದಿಗಂಬರ ಪಂಥದ ಸಂಘಟನೆಯ ಅಧ್ಯಕ್ಷರಾಗಿ ಇದೇ ಊರಿನ ಶ್ರೀ ಬಿ. ಎಸ್. ನಾವಳ್ಳಿಯವರು ಕಾರ್ಯ ನಿರ್ವಹಿಸುತ್ತಿದ್ದು ಸಂಘಟನೆಯ ಮೂಲಕ ಜೈನರನ್ನು ಒಂದುಗೂಡಿಸುವ ಕಾರ್ಯದಲ್ಲಿ ತೊಡಗಿದ್ದಾರೆ. ಗದಗ ಪರಿಸರದಲ್ಲಿ ದಿಗಂಬರ ಪಂಥವು ಬಹಳಷ್ಟು ಪ್ರಾಚೀನತೆಯನ್ನು ಹೊಂದಿದ್ದು ಕೃಷಿ ಪ್ರಧಾನ ಉದ್ಯೋಗವಾಗಿದ್ದರು ವ್ಯಾಪಾರವನ್ನು ತಮ್ಮ ಮೂಲ ಉದ್ಯಮವನ್ನಾಗಿ ಮಾಡಿಕೊಂಡು ಗ್ರಾಮದಿಂದ ಪಟ್ಟಣಕ್ಕೆ ಹೋಗಿ ನೆಲೆಸುತ್ತಿದ್ದಾರೆ ಎಂಬುದನ್ನು ಕ್ಷೇತ್ರ ಅಧ್ಯಯನದ ಸಮಯದಲ್ಲಿ ಕಂಡು ಬಂದಿತ್ತು. ಹಾಗಾಗಿ ಪ್ರಾಚೀನ ಕಾಲದಿಂದ ಜೈನರ ನೆಲೆವಿಡಾಗಿರುವ ಹರ್ತಿಯು ಇಂದಿಗೂ ದಿಗಂಬರ ಸಂಘದ ಮೂಲ ಸ್ಥಳವಾಗಿ ಬೆಳೆದು ಸಾಗುತ್ತಿದೆ.

ಲಕ್ಷ್ಮೇಶ್ವರದಿಂದ ಪೂರ್ವಕ್ಕೆ ೨೫ಕಿ.ಮೀ. ದೂರದಲ್ಲಿರುವ ಈ ಸ್ಥಳ ಪ್ರಾಚೀನ ಪುಲಿಗೆರೆ-೩೦೦ಕ್ಕೆ ಸಂಬಂಧಿಸಿದ ಪ್ರದೇಶವಾಗಿತ್ತು. ಇಲ್ಲಿ ದಿಗಂಬರ ಸಂಘವು ಪ್ರಭಾವಯುತವಾಗಿ ಬೆಳೆದು ಬಂದಿರುವ ಐತಿಹ್ಯಗಳು ಸಿಗುತ್ತವೆ. ಸದ್ಯ ಜೈನ ಧರ್ಮದ ಪ್ರಮುಖ ಕೇಂದ್ರ ಇದಾಗಿದೆ.

## ೨.೧.೨. ರಾಜಕೀಯ ನೆಲೆ-ಹಿನ್ನೆಲೆ :

ಗದಗ ಪರಿಸರದಲ್ಲಿ ಇತಿಹಾಸ ಪೂರ್ವದಲ್ಲಿನ ಜನರು ಬಳಸುತ್ತಿದ್ದ ವಸ್ತುಗಳ ಅವಶೇಷಗಳು ದೊರಕಿವೆ. ಶಿಲಾಯುಗದ ಮಾನವನ ಅಲೆಮಾರಿ ಜೀವನ ಕೊನೆಯಾಗಿ ಕೃಷಿ-ಪಶುಪಾಲನೆ ಆರಂಭಿಸಿದಾಗ ಅವರು ಬಳಸುತ್ತಿದ್ದ ಕಪ್ಪು, ಬಿಳಿ, ಕೆಂಪು, ಬೂದು ಬಣ್ಣದ ಮಡಿಕೆ-ಕುಡಿಕೆಗಳನ್ನೊಳಗೊಂಡ ಆ ಕಾಲದ ನಿವೇಶನಗಳು ನರಗುಂದ ಮತ್ತು ರೋಣ ತಾಲೂಕುಗಳಲ್ಲಿ ದೊರೆತಿವೆ. ರೋಣದ ಆಲೂರದಲ್ಲಿ ಕಬ್ಬಿಣದ ಬೃಹತ್‌ಶಿಲಾ ಸಾಂಸ್ಕೃತಿಯ ಕಬ್ಬಿಣದ ಬಾಣ, ಚಾಕು, ಬರ್ಚಿ ಮತ್ತು ಸಂಗೀತ ಸಾಧನಗಳು ದೊರೆತಿವೆ.

'ಕುಂತಲ' ಎಂಬ ಪದವು ಬಹು ಪ್ರಾಚೀವಾಗಿದ್ದರೂ ಕವಿರಾಜ ಮಾರ್ಗದ ಕರ್ತೃವು ಬಣ್ಣಿಸಿದ 'ಕಾವೇರಿಯಿಂದಮಾ ಗೋದಾವರಿಮಿರ್ದ ಕನ್ನಡ ನಾಡು' ೬ನೇ ಶತಮಾನದ ನಂತರ ಬದಾಮಿ ಚಾಲುಕ್ಯರ ಕಾಲದಲ್ಲಿ ಸ್ಫುಟವಾಗಿ ರೂಪುಗೊಂಡಿತೆಂದು ಅಧ್ಯಯನದಿಂದ ಸ್ಪಷ್ಟವಾಗುತ್ತದೆ. ೬ನೇ ಶತಮಾನದಿಂದ ೧೨ನೇ ಶತಮಾನದವರೆಗೂ ಒಂದು ಭೌಗೋಳಿಕ, ಸಾಂಸ್ಕೃತಿಕ ಘಟಕವಾಗಿ ಉಳಿಯಿತು. ೧೩ನೇ ಶತಮಾನದ ಆರಂಭದ ದಶಕಗಳಲ್ಲಿ ಅಖಂಡ ಕರ್ನಾಟಕ ಐತಿಹಾಸಿಕ ಮತ್ತು ರಾಜಕೀಯ ಕಾರಣಗಳಿಂದಾಗಿ ಇಬ್ಭಾಗವಾಗಿ ಎರಡು ಕನ್ನಡ ರಾಜಮನೆತನಗಳ ಆಳ್ವಿಕೆಗೆ ಒಳಪಡುವಂತಾಯಿತು. ಉತ್ತರಭಾಗ ಸೇವುಣರ ಆಡಳಿತಕ್ಕೆ ಒಳಪಟ್ಟು, ಅದರ ದಕ್ಷಿಣದ ಭಾಗ ಹೊಯ್ಸಳರ ವಶಕ್ಕೆ ಬಂದಿತು.

'ಬೆಳ್ವೊಲಮುನ್ನೂರು' ಕುಂತಲ ದೇಶದಲ್ಲಿ ಮುನ್ನೂರು ಗ್ರಾಮಗಳನ್ನೊಳಗೊಂಡ ಒಂದು ವಿಸ್ತಾರವಾದ ಆಡಳಿತ ವಿಭಾಗ. ಇದು ಕುಂತಲರ ಮಧ್ಯವರ್ತಿ ಪ್ರದೇಶವಾದ ಧಾರವಾಡ, ವಿಜಾಪುರ ಮತ್ತು ರಾಯಚೂರು ಜಿಲ್ಲೆಗಳ ಭಾಗಗಳನ್ನೊಳಗೊಂಡಿದ್ದು ಕರ್ನಾಟಕದ ಇತಿಹಾಸದುದ್ದಕ್ಕೂ ರಾಜಕೀಯ, ಸಾಂಸ್ಕೃತಿಕ ಹಾಗೂ ಧಾರ್ಮಿಕ

ಚಟುವಟಿಕೆಗಳ ಕೇಂದ್ರವಾಗಿದ್ದಿತು. 'ಪುಲಿಗೇರಿ ಮುನ್ನೂರು' ಎಂಬ ಆಡಳಿತ ವಿಭಾಗವು ಇದರ ಉತ್ತರದ ನೆರೆಯ ಪ್ರಾಂತ ಬೆಳ್ವೊಲಮುನ್ನೂರು. ಇವೆರಡು ಒಂದಕ್ಕೊಂದು ಹೊಂದಿಕೊಂಡಿದ್ದರಿಂದ ಅನೇಕ ಶಾಸನಗಳಲ್ಲಿ ಇವೆರಡೂ ಜೊತೆಜೊತೆಯಾಗಿಯೇ ಹೆಸರಿಸಲ್ಪಟ್ಟಿವೆ. ಅಲ್ಲದೇ ಇವೆರಡಕ್ಕೂ ಸೇರಿ 'ಪುಲಿಗೇರಿಮುನ್ನೂರು ಬೆಳ್ವಲಮುನ್ನೂರರ ಅಂತೆರಡು ನೂರಂ' ಎಂಬ ಉಲ್ಲೇಖಗಳು ಹಲವಾರು ಶಾಸನಗಳಲ್ಲಿ ದೊರೆಯುತ್ತವೆ. ಆದರೂ ಇವೆರಡು ಬೇರೆ-ಬೇರೆ ಪ್ರಾಂತಗಳಾಗಿದ್ದು ಬೇರೆ-ಬೇರೆ ಅಧಿಕಾರಿಗಳಿಂದ ಆಳಲ್ಪಡುತ್ತಿದ್ದವು ಎಂಬುದು ಸ್ಪಷ್ಟವಾಗಿದೆ.

ಬೆಳ್ವಲಮುನ್ನೂರು ವಿಭಾಗವನ್ನು ಆಡಳಿತದ ಅನುಕೂಲತೆಗಾಗಿ ಹಲವು ಉಪವಿಭಾಗಗಳನ್ನಾಗಿ ವಿಂಗಡಿಸಲಾಗಿದ್ದಿತು. ಇದರಲ್ಲಿ 'ಬೆಣ್ಣೆದಡಿ ೭೦' 'ಚಿಂಚಲಿ ೫೦' 'ನವಲಗುಂದ ೪೦' 'ಕೂಳನೂರು ೩೦' 'ಕುಕನೂರ ೩೦' 'ನೆರೆಯಂಗಲ್ಲ ೧೨' 'ಬೆಳ್ವಣಿಕೆ ೧೨' ಮತ್ತು 'ಮುಳಗುಂದ ೧೨' ಎಂದು ವಿಭಾಗಿಸಲಾಗಿದ್ದಿತು. ಇದರಲ್ಲಿ ನವಲಗುಂದ ೪೦, ಕುಕನೂರ ೩೦ ಪ್ರದೇಶಗಳನ್ನು ಬಿಟ್ಟು ಉಳಿದೆಲ್ಲಾ ಪ್ರದೇಶಗಳು ಈಗಿನ ಗದಗ ಜಿಲ್ಲೆಯ ವ್ಯಾಪ್ತಿಯಲ್ಲಿ ಬರುವ ಗ್ರಾಮಗಳು, ಪಟ್ಟಣಗಳಾಗಿವೆ ಎಂಬುವುದು ಅಧ್ಯಯನದಿಂದ ಕಂಡುಬಂದಿದೆ. ಪುಲಿಗೇರಿ ಮುನ್ನೂರಿಗೆ ಸಂಬಂಧಪಟ್ಟ ಬಹಳಷ್ಟು ಪ್ರದೇಶಗಳು ಇಂದು ಹಾವೇರಿ ಜಿಲ್ಲೆಯ ಹಾಗೂ ಧಾರವಾಡ ಜಿಲ್ಲೆಯ ವ್ಯಾಪ್ತಿಗೆ ಒಳಪಟ್ಟಿವೆ.

### ೨.೧.೩. ಧಾರ್ಮಿಕ ನೆಲೆ-ಹಿನ್ನೆಲೆ :

ಋಗ್ವೇದಕಾಲ ಹಾಗೂ ಅದಕ್ಕಿಂತ ಹಿಂದೆ ಜೈನರಿದ್ದ ಬಗ್ಗೆ ನೇರ ಉಲ್ಲೇಖವಿಲ್ಲವಾದರೂ ಅರ್ಹಂತರ ಬಗೆಗಿನ ಮಾತುಗಳಿವೆ. ಅಲ್ಲದೆ ಋಗ್ವೇದ ಕಾಲಕ್ಕಿಂತ ತುಸು ಪೂರ್ವದಲ್ಲೇ ವರ್ಣವ್ಯವಸ್ಥೆ ಇಲ್ಲದ ಪಶುಬಲಿರಹಿತ ಪೂಜಾ ವ್ಯವಸ್ಥೆಯನ್ನುಳ್ಳ ಕ್ಷತ್ರೀಯ ಸಮುದಾಯವೊಂದು ಇದ್ದ ಬಗ್ಗೆ ಉಲ್ಲೇಖವಿದ್ದು ಅವರು ಜೈನರೆಂದು ಕೆಲ ವಿದ್ವಾಂಸರು ಅಭಿಪ್ರಾಯಪಟ್ಟಿದ್ದಾರೆ. ಜೈನ ತೀರ್ಥಂಕರೆಲ್ಲರೂ ಕ್ಷತ್ರಿಯರೇ ಎಂಬುದು ಇಲ್ಲಿ ಗಮನಿಸಬೇಕಾದ ಅಂಶ. ವೇದಗಳಲ್ಲಿ ಋಗ್ವೇದ ಅತೀ ಪ್ರಾಚೀನವಾಗಿದ್ದು (ಸು. ಕ್ರಿ.ಶ.ಪೂ. ೧೫೦೦) ಅದರಲ್ಲಿ ಬರುವ 'ವಾತಾರಶನಾ' (ವ್ರಾತ್ಯ' ಶಬ್ದವು ಸಹ 'ವಾತಾರಶಾನಾ' ಶಬ್ದದ ಪರ್ಯಾಯವಾಚಿಯಾಗಿದೆ.) ಮುನಿಗಳನ್ನು ನಿರ್ಗ್ರಂಥ ಮುನಿಗಳೆಂದು ಕರೆದಿದ್ದು ಆ ಮುನಿಗಳ ನಾಯಕ ಕೇಶಿಮುನಿ ಅರ್ಥಾತ್ ವೃಷಭದೇವನೆಂದು ತಿಳಿದು ಬರುತ್ತದೆ. ಅವರ ಅಚಮನ, ಅದಂತ ಧವನ, ಮಲಧಾರಣ, ಮೌನವ್ರತ, ಉಗ್ರತಪಸ್ಸು ಮುಂತಾದ ವಿಚಾರಗಳು ಆರ್ಯ ಸಂಸ್ಕೃತಿಗಿಂತ ಭಿನ್ನವಾದ ಶ್ರಮಣ ಪರಂಪರೆಯ ಪ್ರಾಚೀನ ರೂಪವನ್ನು ಪರಿಚಯಿಸುತ್ತವೆ.[೧೯] ಋಗ್ವೇದದಲ್ಲಿಯೇ ಬರುವ

---

೧೯. ಭಾಷಾಂತರಿತ ವ್ಯಾಖ್ಯೆಗಳನ್ನು ಈ ಗ್ರಂಥದಿಂದ ಆಯ್ದುಕೊಂಡಿದೆ. ಪ್ರೊ. ಎಚ್. ಬಿ. ಮಾಳಿ, (ಭಾರತೀಯ ಸಮಾಜ, ಪು. ೩೯.)

ಶಿಶ್ನದೇವರ ಹೆಸರು ವೃಷಭನ ನಗ್ನತ್ವವನ್ನೇ ಪ್ರತಿನಿಧಿಸುತ್ತದೆ. ಮತ್ತು ಶಿಶ್ನದೇವರ ಯಜ್ಞವಿರೋಧಿ, ವೈದಿಕ ವಿರೋಧಿ ವಿಚಾರಗಳು ಶ್ರಮಣ ಧರ್ಮಕ್ಕೆ ಅನ್ವಯವಾಗುವಂತಹವು.

ಆರ್ಯೇತರರನ್ನು ವರ್ಣಿಸುವಲ್ಲಿ ಅವರು ಅಯಜ್ವನರು (ಯಜ್ಞಬಲಿ ಇಲ್ಲದವರು) ಅಕರ್ಮನ್‌ರು (ವೈದಿಕ ಕ್ರಿಯಾಕಾಂಡ ಶೂನ್ಯರು) ಅವೇದ್ಯರು (ದೇವರ ವಿಷಯದಲ್ಲಿ ಉದಾಸೀನರು) ಅನ್ಯವ್ರತರು (ಭಿನ್ನವ್ರತವುಳ್ಳವರು) ಅದುರುಕ್ತ ವಾಕ್ಯಗಳನ್ನು ದುರುಕ್ತ ರೀತಿಯಿಂದ ಮಾತನಾಡುವವರು. ಎಂಬ ವಿಚಾರಗಳಲ್ಲೆವೂ ಶ್ರಮಣ ಮನೋಧರ್ಮವನ್ನು ಪ್ರತಿನಿಧಿಸುತ್ತವೆ. ವೈದಿಕ ಗ್ರಂಥಗಳಲ್ಲಿ ಇವರನ್ನು ಅರ್ಹತ್, ವ್ರತ್ಯ, ಶ್ರಮಣ ಮುಂತಾದ ಶಬ್ದಗಳಿಂದ ಉಲ್ಲೇಖಿಸಿದ್ದು ಕಂಡುಬರುತ್ತದೆ. ಆದ್ದರಿಂದ ಋಗ್ವೇದದಲ್ಲಿಯೇ ವೃಷಭ ತೀರ್ಥಂಕರನ ಕಥೆ ಸ್ಥೂಲವಾಗಿ ಬರುವುದನ್ನು ನೋಡಿದಾಗ ಆ ಕಾಲದ ಜೈನ ಸಮಾಜದ ಸಾಮಾಜಿಕ ಧಾರ್ಮಿಕ ನಡವಳಿಕೆಗಳತ್ತ ಬೊಟ್ಟು ಮಾಡುತ್ತವೆ.[೨೦]

ಅರ್ಹತ್ ಧರ್ಮದ ಎರಡು ಪಂಗಡಗಳು 'ಪಣಿ'(ವಣಿಜ?) ಮತ್ತು 'ವ್ರಾತ್ಯ' ಎಂಬೆರಡು ಸಮುದಾಯಗಳ ಜನರು ಅರ್ಹತ್ ಧರ್ಮದ ಅನುಯಾಯಿಗಳಾಗಿದ್ದರೆಂದು ವೇದಗಳಲ್ಲಿ ಹೇಳಲ್ಪಟ್ಟಿದೆ. ಈ ಸಮುದಾಯಗಳ ಜನರ ನಡಾವಳಿಗಳನ್ನು ಪಂಡಿತ ಹೀರಾಲಾಲ್ ಅವರು ಹೀಗೆ ಸಂಗ್ರಹಿಸಿ ನಿರೂಪಿಸಿದ್ದಾರೆ.[೨೧]

ಭಾರತದ ಪ್ರಾಚೀನ ವ್ಯಾಪಾರಿಗಳು ಶ್ರೀಮಂತ ಹಾಗೂ ಸಂಪನ್ನ ಜನ, ಧನಜ್ಞಾನ ಎರಡರಲ್ಲೂ ದೊಡ್ಡವರಾಗಿದ್ದರು, ಯಜ್ಞಯಾಗಗಳಿಂದ ಕೂಡಿದ ಸಂಸ್ಕೃತಿಯನ್ನು ಒಪ್ಪುತ್ತಿರಲಿಲ್ಲ. ಬ್ರಾಹ್ಮಣರಿಗೆ ದಾನದಕ್ಷಿಣೆ ಇತ್ಯಾದಿಗಳನ್ನು ಕೊಡುತ್ತಿರಲಿಲ್ಲ. ದೇಶದ ವ್ಯಾಪಾರದ ಬಹುಪಾಲು ಇವರ ಕೈಯಲ್ಲಿತ್ತು. ಇವರು ಕಾರವಾನಗಳನ್ನು ಕಟ್ಟಿಕೊಂಡು ಅರಬ್ ಹಾಗೂ ಉತ್ತರ ಆಫ್ರಿಕಾಗಳಿಗೆ ಅನಂತರದಲ್ಲಿ ಚೀನಾಕ್ಕೆ ವ್ಯಾಪಾರಕ್ಕಾಗಿ ಹೋಗುತ್ತಿದ್ದರು.

ಇವರು ಆರ್ಯರು ಹಾಗೂ ಕ್ಷತ್ರೀಯರು ಇವರನ್ನು ಅಬ್ರಾಹ್ಮಣ ಕ್ಷತ್ರಿಯರೆಂದು ಕರೆಯಲಾಗುತ್ತಿತ್ತು. ಇವರು ಬ್ರಹ್ಮಬ್ರಾಹ್ಮಣ ಯಜ್ಞಯೋಗಗಳನ್ನು ಮನ್ನಿಸುತ್ತಿರಲಿಲ್ಲ.

ಈ ವ್ರಾತ್ಯರು 'ದಲಿತ ಹಾಗೂ ಕೆಳವರ್ಗದವರು 'ಎಂದು ಕೆಲ ವಿದ್ವಾಂಸರು ತರ್ಕಿಸಿದ್ದರೂ ಅದು ಹಾಗಲ್ಲವೆಂದೂ ಪಂಡಿತ ಹೀರಲಾಲರು ಅಭಿಪ್ರಾಯಪಡುತ್ತಾ ಅದಕ್ಕೆ ಬೆಂಬಲವಾಗಿ ಪಂಚವೀಶ ಬ್ರಾಹ್ಮಣರರಲ್ಲಿ ವ್ರಾತ್ಯರಿಗೆ ಯಜ್ಞವಿಧಾನವನ್ನು ವಿವರಿಸುವುದನ್ನು ಸಾಯಣನು ವ್ರಾತ್ಯರ ಬಗ್ಗೆ ವ್ಯಾಖ್ಯೆ ನೀಡುತ್ತಾ "ಕಂಚಿದ್ವಿದತ್ತಮಂ ಮಹಾಧಿಕಾರಂ ಪುಯ್ಯಶೀಲಂ ವಿಶ್ವಾಸಮ್ಮಾನ್ಯಂ ಕರ್ಮಪ ಬ್ರಾಹ್ಮಿಣ್ವೈರ್ವಿದ್ದಿಷ್ಟಂ ವ್ರಾತ್ಯಮನು ಲಕ್ಷ್ಯ ವಚನ ಮಿತಿ ಮಂತವ್ಯಂ" ಎಂದು ಹೇಳಿರುವುದನ್ನು[೨೨] ಆಧಾರವಾಗಿ ನೀಡುತ್ತಾರೆ. ಅಥರ್ವಣ ವೇದವು 'ವ್ರಾತ್ಯ' ಎಂಬುದಕ್ಕೆ

---

೨೦. ಮಿರ್ಜಿ ಅಣ್ಣಾರಾಯರು, ಜೈನ ಧರ್ಮ, ಪು. ೧೪.

೨೧. ಪಂ. ಹಿರಾಲಾಲ್ ದುಗ್ಗಾಡ್, ಮಧ್ಯ ಏಷಿಯಾ ಔರ್ ಪಂಜಬ್ ಮೇ ಜೈನ್ ಧರ್ಮ.

೨೨. ಮಿರ್ಜಿ ಅಣ್ಣಾರಾಯರು, ಜೈನ ಧರ್ಮ, ಪು. ೨೪ ರಲ್ಲಿ ಉಲ್ಲೇಖವಿದೆ.

'ತಿರುಗಾಡುವ ಸಾಧು' ಎಂದೂ ಅರ್ಥೈಸುತ್ತದೆ. (ಅಥರ್ವವೇದ ೫/೨೨ ೪೫/೮) ಒಟ್ಟಾರೆ ವೇದ ಪೂರ್ವ ಹಾಗೂ ವೇದಗಳ ಕಾಲದ ಜೈನ ಸಮಾಜದ ಲಕ್ಷಣಗಳನ್ನು ವೇದಗಳಲ್ಲಿ ಕಂಡು ಬರುವ ಹಾಗೆ ಹೀಗಿ ಕ್ರೂಢೀಕರಿಸಬಹುದು.

೧. ಈ ಧರ್ಮವನ್ನು 'ಅರ್ಹತ್ ಧರ್ಮ' ಎಂದು ಕರೆಯಲಾಗುತ್ತಿತ್ತು. 'ಜೈನಧರ್ಮ' ಎಂಬ ಹೆಸರಿನ ಬಳಕೆ ಆಗ ಬಹುಶಃ ಇರಲಿಲ್ಲ.

೨. ಈ ಧರ್ಮದಲ್ಲಿ ಗೃಹಸ್ಥ ಹಾಗೂ ಸಾಧು ವರ್ಣಗಳಿದ್ದವು. ಸಾಧುಗಳು ಒಂದೇ ಕಡೆ ಸ್ಥಿರವಾಗಿ ನಿಲ್ಲದೆ ತಿರುಗಾಡುವವರಾಗಿದ್ದರು.

೩. ಅರ್ಹತ್ ಧರ್ಮನುಯಾಯಿಗಳು ವೇದೂಕ್ತ ಯಜ್ಞ-ಯಾಗಗಳ ಹಾಗೂ ಪಶು ಬಲಿಯ ವಿರೋಧಿಗಳಾಗಿದ್ದರು, ಇವರು ಜ್ಞಾನಿಗಳೂ ಆಗಿದ್ದರು.

೪. ಇವರಲ್ಲಿ ಪಣಿ ಹಾಗೂ ವ್ರಾತ್ಯ ಎಂಬ ಎರಡು ಪಂಗಡಗಳಿದ್ದವು. ಈ ಪಂಗಡಗಳು ವೃತ್ತಿ ಆಧಾರಿತವಾಗಿದ್ದವು.

೫. ವ್ಯಾಪಾರ ಹಾಗೂ ರಾಜ್ಯಾಡಳಿತ (ಅಥವಾ ಯೋಧ್ಧತ್ವ) ಇವರ ಮುಖ್ಯ ವೃತ್ತಿಗಳಾಗಿದ್ದವು.

ಮಾನವ ಸಮಾಜ ವ್ಯವಸ್ಥೆಯ ವಿಕಾಸವನ್ನು ಎರಡು ಮುಖ್ಯ ಹಂತಗಳಾಗಿ ಜೈನಾಗಮಗಳು ವಿಭಾಗಿಸುತ್ತವೆ. ಆಹಾರವನ್ನು ಉತ್ಪಾದಿಸುವ ಗೋಜಿಲ್ಲದ ಸಿದ್ಧವಾದ ಆಹಾರವನ್ನು (ಗಡ್ಡೆ, ಗೆಣಸು, ಹಣ್ಣುಗಳು ಇತ್ಯಾದಿ) ಪಡೆದು ಉಪಯೋಗಿಸುತ್ತಿದ್ದ ಕಾಲ ಒಂದು ಮನುಷ್ಯ ಒಂದು ಕಡೆ ನೆಲೆಯಾಗಿ ನಿಂತು ವಿವಿಧ ಬಗೆಯ ಉದ್ಯೋಗಗಳನ್ನು ಕೈಗೊಂಡು ಆಹಾರವನ್ನು ಉತ್ಪಾದಿಸತೊಡಗಿದ ಕಾಲ ಇನ್ನೊಂದು. (ಇದನ್ನು ಜೈನಾಗಮಗಳು ಸಹಜವಾದ ಅಲಂಕಾರಿಕ ಭಾಷೆಯಲ್ಲಿ ಕಲ್ಪವೃಕ್ಷಗಳೆಂದು ಜನಬೇಕಾದ ವಸ್ತುಗಳನ್ನು ಪಡೆಯುತ್ತಿದ್ದರೆಂದೂ ಅನಂತರದಲ್ಲಿ ಅವು ನಶಿಸಿ ಹೋದವೆಂದೂ ಹೇಳುತ್ತವೆ. ಇಂತಹ ಕಾಲಘಟ್ಟದ ಮನು ಜನಾಂಗದಲ್ಲಿ ಯಾವ ಧರ್ಮ ನಾಗರಿಕತೆ-ಸಂಸ್ಕೃತಿಯು ವಿಕಾಸ ಹೊಂದಿರಲಿಲ್ಲ. ಇಂತಹ ಸಂದರ್ಭವನ್ನು ಜೈನ ಪರಂಪರೆ ಭೋಗ ಭೂಮಿಯೆಂದು ಹೆಸರಿಸಿದೆ. ಕಾಲಾಂತರದಲ್ಲಿ ಮನುಕುಲ ವೃದ್ಧಿಯಾದಂತೆ ವ್ಯವಸ್ಥೆಯಲ್ಲಿ ಬದಲಾವಣೆಯಾಯಿತು. ಇದಕ್ಕೆ ಕರ್ಮಭೂಮಿಯೆಂದು ಕರೆದರು. ಕರ್ಮಭೂಮಿಯಲ್ಲಿ ಮನುಕುಲದ ನಾಗರಿಕತೆ ಮತ್ತು ಸಂಸ್ಕೃತಿಗೆ ಕಾರಣರಾದವರು ೧೪ ಜನ ಮನುಗಳು ಇವರನ್ನು ಜೈನ ಗ್ರಂಥಗಳು 'ಕುಲಂಕರ'[೨೩]ರೆಂದು ಕರೆದಿವೆ. ಕುಲಂಕರರಲ್ಲಿ ಕೊನೆಯವನಾದ ನಾಭಿರಾಜನ ಮಗನೇ ವೃಷಭದೇವ ಇವನಿಂದಲೇ ಜೈನಧರ್ಮ ಪ್ರವರ್ತಿತವಾಯಿತೆಂದು ತಿಳಿದು ಬರುತ್ತದೆ. ನಾಭಿರಾಜ ಮತ್ತು ಮರುದೇವಿಯಲ್ಲಿ ಹುಟ್ಟಿದ ವೃಷಭನಾಥನು ಪ್ರಥಮ ತೀರ್ಥಂಕರನಾಗಿದ್ದು. ಸಾಮಾಜಿಕ

---

೨೩. ಜೈನ ಪರಂಪರೆಯಲ್ಲಿ ೧೪ ಜನ ಕುಲಂಕರರ ಹೆಸರುಗಳು ಇಂತಿವೆ : ೧) ಪ್ರತಿಶ್ರುತಿ ೨) ಸನ್ಮತಿ ೩) ಕ್ಷೇಮಂಕರ ೪) ಕ್ಷೇಮಂಧಾರ ೫) ಸೀಮಂಕರ ೬) ಸೀಮಂಧರ ೭) ವಿಮಲವಾಹನ ೮) ಚಕ್ಷುಕ್ಷಂತ ೯) ಯಶಸ್ವಿ ೧೦) ಅಭಿಚಂದ್ರ ೧೧) ಚಂದ್ರಭ ೧೨) ಮರುದೇವ ೧೩) ಪ್ರಷೇನಜೀತ ೧೪) ನಾಭಿರಾಜ.

ಹೊಟ್ಟೆ ಪಾಡಿಗಾಗಿ ಈತ ಅಸಿ, ಮಸಿ, ಕೃಷಿ, ವಿದ್ಯಾ, ವಾಣಿಜ್ಯ ಹಾಗೂ ಶಿಲ್ಪಗಳೆಂಬ ಆರು ವಿದ್ಯೆಗಳನ್ನು ಕಲಿಸಿ ಪ್ರಜಾಪತಿ ಎನಿಸಿಕೊಂಡ. ಇದರಿಂದಾಗಿ ಈ ಪ್ರಪಂಚ ಕರ್ಮಭೂಮಿಯಾಯಿತು. ಎಂದು ಜೈನ ಪುರಾಣಗಳು ಹೇಳುತ್ತವೆ. ಇವನು ಸಾಮಾಜಿಕ ವ್ಯವಸ್ಥೆಗಾಗಿ ಮೂರು ವರ್ಣಗಳನ್ನು ಸ್ಥಾಪಿಸಿದನು.[೨೪]

ಜೈನ ಪುರಾಣಗಳಲ್ಲಿ ಮತ್ತು ಜೈನೇತರ ಸಾಹಿತ್ಯದಲ್ಲಿ ವೃಷಭದೇವನ ಜೀವನ ತಪಸ್ಸು ಕೇವಲ ಜ್ಞಾನಪ್ರಾಪ್ತಿ ಧರ್ಮೋಪದೇಶಗಳ ವರ್ಣನೆಯು ಬರುತ್ತವೆ. ಇವುಗಳ ಹಿನ್ನೆಲೆಯಲ್ಲಿ ಭಗವಾನ್ ವೃಷಭದೇವನ ಜೈನಧರ್ಮದ ಆದಿಪ್ರವರ್ತಕನೆಂದು ಇತಿಹಾಸ ಪುರುಷನೆಂದು ಸಿದ್ಧವಾಗುತ್ತದೆ. ಜೈನ ಪರಂಪರೆಯಲ್ಲಿ ವೃಷಭದೇವನ ಅಸ್ತಿತ್ವವನ್ನು ಸಮರ್ಥಿಸುವ ಆಧಾರಗಳು ಬಹಳಷ್ಟಿವೆ. ಹಾಗೆಯೇ ಜೈನೇತರ ಸಾಹಿತ್ಯದಲ್ಲಿಯೂ ವೃಷಭದೇವನು ಜೈನಧರ್ಮದ ಸಂಸ್ಥಾಪಕ ಮತ್ತು ಜೈನ ಧರ್ಮ ಮಹಾವೀರನಿಗಿಂತಲೂ ಅತಿ ಪುರಾತನ ಎಂಬುವುದಕ್ಕೂ ಅನೇಕ ಆಧಾರಗಳು ದೊರೆಯುತ್ತವೆ. ಐದು ಸಾವಿರ ವರ್ಷಗಳ ಪೂರ್ವದ್ದೆಂದು ತಿಳಿಯಲಾದ ಹರಪ್ಪ ಮಹೆಂಜೋದಾರೋ ಸಂಸ್ಕೃತಿಯು ಜೈನಧರ್ಮದ ಪುರಾತನತೆಗೆ ಆಧಾರಗಳನ್ನು ಒದಗಿಸುತ್ತದೆ. ದೊರೆತ ೨ ಮೂರ್ತಿಗಳು ವೃಷಭನವು ಇವನ ಲಾಂಛನ ಎತ್ತು ಎಂದು ಗುರುತಿಸುತ್ತವೆ.

ವಿವಿಧ ಬಗೆಯ ವೃತ್ತಿಗಳಲ್ಲಿ ಜನರನ್ನು ತೊಡಗಿಸಿದ ಮೇಲೆ ಅದಕ್ಕನುಸಾರವಾಗಿ ಜನರನ್ನು ಮೂರು ಬಗೆಯ ಗುಂಪುಗಳನ್ನಾಗಿ ವೃಷಭನು ವಿಂಗಡಿಸಿದನೆಂಬುದು ಜೈನರ ಪರಂಪರಾಗತವಾದ ನಂಬಿಕೆ ಇದನ್ನೇ ನಾವೀಗ ವೃಷಭನಿಂದ ನಿರೂಪಿತವಾದ ವರ್ಣವ್ಯವಸ್ಥೆ ಎನ್ನಬಹುದು. ವೃಷಭನು ಗುರ್ತಿಸಿದ ವರ್ಣಗಳು ಮೂರು- ಕ್ಷತ್ರೀಯ, ವೈಶ್ಯ ಮತ್ತು ಶೂದ್ರ. ಪೂರ್ವ ಪುರಾಣದಲ್ಲಿ ಆಚಾರ್ಯ ಜಿನಸೇನರು ಇದನ್ನು ಸ್ಪಷ್ಟವಾಗಿ ೧೬ನೇ ಆಶ್ವಾಸದ ೨೪೩, ೨೪೪, ೨೪೫ರ ಪದ್ಯಗಳಲ್ಲಿ ವಿವರಿಸಿದ್ದಾರೆ. ಕ್ಷತ್ರೀಯರನ್ನು ಕುರಿತು – ಕೈಯಲ್ಲಿ ಶಸ್ತ್ರಧರಿಸಿ ದುಃಖಪಡುವ ಪ್ರಾಣಿಗಳ ರಕ್ಷಣೆಯಲ್ಲಿ ನಿಯುಕ್ತರಾದವರು ಕ್ಷತ್ರಿಯರಾಗಿರುವುದರಿಂದ ಸ್ವಾಮಿಯು ತನ್ನ ಕೈಗಳಿಂದ ಶಸ್ತ್ರಧಾರಣ ಮಾಡಿ ಕ್ಷತ್ರಿಯರನ್ನು ಸೃಷ್ಟಿಸಿದನು. ಬಲಿಷ್ಠರಾದ ಕೆಲವು ಪ್ರಜೆಗಳು ಸ್ವಾಮಿಯನ್ನು ನೋಡಿ ಶಸ್ತ್ರಧಾರಣ ಮಾಡಿದರೆಂದು ತಿಳಿಸುತ್ತದೆ. ವೈಶ್ಯರನ್ನು ಕುರಿತು – ಕೃಷಿ ಪಶುಪಾಲನೆ ವ್ಯಾಪಾರ ಈ ಮೂರು ವೈಶ್ಯರ ವೃತ್ತಿಯಾಗಿರುವುದರಿಂದ ಸ್ವಾಮಿಯು ತಮ್ಮ ತೊಡೆಗಳಿಂದ ಜಲಯಾತ್ರಾ, ಸ್ಥೂಲಯಾತ್ರಾ ಮೊದಲಾದ ಯಾತ್ರೆಗಳಿಂದ ಯಾತ್ರೆ ಮಾಡುವುದನ್ನು ತೋರಿಸಿಕೊಟ್ಟು ವೈಶ್ಯರನ್ನು ಸೃಷ್ಟಿಸಿದರು. ಹೆಚ್ಚಾಗಿ ವೈಶ್ಯರು ವ್ಯಾಪಾರ ಸಂಬಂಧವಾಗಿ ಪ್ರವಾಸ ಮಾಡಬೇಕಾಗಿರುವುದರಿಂದ ಸ್ವಾಮಿಯು ತಾವು ಪ್ರವಾಸ ಮಾಡಿ ತೋರಿಸಿ ವೈಶ್ಯರ ಜೀವನೋಪಾಯವನ್ನು ತೋರಿಸಿಕೊಟ್ಟರೆಂದೂ ಅದನ್ನು ನೋಡಿ ಕೆಲವರು ವೈಶ್ಯ ವೃತ್ತಿಯನ್ನನುಸರಿಸಿದರೆಂದೂ ಹೇಳಿದೆ. ಜ್ಞಾನಿಯಾದ ಸ್ವಾಮಿಯು ನೀಚವೃತ್ತಿಯಲ್ಲಿ ತತ್ಪರರಾದ ಶೂದ್ರರನ್ನು ಪಾದಗಳಿಂದ ಸೃಷ್ಟಿಸಿದನು. ತಮ್ಮ

---

೨೪. ಹೀರಾಲಾಲ್ ದುಗ್ಗಾಡ್ ಅವರ 'ಪೂರ್ವೋಕ್ತ' ಗ್ರಂಥದಲ್ಲಿ ಪುಟ ೩೩ರ ಅಡಿಟಿಪ್ಪಣಿ.

ಪಾದ ಸೇವೆಯನ್ನು ಮಾಡಿಸಿಕೊಂಡು ಶೂದ್ರರಿಗೆ ಸೇವಾವೃತ್ತಿಯನ್ನು ತೋರಿಸಿದರೆಂದು ತಿಳಿಸಿದೆ. ಉತ್ತಮ ವರ್ಣದವರಲ್ಲಿ ಅನೇಕ ಪ್ರಕಾರವಾಗಿ ಸೇವೆ ಮಾಡುವುದು ಶೂದ್ರವೃತ್ತಿಯಾಗಿದೆ.

ಹೀಗೆ ವೃಷಭನು ಸ್ಥಾಪಿಸಿದ್ದ ಮೂರು ವರ್ಣಗಳಾದರೂ ಬ್ರಾಹ್ಮಣ ವರ್ಣದ ವಿಚಾರವೂ ಪೂರ್ವ ಪುರಾಣದಲ್ಲಿ ಬರುತ್ತದೆ. ಇದರ ಉತ್ಪತ್ತಿ ಹೇಗಾಯಿತೆಂಬ ಪ್ರಶ್ನೆಗೆ ಕಲ್ಪಸೂತ್ರದ ವ್ಯಾಖ್ಯಾನದಲ್ಲಿ ಉತ್ತರ ಸಿಗುತ್ತದೆ. ಈ ಬ್ರಾಹ್ಮಣ ವರ್ಗವನ್ನು ಭರತ ಚಕ್ರವರ್ತಿಯು ವೃಷಭನಾಥನಿಗೆ ಕೇವಲ ಜ್ಞಾನವಾದ ಬಳಿಕ ವ್ರತಧಾರಿ ಶ್ರಾವಕ–ಶ್ರಾವಿಕೆಯರಿಗೆ ಉಪದೇಶ ನೀಡುವ ಮೂಲಕ ನಿರ್ಮಿಸಿದನೆಂದು ಅಲ್ಲಿ ಹೇಳಲಾಗಿದೆ. ಶೂದ್ರರನ್ನು ಒಳಗೊಂಡು ಈ ಎಲ್ಲ ವರ್ಗದವರಿಗೂ ಜೈನ ಸಂಘದಲ್ಲಿ ಪ್ರವೇಶಿಸಲು ಅಧಿಕಾರವಿತ್ತು 'ಸಾಗರ ಧರ್ಮಮೃತ'ದ ೨೨ನೇ ಶ್ಲೋಕದಲ್ಲಿ ಪಂಡಿತ ಆಶಾಧರ ಸೂರಿಗಳು ಇದನ್ನು ಸ್ಪಷ್ಟವಾಗಿ ಹೇಳಿದ್ದಾರೆ. "ಉಪಕರಣ, ಆಚಾರ, ಶರೀರ ಶುದ್ಧಿ–ಇವುಗಳಿಂದ ಶೂದ್ರನೂ ಜೈನಧರ್ಮದ ಅಧಿಕಾರಿಯಾಗುತ್ತಾನೆ. ಯಾಕೆಂದರೆ ಕಾಲಲಬ್ಧಿಯಿಂದಾಗಿ ಹೀನಜಾತಿಯವನೂ ಧರ್ಮಕ್ಕೆ ಅಧಿಕಾರಿಯಾಗುತ್ತಾನೆ" ಎಂದಿದ್ದಾನೆ. ಈ ಕಾರಣದಿಂದಲೇ ಅಹಿಂಸಾ ವ್ರತವನ್ನು ಪಾಲಿಸಿದ ಯಮಚಾಂಡಾಲನ[೨೫] ಹೆಸರನ್ನು ಜೈನಶಾಸ್ತ್ರಗಳಲ್ಲಿ ಆದರದಿಂದ ಉಲ್ಲೇಖಿಸಲಾಗಿದೆ. ಆಚಾರ್ಯ ಸಮಂತ್ರಭದ್ರರೂ ತಮ್ಮ 'ರತ್ನಕರಂಡ ಶ್ರಾವಕಾಚಾರ'ದಲ್ಲಿ ಚಾಂಡಾಲರಿಗೂ ಕೂಡಾ ಜೈನ ಧರ್ಮಾಚರಣೆಯ ಹಕ್ಕಿರುವುದನ್ನು ಅಂಥವರಿಗೂ ಮನ್ನಣೆ ಸಲ್ಲುವುದೆಂಬುದನ್ನು ಸ್ಪಷ್ಟವಾಗಿ ಘೋಷಿಸಿದ್ದಾರೆ. ಸಮ್ಯಗ್ದರ್ಶನ ಸಂಪನ್ನನಾದ ಚಂಡಾಲನನ್ನು ಕೂಡಾ ದೇವರ ದೇವನು (ಜಿನೇಂದ್ರ) ಬೂದಿ ಮುಚ್ಚಿದ ಕೆಂಡಕ್ಕೆ ಸಮನವಾದ ನರಶ್ರೇಷ್ಠನೆಂದು ಮನ್ನಿಸುವನು.

೧. ಈ ಕಾಲದಲ್ಲಿ ಹಿಂದಿನ ಕಾಲದ ಜೈನ (ಅರ್ಹತ್ ಧರ್ಮದ) ಸಮಾಜದ ಮುಖ್ಯ ಲಕ್ಷಣಗಳೆಲ್ಲವೂ ಮುಂದುವರೆದವು.
೨. ಜನರ ಸಾಮಾಜಿಕ ಹಾಗೂ ಧಾರ್ಮಿಕ ಬದುಕು ಹೆಚ್ಚು ಶಿಸ್ತು ಬದ್ಧವಾಯಿತು. ವೃತ್ತಿಗನುಗುಣವಾಗಿ ಅವರಲ್ಲಿ ಕ್ಷತ್ರಿಯ, ವೈಶ್ಯ ಮತ್ತು ಶೂದ್ರ ಈ ಮೂರು ವರ್ಣಗಳನ್ನು ರೂಪಿಸಿದ ಸ್ವಲ್ಪಕಾಲದ ನಂತರ ಬ್ರಾಹ್ಮಣ ವರ್ಣವೂ ನಿರ್ಮಾಣವಾಯಿತು.
೩. ನಾಲ್ಕು ವರ್ಣಗಳ ಜನರಿಗೆ ಜೈನಧರ್ಮದಲ್ಲಿ ಪ್ರವೇಶವಿತ್ತು. ಸಾಮಾಜಿಕವಾಗಿ ತಾರತಮ್ಯಭಾವ ಇರಲಿಲ್ಲ. ವಿವಾಹ ಸಂಪರ್ಕ ಕೂಡಾ ನಡೆಯುತ್ತಿತ್ತು.

ಈ ರೀತಿಯಾಗಿ ವೃಷಭನಾಥನ ಕಾಲದಲ್ಲಿ ಜೈನ ಸಮಾಜವು ತನ್ನದೇ ಆದ ಅಂದರೆ ವೃತ್ತಿಗೆ ಅನುಗುಣವಾಗಿ ಸಮಾಜ ನಿರ್ಮಾಣವಾಗಿ ಬೆಳವಣಿಗೆಯಾಗುತ್ತಾ ಬಂದಿತ್ತು. ವೃಷಭನಿಂದ ನಿರ್ಮಾಣವಾದ ಈ ವರ್ಣ ವ್ಯವಸ್ಥೆಯು

---

೨೫. ಮಿರ್ಜಿ ಅಣ್ಣಾರಾಯರು, ಜೈನ ಧರ್ಮ, ಪು. ೫೪.

ಜೈನ ೨೩ನೇ ತೀರ್ಥಂಕರನಾದ ಪಾರ್ಶ್ವನಾಥನವರೆಗೂ ಮುಂದುವರೆದುಕೊಂಡು ಬಂದು ಪಾರ್ಶ್ವನಾಥನ ಕಾಲಕ್ಕೆ ಜಿನ ಧರ್ಮವು ಸ್ಪಷ್ಟ ರೂಪುರೇಷೆಗಳನ್ನು ಪಡೆದುಕೊಂಡಂತೆ ಕಾಣುತ್ತದೆ. ಚತುರ್ಯಾಮಗಳೇ[೨೬] ಮುಂದೆ ಮಹಾವೀರನ ಪಂಚ ಮಹಾವ್ರತಗಳ ರೂಪವನ್ನು ಪಡೆದುಕೊಂಡಿವೆ. ಪಾರ್ಶ್ವನಾಥ ಬೋಧಿಸಿದ ತತ್ವಗಳನ್ನು ಚಾತುರ್ಯಾಮಗಳೆಂದು ಕರೆಯಲಾಗಿದೆ. ಅವು-

೧. ಪಾಣಯ್ಯವಯ ಓ ವಿರಮಣ (ಸರ್ವ ಪ್ರಾಣಾತಿ ಕ್ರಮದಿಂದ ಬಿಡುಗಡೆ - ಅಹಿಂಸೆ)

೨. ಮುಸವಾಯ ಓ ವಿರಮಣ (ಸರ್ವ ಮೃಷವಾದಿಂದವಿ ರವಣ - ಸತ್ಯ)

೩. ಅದಿನದಾನ ಓ ವಿರಮಣ(ಸರ್ವ ಅದತ್ತವದಾನದಿಂದ ವಿರಮಣ-ಕಳ್ಳತನ)

೪. ಬಹಿದ್ದಾದಾನ ಓ ವಿರಮಣ (ಸರ್ವ ಬಹಿದ್ದಾದಾನದಿಂದ ವಿರಮಣ - ಎಲ್ಲತರಹದ ಬಾಹ್ಯ ವಸ್ತುಗಳಿಂದ ಅಲಿಪ್ತವಾಗಿರುವುದು) (Non Possessions)

ಪಾರ್ಶ್ವನಾಥನ ಈ ವಿಚಾರ ಸರಣಿಗೆ ಸಮಾಜದ ಎಲ್ಲ ವರ್ಗದ ಜನರು ಪ್ರತಿಕ್ರಮಿಸಿದಂತೆ ಮತ್ತು ಅನುಯಾಯಿಗಳಾದಂತೆ ತಿಳಿದು ಬರುತ್ತದೆ. ಸ್ವತಃ ಮಹಾವೀರನ ತಂದೆ-ತಾಯಿಗಳೆ ಪಾರ್ಶ್ವನಾಥನ ಅನುಯಾಯಿಗಳಾಗಿದ್ದರು ಮಹಾವೀರನ ಪ್ರಚಾರದ ಕಾಲದಲ್ಲಿ ಪಾರ್ಶ್ವನಾಥನ ಪಂಥದ ಅನೇಕರು ಮಹಾವೀರನನ್ನು ಭೇಟಿಯಾದರು. ಅವರಲ್ಲಿ ಪ್ರಮುಖರು ಮುನಿಚಂದ್ರ ಮತ್ತು ನಂದಿ ಸೇನರು. ಪಾರ್ಶ್ವನಾಥನ ಚಾತುರ್ಯಾಮಗಳು (ಚಾವುಜ್ಜಾಮ), ಮಹಾವೀರನ ಪಂಚತಪಗಳು (ಪಂಚಕ್ವಯ) ಒಂದೇ ಎಂದು ಬಗೆದು ಅನೇಕ ಪಾರ್ಶ್ವನಾಥಾನುಯಾಯಿಗಳು ಮಹಾವೀರನ ಕಾಲಕ್ಕೆ ಮಹಾವೀರನ ಪಂಚ ತಪಗಳನ್ನು ಸ್ವೀಕರಿಸಿದಂತೆ ತಿಳಿದು ಬರುತ್ತದೆ. ಗೌತಮ ಬುದ್ಧನೂ ಕೆಲದಿನಗಳ ಕಾಲ ಪಾರ್ಶ್ವನಾಥನ ಪಂಥವನ್ನು ಅನುಸರಿಸಿದಂತೆ 'ದೇವಸೇನಚಾರ್ಯ'ನ 'ದರ್ಶನಸಾರ' ಕೃತಿಯಿಂದ ತಿಳಿದು ಬರುತ್ತದೆ. ಹೀಗೆ ಪಾರ್ಶ್ವನಾಥನ ಕಾಲಕ್ಕೆ ನಿರ್ಗ್ರಂಥಿ ಧರ್ಮವು ವ್ಯಾಪಕವಾಗಿ ಪ್ರಚಾರ ಪಡೆದಿದ್ದು ಭಾರತೀಯ ಧಾರ್ಮಿಕ ಕ್ಷೇತ್ರದಲ್ಲಿ ಬಹಳಷ್ಟು ಪ್ರಭಾವಶಾಲಿಯಾಗಿತ್ತೆಂದು 'ಕಲ್ಪಸೂತ್ರ'ದಲ್ಲಿ ಉಲ್ಲೇಖವಿದೆ.

ಭಗವಾನ್ ಮಹಾವೀರನು ಜೈನರ ಅಂತಿಮ ತೀರ್ಥಂಕರ[೨೭] ಕುಂಡಪುರದ (ವಿಹಾರ ಪ್ರಾಂತ್ಯ) ಸಿದ್ಧಾರ್ಥ, ತ್ರಿಶಲಾದೇವಿಯವರಿಗೆ ಮಹಾವೀರನು ಕ್ರಿ.ಪೂ. ೫೯೯ರ ಚೈತ್ರ ಶುಕ್ಲ ತ್ರಯೋದಶಿಯಂದು ಜನಿಸಿದನು. ಮಹಾವೀರನ ಜೀವನಕ್ಕೆ ಸಂಬಂಧಿಸಿದಂತೆ ಕೆಲವೊಂದು ಘಟನೆಗಳ ವಿಷಯದಲ್ಲಿ ಶ್ವೇತಾಂಬರ ಮತ್ತು ದಿಗಂಬರರಲ್ಲಿ ಸ್ವಲ್ಪಮಟ್ಟಿಗೆ

---

೨೬. ಭಾರತೀಯ ಸಂಸ್ಕೃತಿಗೆ ಜೈನ ಧರ್ಮದ ಕೊಡುಗೆ, ಅನು-ಮಿರ್ಜಿ ಅಣ್ಣಾರಾಯರು, ಪು. ೨೭.

೨೭. ಜೈನ ವಾಙ್ಮಯದಲ್ಲಿ 'ತೀರ್ಥಂಕರ' ಎಂಬ ಶಬ್ದವು ಪಾರಿಭಾಷಿಕ ಪದವಾಗಿದೆ. ತೀರ್ಥ ಪದಕ್ಕೆ ಸಾಮಾನ್ಯವಾಗಿ ಶಾಸ್ತ್ರವೆಂದು ಅರ್ಥವಾಗುತ್ತದೆ. ತೀರ್ಥಂಕರೋಯತಿ ತೀರ್ಥಂಕರಃ ಎಂಬಂತೆ ತೀರ್ಥಂಕರ ಎನಿಸಿಕೊಳ್ಳುತ್ತಿದೆ. ತೀರ್ಥ ಎನ್ನುವುದಕ್ಕೆ ಸೇತುವೆ ಎಂದು ಅರ್ಥೈಸಲಾಗುತ್ತಿದೆ. ಈ ಭವಸಾಗರವನ್ನು ದಾಟಿದವ ದಾಟಿಸುವವ ತೀರ್ಥಂಕರರೆನ್ನಲಾಗಿದೆ.

ಭಿನ್ನಾಭಿಪ್ರಾಯಗಳಿವೆ. ದಿಗಂಬರ ಸಂಪ್ರದಾಯಾನುಸಾರ ಮಹಾವೀರ ಅವಿವಾಹಿತನಾಗಿದ್ದು ತನ್ನ ೩೦ನೇ ವಯಸ್ಸಿನಲ್ಲಿ ಪ್ರವಜ್ಯೆಯನ್ನು ಸ್ವೀಕರಿಸಿದನು. ಆದರೆ ಶ್ವೇತಾಂಬರರ ಕಲ್ಪಸೂತ್ರಕ್ಕನುಸರಿಸಿ ಮಹಾವೀರನು ಸಮರವೀರ ಎಂಬ ರಾಜನ ಮಗಳಾದ ಯಶೋಧರೆಯನ್ನು ಮದುವೆಯಾಗಿದ್ದನು. ಅಲ್ಲದೆ ಅನೋಜ್ಞಾ (ಅನವದ್ಯಾ) ಅಥವಾ ಪ್ರಿಯದರ್ಶನಾ ಎಂಬ ಮಗಳಿದ್ದಂತೆ ಅಳಿಯನಾದ ಜಾಮಾಲಿ ಕೆಲಕಾಲ ಮಹಾವೀರ ಶಿಷ್ಯನಾಗಿದ್ದುದಾಗಿ ಹೇಳಲಾಗುತ್ತದೆ. ಮಹಾವೀರ ತನ್ನ ಪ್ರವಜ್ಯಯ ಕಾಲದಲ್ಲಿ ಸಮಸ್ತ ವಸ್ತ್ರಗಳನ್ನು ತ್ಯಜಿಸಿ ದಿಗಂಬರನಾಗಿ ಹೊರಟರೆ ಶ್ವೇತಾಂಬರರ ಪ್ರಕಾರ[೨೮] ಪ್ರವರ್ಜಿತನಾದಾಗಿನಿಂದ ೧೮ ತಿಂಗಳವರೆಗೆ ಸಂಪೂರ್ಣ ವಸ್ತ್ರಗಳನ್ನು ತ್ಯಜಿಸಿರಲಿಲ್ಲ ನಂತರ ಅಚೇಲಕನಾದನು.

ಆದಿನಾಥ ಮತ್ತು ಮಹಾವೀರ ಮಾತ್ರ ನಗ್ನತ್ವವನ್ನು ಮುನಿಗಳಿಗೆ ಬೋಧಿಸಿದ್ದು ನಗ್ನತ್ವದಿಂದಲೆ ಮೋಕ್ಷ ಸಾಧ್ಯವೆಂದು ಹೇಳಿದರೆ ಪಾರ್ಶ್ವನಾಥನು ತನ್ನ ಶಿಷ್ಯರಿಗೆ ಕೆಳಗಿನ ಮೇಲಿನ ವಸ್ತ್ರಗಳನ್ನು ಧರಿಸಲು ಅನುಮತಿಸಿದಂತೆ ಅಭಿಪ್ರಾಯ ಪಡಲಾಗಿದೆ. ಭಗವತಿ ಆರಾಧನಾ, ಸೂತ್ರಕೃತಾಂಗ, ದಶವೈಕಾಲಿಕ ಮತ್ತು ಉತ್ತರಾಧ್ಯಾಯನ ಮುಂತಾದ ಗ್ರಂಥಗಳಲ್ಲಿ ಮಹಾವೀರನ ಅಚೇಲಕತ್ವಕ್ಕೆ ಸಂಬಂಧಿಸಿದ ವಿವರಗಳಿವೆ. ಆದರೆ ಮಹಾವೀರನ ನಗ್ನತ್ವದ ವಿಚಾರದಲ್ಲಿ ಅನೇಕ ಭಿನ್ನಾಭಿಪ್ರಾಯಗಳಿವೆ. ೧೨ ವರ್ಷಗಳ (ಕ್ರಿ.ಪೂ.೫೫೭) ದೀರ್ಘ ತಪಶ್ಚರ್ಯೆಯ ನಂತರ ಜಂಬಿಯಾಗ್ರಾಮದ ಹೊರಗೆ ಋಲಕುಕೂಲಾ ನದಿಯ ತೀರದಲ್ಲಿ ಮಹಾವೀರನು ಕೇವಲ ಜ್ಞಾನವನ್ನು ಹೊಂದಿದನು. ಆಮೇಲೆ ೩೦ ವರ್ಷಗಳ ಕಾಲ ವಿವಿಧ ಪ್ರದೇಶಗಳಲ್ಲಿ ವಿಹಾರ ಮಾಡುತ್ತ ಧರ್ಮೋಪದೇಶ ಮಾಡುತ್ತ ಕ್ರಿ.ಶ.ಪೂ. ೫೨೭ರಲ್ಲಿ ಬಿಹಾರದ ಪಾವಾ ಎಂಬಲ್ಲಿ ಮಹಾವೀರ ನಿರ್ವಾಣ ಹೊಂದಿದನು. ಜೀನಸೇನರ ಪೂರ್ವ ಪುರಾಣದನುಸಾರ ಆ ದಿನದಂದು ಪಾವಾ ನಗರದಲ್ಲಿ ದೀಪೋತ್ಸವವನ್ನು ಆಚರಿಸಲಾಯಿತು. ಇದೆ ಪದ್ಧತಿ ಇಂದಿಗೂ ಮುಂದುವರೆದಿದ್ದು ಇಂದು ಭಾರತದ ತುಂಬೆಲ್ಲ ದೀಪಾವಳಿಯನ್ನು ಆಚರಿಸಲಾಗುತ್ತಿದ್ದು ಸರ್ವವ್ಯಾಪಿಯಾಗಿದೆ.

ಮಹಾವೀರನು ವರ್ಗಭೇದ ಲಿಂಗಭೇದ ಜಾತಿಭೇದಗಳನ್ನು ಒಪ್ಪಲಿಲ್ಲವಾಗಿ ಎಲ್ಲ ವರ್ಗ ಜಾತಿಗಳವರಿಗೂ ಮಹಾವೀರನ ಸಂಘ ವ್ಯವಸ್ಥೆಯಲ್ಲಿ ಬಾಗಿಲನ್ನು ತೆರೆಯಲಾಯಿತು. ಹರಿಕೇಶಿಯಂತಹ ಅಸ್ಪೃಶ್ಯನು ಮಹಾವೀರನಿಂದ ದೀಕ್ಷೆ ಹೊಂದಿ ಜಿನ ಮುನಿಯಾದನು. ಸ್ಕಂಧಕ, ಆನಂದ ನಂತಹ ಭಿನ್ನಮತಿಯರೂ ಮಹಾವೀರನ ವಾಣಿಗೆ ಮನಸೋತು ಜಿನಧರ್ಮವನ್ನು ಸ್ವೀಕರಿಸಿದರು. ಮಹಾವೀರನು ತನ್ನ ಅನುಯಾಯಿಗಳನ್ನು ಮುನಿ, ಆರ್ಯರು ಶ್ರಾವಕ ಮತ್ತು ಶ್ರಾವಿಕ ಎಂದು ನಾಲ್ಕು ಭಾಗಗಳಲ್ಲಿ ವಿಭಜಿಸಿದನು. ಇದಕ್ಕೆ ಚತುರ್ವಿಧ ಸಂಘವೆಂದು ಕರೆಯಲಾಗಿದೆ.

---

೨೮. ೧೯ನೆಯ ತೀರ್ಥಂಕರ ಮಲ್ಲಿನಾಥನು ಪುರುಷನಾಗಿರದೆ ಮಹಿಳೆಯಾಗಿದ್ದಳೆಂಬುದಾಗಿ ಶ್ವೇತಾಂಬರರು ಮಾನ್ಯತೆ ನೀಡಿದ್ದಾರೆ.

ವೃಷಭನು ವೃತ್ತಿಗನುಗುಣವಾಗಿ ಮಾನವ ಕುಲವನ್ನು ಮೂರು ವರ್ಣಗಳಾಗಿ ವಿಂಗಡಿಸಿದನೆಂದು ಉಲ್ಲೇಖವಿದ್ದರೆ ಐತಿಹಾಸಿಕ ವ್ಯಕ್ತಿಯಾದ ಅಂತಿಮ ತೀರ್ಥಂಕರ ಮಹಾವೀರನು ಜೈನ ಸಮಾಜವನ್ನು (ಜೈನಸೇನಸಂಘ) ಅವರು ಆಚರಿಸುವ ನಿಯಮಗಳ ಮೃದುತ್ವ ಕಠೋರತೆಗನುಗುಣವಾಗಿ ನಾಲ್ಕು ಭಾಗಗಳಾಗಿ ವಿಂಗಡಿಸಿದನು. ಇದನ್ನೇ ಮಹಾವೀರ ರೂಪಿಸಿದ ಚತುಃಸಂಘ ಯೋಜನೆ ಎನ್ನುತ್ತೇವೆ. ಆ ನಾಲ್ಕು ಸಂಘಗಳಿವು.[೨೯]

೧. ಮುನಿಸಂಘ ೨. ಆರ್ಯಕರ ಸಂಘ ೩. ಶ್ರಾವಕ ಸಂಘ ೪. ಶ್ರಾವಿಕಾ ಸಂಘ. ಇವುಗಳಲ್ಲಿ ಮೊದಲನೆರಡು ಸಂನ್ಯಾಸಿಗಳದ್ದಾದರೆ (ಶ್ರಮಣ) ಉಳಿದೆರಡು ಗೃಹಸ್ಥ ಜೈನರದ್ದು. ಇವರುಗಳಿಗೆ ಉಳಿದವರ ಬಗ್ಗೆ ನಿರ್ದಿಷ್ಟ ಕರ್ತವ್ಯಗಳಿದ್ದವು. ಮುನಿ ಹಾಗೂ ಆರ್ಯಕೆಯರು ಉಳಿದೆರಡು ವರ್ಗಗಳವರೆಗೆ (ಗ್ರಹಸ್ಥರಿಗೆ) ಧರ್ಮವನ್ನು ವಿವರಿಸಿ ಹೇಳಿ ಅವರನ್ನು ಪಾರಲೌಕಿಕದಲ್ಲಿ ಸ್ಥಿರಗೊಳಿಸಬೇಕಾಗಿತ್ತು. ಈ ಶ್ರಮಣರಿಗೆ ಆಹಾರ ಮೊದಲಾದವುಗಳನ್ನು ಒದಗಿಸಿ ಧರ್ಮಧ್ಯಾನದಲ್ಲಿ ಅವರು ಕಾಲ ಕಳೆಯುವಂತೆ ನೋಡಿಕೊಳ್ಳುವುದು ಗೃಹಸ್ಥರ ಕರ್ತವ್ಯವಾಗಿತ್ತು. ಇದನ್ನು ಹೀಗೆ ರೇಖಾತ್ಮಕವಾಗಿ ಸೂಚಿಸಬಹುದು.




ಈ ಎರಡೂ ವಿಭಾಗಗಳು (ಶ್ರಮಣ–ಗೃಹಸ್ಥ) ಪರಸ್ಪರ ಪೂರಕವಾಗಿದ್ದು ಒಂದು ಮತ್ತೊಂದನ್ನು ನಿಯಂತ್ರಿಸುತ್ತಿತ್ತು. ಸಂನ್ಯಾಸಿಗಳು ಶೀಲಭ್ರಷ್ಟರೂ ದುರಾಚಾರಿಗಳು ಆದರೆ ಗ್ರಹಸ್ಥರಿಂದ ಮನ್ನಣೆ ಇರುತ್ತಿರಲಿಲ್ಲ. ಹಾದಿತಪ್ಪಿದ ಗೃಹಸ್ಥರಿಂದ ಮುನಿಗಳೂ ಆಹಾರ ಸ್ವೀಕರಿಸುತ್ತಿರಲಿಲ್ಲ. ಮುನಿಗಳಿಗೆ ನಿಯಮಿಸಿದ ಆಚಾರಗಳಲ್ಲಿ ಬಹಳಷ್ಟು ಅದೇ ಕ್ರಮದಲ್ಲಿ ಇಂದಿಗೂ ಪಾಲನೆಯಾಗುತ್ತಿವೆ. ಆದರೂ ದಿಗಂಬರ ಶ್ರಮಣ ಸಮಾಜದ ಒಗ್ಗಟ್ಟು ಮಹಾವೀರನ ನಂತರ ಬಹುಕಾಲ ಉಳಿಯಲಿಲ್ಲ. ಅಭಿಪ್ರಾಯ ಭೇದದಿಂದಾಗಿ ಇದರಲ್ಲಿ ಒಡಕುಂಟಾಯಿತು. ಇದರ ಪರಿಣಾಮವಾಗಿ ಹಲವು ಸಂಘಗಳು ರೂಪುಗೊಂಡವು. ನಂದಿಸಂಘ, ವೀರಸಂಘ, ಅಪರಾಜಿತ ಸಂಘ, ದೇವಸಂಘ, ಸೇನಸಂಘ, ಭದ್ರಸಂಘ, ಸಿಂಹಸಂಘ, ಇತ್ಯಾದಿ ಆಚಾರ್ಯ ಇಂದ್ರನಂದಿಯ 'ಶ್ರುತಾವತಾರ' ಗ್ರಂಥದಲ್ಲಿ ಇದರ ಬಗೆಗಿನ ವಿವರಗಳಿವೆ. ಇದರಲ್ಲಿ ನಾಲ್ಕು ಸಂಘಗಳು ಪ್ರಸಿದ್ಧಿ ಪಡೆದಿದ್ದವು. ನಂದಿಸಂಘ, ಸೇನಾಸಂಘ, ದೇವಸಂಘ ಮತ್ತು

---

೨೯. ಮಿರ್ಜಿ ಅಣ್ಣಾರಾಯರು ಜೈನ ಧರ್ಮ, ಪೂರ್ವೋಕ್ತ ಗ್ರಂಥ, ಪು. ೫೧, ೫೫.

ಸಿಂಹಸಂಘ ಮುಂದೆ ಇವುಗಳಲ್ಲಿ ಪುನಃ ವಿಭಾಗಗಳು ಉಪವಿಭಾಗಗಳು ಆದವು. ಅವುಗಳನ್ನು ಕ್ರಮವಾಗಿ ಗಣ ಹಾಗೂ ಗಚ್ಛಗಳೆಂದು ಕರೆಯಲಾಯಿತು.[೩೦]

ಆಚಾರ್ಯರಲ್ಲಿ ಹುಟ್ಟಿದ ಈ ಮತಭೇದದಿಂದಾಗಿ ಆಚಾರಭೇದವು ಉಂಟಾಗಿ ಜೈನಸಮಾಜದಲ್ಲಿ ಹಲವು ಸಂಘಗಳ ಉಗಮಕ್ಕೆ ಕಾರಣವಾಯಿತು.

ಶ್ರಾವಕ, ಶ್ರಾವಕಿಯರಿಗೆ ಕಡ್ಡಾಯವಾದ ಆರು ಕರ್ಮಗಳು ನಿಯಮಿತವಾಗಿದ್ದವು.

"ದೇವಪೂಜಾ ಗುರುಪಾಸ್ತಿ ಸ್ವಾಧ್ಯಾಯ ಸಂಯಮಸ್ತಪ :
ದಾನಂ ಚೇತಿ ಗೃಹಸ್ಥನಾಂ ಷಟ್ಕರ್ಮಾಣಿ ದಿನೇ ದಿನೇ"

(–ಸ್ವಾಮಿ ಸಮಂತ ಭದ್ರರು 'ರತ್ನಕರಂಡ ಶ್ರಾವಕಾಚಾರ')

"ದೇವಪೂಜೆ, ಗುರುಗಳ ಸೇವೆ, ಸ್ವಾಧ್ಯಾಯ, ಸಂಯಮ, ತಪ, ದಾನ, ಇವು ಗ್ರಹಸ್ಥನು ದಿನವೂ ಆಚರಿಸಬೇಕಾದ ಆರು ಕರ್ಮಗಳೆಂದು[೩೧] ಹೇಳಲ್ಪಟ್ಟಿದೆ ಎಂಬುದು ಇದರ ಭಾವಾರ್ಥ. ಮುಖ್ಯವಾಗಿ ಸ್ವಾಧ್ಯಾಯವು ಶ್ರಾವಕರಲ್ಲಿ ಸರಿಯಾದ ಆಚಾರ ಜ್ಞಾನವನ್ನು ಬೆಳೆಸುತ್ತಿದೆ. ಈ ಕಾರಣದಿಂದಲೇ ಜೈನ ಶ್ರಾವಕರು ಹಿಂದೊಂದು ಕಾಲದಲ್ಲಿ ಆಹಾರದಾನ ಮಾಡುವಾಗ ಮುನಿಗಳ ಪಾತ್ರತ್ವವನ್ನು ಪರೀಕ್ಷಿಸಬಲ್ಲವರಾಗಿದ್ದರು. ಶ್ರಾವಕ ಶ್ರಾವಿಕೆಯರು ಎಂಟು ಮೂಲ ಗುಣಗಳನ್ನು ಪಾಲಿಸಬೇಕೆಂದು ನಿಯಮವಿದೆ. ಅವುಗಳೆಂದರೆ ಐದು ಅಣುವ್ರತಗಳ ಪಾಲನೆ ಹಾಗೂ 'ಮ' ಕಾರತ್ರಯಗಳ ತ್ಯಾಗ ಅಹಿಂಸೆ ಸತ್ಯ ಅಸ್ತೇಯ (ಕಳ್ಳತನ ಮಾಡದಿರುವುದು) ಬ್ರಹ್ಮಚರ್ಯ ಹಾಗೂ ಅಪರಿಗ್ರಹಗಳೇ ಐದು ಅಣುವ್ರತಗಳು. ಮಧು ಮಾಂಸ ಮದ್ದು ಇವು 'ಮ' ಕಾರತ್ರಯಗಳು ಇವುಗಳ ತ್ಯಾಗ ಗ್ರಹಸ್ಥ ಮಾಡಲೇಬೇಕಾದ ಕೆಲಸ ಅಹಿಂಸೆ ಸತ್ಯ ಮೊದಲಾದವುಗಳನ್ನು ಗ್ರಹಸ್ಥ ಸೀಮಿತ ಪರಿಮಿತಿಯಲ್ಲಿ ಪಾಲಿಸುವುದರಿಂದ ಅವು ಅಣುವ್ರತಗಳೆನಿಸಿಕೊಳ್ಳುತ್ತವೆ. ಮುನಿಗಳು ಇದನ್ನು ಪೂರ್ಣ ಪ್ರಮಾಣದಲ್ಲಿ ಆಚರಿಸುವುದರಿಂದ ಇವು ಮಹಾವ್ರತಗಳೆನ್ನಿಸಿಕೊಳ್ಳುತ್ತವೆ. ಜನಿವಾರ ಧರಿಸುವುದು ಮೂಲದಲ್ಲಿ ಜೈನ ಸಂಸ್ಕೃತಿಯಲ್ಲಿರಲಿಲ್ಲ. 'ಇವು ಮಧ್ಯಯುಗದಲ್ಲಿ ಜೈನ ಸಂಸ್ಕೃತಿಯ ಅಂಗಗಳಾದವು' ಎಂದು ಮಿರ್ಜಿ ಅಣ್ಣಾರಾಯರು ಅಭಿಪ್ರಾಯಪಟ್ಟಿದ್ದಾರೆ. (ಜೈನ ಧರ್ಮ ಪು–೫೫) "ಅದಕ್ಕಾಗಿ ಜೈನ ಸಮಾಜದಲ್ಲಿ ಬ್ರಾಹ್ಮಣ ಪರಂಪರೆಯಂತೆ ಪುರೋಹಿತ ವರ್ಗದ ನಿರ್ಮಾಣವಾಯ್ತು". ಎಂದು ಅವರು ಹೇಳುತ್ತಾರೆ. ಆದರೆ ವಾಸ್ತವವಾಗಿ ಮಧ್ಯಯುಗಕ್ಕೂ ಮೊದಲೇ ಕ್ರಿಸ್ತಶಕ ೪–೫ನೇ ಶತಮಾನದಿಂದಲೇ ಇದು ರೂಢಿಯಲ್ಲಿರಬೇಕು ಎಂದು ಹೀರಲಾಲ್‌ರು ಕಲ್ಪಸೂತ್ರದ ವ್ಯಾಖ್ಯಾನವೊಂದನ್ನು ದಾಖಲಿಸುತ್ತ "ಆದಿನಾಥನ ಮಗ ಭರತನೇ ಕೆಲವು ಶ್ರಾವಕರಿಗೆ ಜನಿವಾರ ತೊಡಸಿ ಬ್ರಾಹ್ಮಣ ವರ್ಣವನ್ನು ನಿರ್ಮಿಸಿದನು" ಎನ್ನುತ್ತಾರೆ.

---

೩೦. ಪಂ. ಕೈಲಾಸಚಂದ್ರಶಾಸ್ತ್ರಿ, ಜೈನ ಧರ್ಮ, (ಅನು–ಕೆ. ಭುಜಬಲಶಾಸ್ತ್ರಿ, ಪು. ೩೫೬.)

೩೧. ಜೈನ ಸಂಸ್ಕೃತಿ ಮತ್ತು ಸಿದ್ಧಾಂತಗಳು, ಸಂ.: ಪಿ. ಕೆ. ಖಂಡೋಬಾ, ಪು. ೪೪.

ಜೈನರು ಇಂದು ಆಚರಿಸುತ್ತಿರುವ ಹಬ್ಬ ಪರ್ವಗಳಲ್ಲಿ ಹೆಚ್ಚಿನವು ಪ್ರಾಚೀನ ಜೈನ ಸಮಾಜದಲ್ಲೂ ಆಚರಣೆಯಲ್ಲಿದ್ದವು. ಕಾರ್ತಿಕ ಫಾಲ್ಗುಣ ಆಷಾಢ ಮಾಸಗಳಲ್ಲಿ ಆಚರಿಸಲಾಗುವ ಅಷ್ಟಾಹ್ನಿಕ ಪರ್ವಗಳ ಉಲ್ಲೇಖ ಪದ್ಮಪುರಾಣ ಶ್ರೀಪಾಲ ಚರಿತ್ರದಂತಹ ಕಾವ್ಯಗಳಲ್ಲಿ ಬರುತ್ತದೆ. ಪ್ರಾಚೀನ ಜೈನ ಸಮಾಜವು ಯುಗಾದಿಯನ್ನು ಚೈತ್ರಮಾಸದ ಬದಲು ಶ್ರಾವಣ ಕೃಷ್ಣ ಪ್ರತಿಪದೆಯೆಂದು ಆಚರಿಸುತ್ತಿದ್ದಿರಬೇಕು. ಹೀಗೆ ಪ್ರಾಚೀನ ಜೈನ ಸಮಾಜದಲ್ಲಿ ಅನುಸರಿಸುತ್ತಿದ್ದ ಬಹಳಷ್ಟು ವ್ರತ ಆಚರಣೆಗಳು ಇಂದಿಗೂ ಜೈನ ಸಮಾಜದಲ್ಲಿ ರೂಢಿಯಲ್ಲಿವೆ.

ಮಹಾವೀರನು ಮುನಿ ಮತ್ತು ಗೃಹಸ್ಥ ಧರ್ಮದ ಬೇರೆ ಬೇರೆ ಅವಸ್ಥೆಗಳನ್ನು ರೂಪಿಸಿದನು. ಅಹಿಂಸೆಯೇ ಧರ್ಮದ ಮೂಲಾಧಾರವಾಗಿದ್ದು ಅದರ ವಿಸ್ತಾರರೂಪದ ಆಚರಣೆಗೆಂದು ಅಹಿಂಸಾ, ಅಮೃಷಾ, ಅಚೌರ್ಯ, ಅಮೈಥುನ ಮತ್ತು ಅಸಂಗ್ರಹ ಎಂದು ಐದು ವ್ರತಗಳನ್ನು ಪಾಲಿಸಲು ಹೇಳಿದನು. ಈ ಪಂಚ ವ್ರತಗಳನ್ನು ಮುನಿಗಳು ಸೂಕ್ಷ್ಮಸ್ತರದಲ್ಲಿ ಅಂದರೆ ಪೂರ್ಣ ರೂಪದಲ್ಲಿ ಮತ್ತು ಶ್ರಾವಕ ವರ್ಗ ಸ್ಥೂಲಸ್ತರದಲ್ಲಿ ಆಚರಿಸಲು ಹೇಳಲಾಗಿದೆ. ಜಿನಧರ್ಮ ಸೃಷ್ಟಿ-ಸ್ಥಿತಿ-ಲಯಗಳನ್ನು ಮತ್ತು ಅದಕ್ಕೆ ಕಾರಣಕರ್ತರನ್ನು ಒಪ್ಪುವುದಿಲ್ಲ. ದೇವರ ಅಸ್ತಿತ್ವವನ್ನು ಒಪ್ಪುವುದಿಲ್ಲವಾಗಿ ಹಿಂದೂ ಧರ್ಮದಲ್ಲಿಯಂತೆ ಅವತಾರಗಳಲ್ಲಿ ನಂಬಿಕೆಯಿಲ್ಲ ಪುರುಷ ಪ್ರಯತ್ನಕ್ಕೆ ಪ್ರಾಮುಖ್ಯತೆಯನ್ನು ನೀಡುವ ಮತ್ತು ಸ್ವಯಂ ಸಾಧನೆಯಿಂದ ಜೀವಾತ್ಮ ಹಂತ ಹಂತವಾಗಿ ಅರ್ಹಂತನಾಗುವ, ಪರಮಾತ್ಮನಾಗುವ ವಿಧಾನ ವಿವರಣೆಗಳ ಬೋಧನೆಯೇ ಜೈನ ಧರ್ಮದ[೩೨] ತಿರುಳು, ಮೂಲತಃ ಆತ್ಮಚೈತನ್ಯ ಸ್ವರೂಪಿಯಾಗಿದ್ದು ಶಾಶ್ವತವಾಗಿರುವ ಅನಂತಜ್ಞಾನ, ಅನಂತದರ್ಶನ, ಅನಂತವೀರ್ಯ, ಅನಂತ ಸುಖಗಳಿಂದ ಕೂಡಿರುವ ಜೀವಕರ್ಮಬಂಧನಕ್ಕೆ ಸಿಲುಕಿ ಅಜೀವದೊಡನೆ ಸೇರಿಕೊಂಡು ಶುಭ, ಅಶುಭ ಕರ್ಮಗಳಿಗೆ ಒಳಗಾಗುತ್ತದೆ. ಇಂತಹ ಜೀವಸಾಧನೆಯ ಹಾದಿಯಲ್ಲಿ ಕರ್ಮಗಳ ನಿರ್ಜರೆಯನ್ನು ಮಾಡಿಕೊಂಡು ಈ ಸಂಸಾರ ಚಕ್ರದಿಂದ ಬಿಡುಗಡೆ ಹೊಂದಿ ಮುಕ್ತಾತ್ಮನಾಗಬೇಕೆಂಬುದನ್ನು ತಿಳಿಸುತ್ತದೆ. ಚೇತನವು (ಜೀವ) ಮುಕ್ತವಾಗಲು ಸಾಧನೆಯ ಹಾದಿಯಲ್ಲಿ ರತ್ನತ್ರಯಗಳಾದ ಸಮ್ಯಕ್‌ದರ್ಶನ, ಸಮ್ಯಕ್ ಜ್ಞಾನ, ಸಮ್ಯಕ್ ಚಾರಿತ್ರ್ಯಗಳ ಜೊತೆಗೆ ಮನ-ವಚನ-

---

೩೨. ಜೈನ ಧರ್ಮ ಎಂಬ ಶಬ್ದವು ಮೊಟ್ಟಮೊದಲು ಕಂಡುಬರುವ ಗ್ರಂಥವೆಂದರೆ 'ಜಿನಭದ್ರಗಣಿ ಕ್ಷಮಾಶ್ರಮಣರೆಂಬುವರು ರಚಿಸಿದ ವಿಶೇಷ ಏಗಳಿಕಾ ಭಾಷ್ಯವು ಅದರಲ್ಲಿ ಜಿಣಂ ತಿತ್ಥರಿಗಾ ॥ ೧೦೫೨, ತಿತ್ಥಂಜ ಇಣಂಗಾ ॥ ೧೦೪೫, ೪೬. ಜಿಗಣಾ ಸವುಣ್ಣಾಯುಗ ಈ ವಾಕ್ಯಗಳಲ್ಲಿ ಜೈನ ಧರ್ಮದ ಪ್ರಯೋಗವಾಗಿರುವುದನ್ನು ಕಾಣಬಹುದು. (ಶ್ರೀ ದೇವಾನಂದಿ ಪೂಜ್ಯ ಪಾದರು ರಚಿಸಿದ ಸರ್ವಾರ್ಥಸಿದ್ಧ ಸಂಪಾದನೆ ಡಿ. ಪದ್ಮನಾಭ ಶರ್ಮ ಭುವನಹಳ್ಳಿ, ಪು. ೧೦) ಇದರಿಮದ ಮಹಾವೀರನ ಕಾಲಕ್ಕೆ ಜೈನ ಧರ್ಮಕ್ಕೆ ನಿರ್ಗ್ರಂಥ ಧರ್ಮಾ ಎಂಬ ಶಬ್ದ ಬಳಕೆಯಲ್ಲಿತ್ತು. ಬೌದ್ಧ ಗ್ರಂಥದಲ್ಲಿ ಮಹಾವೀರನನ್ನು ನಿರ್ಗ್ರಂಥನಾಥ ಪುತ್ರಾಃ ಎಂದು ಕರೆದಿದ್ದನ್ನು ಇಲ್ಲಿ ಸ್ಮರಿಸಬಹುದು. ಪಾರ್ಶ್ವನಾಥನ ಕಾಲಕ್ಕೆ ಸಮಣ (ಶ್ರಮಣ) ಧರ್ಮ ಎಂದು, ನೇಮಿನಾಥನ ಕಾಲಕ್ಕೆ ಅರ್ಹತ್ ಧರ್ಮವೆಂದು ಕರೆಯಲ್ಪಟ್ಟಿದೆ. ಹೀಗೆ ತನ್ನ ದೀರ್ಘವಾದ ಇತಿಹಾಸದುದ್ದಕ್ಕೂ ಈ ಪ್ರಾಚೀನ ಧರ್ಮದ ನಾಮಕರಣವು ಆಗಾಗ ಬದಲಾವಣೆಗಳನ್ನು ಕಾಣುತ್ತಾ ಬಂದಿದೆ. ಆದರೆ ಅದರ ಪರಂಪರೆಯು ಮತ್ತು ಸಂಸ್ಕೃತಿಯ ಮೂಲ ತತ್ವಗಳನ್ನು ಸಿದ್ಧಾಂತಗಳನ್ನು ಭದ್ರವಾಗಿ ಉಳಿಸಿಕೊಂಡಿದೆ. (ಜಿನಪದ ಸಾರ-ಡಾ. ಬಿ. ಕೆ. ಖಡಬಡಿ ಪು.-೨೬)

ಕಾಯಪೂರ್ವಕ ಪಾಂಚಾಣುವ್ರತ ಮುಂತಾಗಿ ತಪದ ಮೂಲಕ ಸಾಧನೆಯ ಹಾದಿಯನ್ನು ಸವೆಸಬೇಕಾಗುತ್ತದೆ. ಸಾಧನೆ ಮತ್ತು ಸಿದ್ಧಿಗಳಿಂದ ಆತ್ಮ ಪರಮಾತ್ಮನಾಗಲು ಸಾಧ್ಯವೆಂಬುದನ್ನು ಒತ್ತಿ ಹೇಳುತ್ತದೆ. ಈ ಹಿನ್ನೆಲೆಯಲ್ಲಿ "ಅಹಿಂಸಾ ಪರಮೋಧರ್ಮ' ಎಂಬ "ಜೀವೋ ಜೀವಸ್ಯ ಜೀವಿತಂ" (Live and let Live) ಎಂಬುದು ಜೈನ ಧರ್ಮದ ಮೂಲ ಮಂತ್ರವಾಯಿತು. ವೈಯಕ್ತಿಕ ಸಾಧನೆಯೊಂದಿಗೆ ವ್ಯಷ್ಠಿ, ಸಮಷ್ಠಿ, ಪ್ರಜ್ಞೆಗಳೆರಡನ್ನು ಅತ್ಯಂತ ಜತನದಿಂದ ಕಾಪಾಡುವ ಸ್ಯಾದ್ವಾದ ಜೈನ ಧರ್ಮದ ಭುನಾದಿಯಾಯಿತು. ಭಾರತೀಯ ಸಂಸ್ಕೃತೀಯ ಅನಿವಾರ್ಯತೆ ಮತ್ತು ವೈದಿಕ ಸಂಸ್ಕೃತಿಯ ಅತಿರೇಕದ ಫಲವಾಗಿ ಹುಟ್ಟಿಕೊಂಡ ಜೈನಧರ್ಮ ಮಹಾವೀರನಿಂದಾಗಿ ಪುನಃಶ್ಚೇತನವನ್ನು ಪಡೆಯಿತು. ವೈದಿಕರ ಕರ್ಮಕಾಂಡದೆದುರಿನಲ್ಲಿ ತನ್ನ ಅಸ್ತಿತ್ವವನ್ನೇ ಕಳೆದುಕೊಂಡಂತಾಗಿದ್ದ ನಗ್ನ ಯೋಗಿ ಪಂಥವು ಪಾರ್ಶ್ವನಾಥ ಮತ್ತು ಮಹಾವೀರರಿಂದ ಚೈತನ್ಯವಂತವಾಯಿತು. ಇದರಿಂದ ವೈದಿಕ ಕರ್ಮಕಾಂಡದ ವಿಕೃತಿ ಹಿಂದೆ ಸರಿದು ಆತ್ಮವಾದವನ್ನು ಒಪ್ಪುವ ಜ್ಞಾನಕಾಂಡ ಆಚರಣೆಯಲ್ಲಿ ಸ್ಥಾನ ಪಡೆದುಕೊಳ್ಳಲಾರಂಭಿಸಿತು.

ಶ್ರಮಣ ಮನೋಧರ್ಮಕ್ಕನುಗುಣವಾಗಿ ಮಹಾವೀರ ವೇದಗಳ ಪ್ರಾಮಾಣಿಕತೆಯನ್ನು ಪ್ರಶ್ನಿಸಿದನು. ಯಜ್ಞಯಾಗಾದಿಗಳ ಕರ್ಮಕಾಂಡವನ್ನು ಜೊತೆಗೆ ವರ್ಣಾಶ್ರಮ ವ್ಯವಸ್ಥೆಯನ್ನು ಒಪ್ಪಲಿಲ್ಲ. ಅಹಿಂಸೆಯಿಂದ ವ್ಯಷ್ಠಿಯು ಸಿದ್ಧಿಯಷ್ಟೇ ಅಲ್ಲದೆ ಸಮಷ್ಠಿಯ ಸಿದ್ಧಿಯೂ ಇದೆಯೆಂದೂ ಸಾರಿದೆ. ಮಹಾವೀರ ಬೋಧಿಸಿದ ಅನೇಕಾಂತವಾದ ವೈಚಾರಿಕ ಕ್ಷೇತ್ರಕ್ಕೆ ಒಂದು ಮಹತ್ತರವಾದ ಕೊಡುಗೆ. ಭಾಷೆಯ ದೃಷ್ಟಿಯಿಂದಲೂ ಮಹಾವೀರನ ಸಾಧನೆ ಧೋರಣೆ ಅನುಕರಣೀಯವಾದುದು. ಒಂದರ್ಥದಲ್ಲಿ ಬುದ್ಧ-ಮಹಾವೀರರಿಂದಲೇ ಭಾಷಾ ಚಳುವಳಿಯೊಂದು ಮೈದಳೆಯಿತು. ಪ್ರಾಂತೀಯ ಭಾಷೆಗಳು ಸಾಹಿತ್ಯದ ಗದ್ದುಗೆಗೇರಿದವು. ಈ ಮಾತು ಕನ್ನಡಕ್ಕೂ ಹೊರತಲ್ಲ. "ವೈಚಾರಿಕ ಭೂಮಿಕೆಯ ಮೇಲೆ ಆಚರಣೆಯ ನಿಯಮಗಳನ್ನು ಹೇಳಿದ ಮಹಾವೀರನ ತತ್ತ್ವಗಳು ಇಂದಿಗೂ ಮುಖ್ಯವಾಗಿವೆ. ಈ ಕಾರಣಕ್ಕಾಗಿಯೇ ಮಹಾವೀರ ಈ ದೇಶದ ಧಾರ್ಮಿಕ ಹಾಗೂ ಸಾಮಾಜಿಕ ಚಿಂತನಕಾರನಾಗಿದ್ದ. ಮಹಾನ್ ದಾರ್ಶನಿಕನಾಗಿದ್ದ. ಮಹಾವೀರನಂಥ ಮೇಧಾವಿ ಧಾರ್ಮಿಕ ಪುರುಷರು ಜಗತ್ತಿನ ನಾಗರೀಕತೆಯ ಇತಿಹಾಸದಲ್ಲಿ ಮೈಲುಗಲ್ಲುಗಳು.[೩೩]

ಜೈನ ಸಮಾಜದಲ್ಲಿನ ವಿವಿಧ ಪಂಥಗಳನ್ನು ಮೂರು ಗುಂಪಾಗಿ ವಿಂಗಡಿಸಬಹುದು. ೧. ದಿಗಂಬರ ೨. ಶ್ವೇತಾಂಬರ ೩. ಯಾಪನೀಯ ಈ ಪಂಥಗಳ ಕುರಿತಾಗಿ ಸಂಕ್ಷಿಪ್ತವಾಗಿ ಮುಖ್ಯ ಅಂಶಗಳನ್ನು ಗಮನಿಸಬಹುದು.

ಆದಿ ತೀರ್ಥಂಕರರಾದ ವೃಷಭನಿಂದಲೇ ಪ್ರಾರಂಭವಾದ ದಿಗಂಬರತ್ವದ ಆಚರಣೆಯು ಪಾರ್ಶ್ವನಾಥ ಹಾಗೂ ಮಹಾವೀರರಿಂದ ತನ್ನದೇ ಆದ ರೂಪರೇಷವನ್ನು ಪಡೆದುಕೊಂಡು ಜೈನ ಸಮಾಜದಲ್ಲಿ ಸಂಪೂರ್ಣವಾಗಿ

---

೩೩. ಕರ್ನಾಟಕದಲ್ಲಿ ಜೈನ ಧರ್ಮ-ಒಂದು ಅಧ್ಯಯನ - ಸಂ. ಡಾ. ಟಿ. ಜಿ. ಕಲಘಟಗಿ ಮುನ್ನುಡಿ ಪುಟ-VII

ಆವರಿಸಿಕೊಂಡಿತು. ನಗ್ನತ್ವದಿಂದಲೇ ಮೋಕ್ಷ ಸಾಧ್ಯವೆಂಬ ಈ ಪಂಥದ ನಿಯಮವು ಬಹಳಷ್ಟು ಪ್ರಚಾರ ಪಡೆದುಕೊಂಡು ದಕ್ಷಿಣ ಭಾರತದಲ್ಲಿ ಈ ಪಂಥವು ಬಹಳಷ್ಟು ಪ್ರಸಾರ ಹೊಂದಿತ್ತು.

ಬಿಳಿಬಟ್ಟೆ ಧರಿಸುವ, ನಿಗ್ರಂಥತ್ವವನ್ನೊಪ್ಪದ ಶ್ರಮಣ ಪರಂಪರೆ ಇದರ ಮುಖ್ಯಲಕ್ಷಣ, ವಸ್ತ್ರಸಹಿತವಾಗಿಯೇ ಮುಕ್ತಿ ಪಡೆಯಬಹುದೆಂದೂ ಸ್ತ್ರೀಯರಿಗೂ ಅದೇ ಪರ್ಯಾಯದಲ್ಲೇ ಮುಕ್ತಿಯಂಟೆಂದು ಇವರು ನಂಬುತ್ತಾರೆ. ತೀರ್ಥಂಕರರಿಗೆ ಕೇವಲ ಜ್ಞಾನದ ಬಳಿಕವೂ ಆಹಾರ, ನೀಹಾರಗಳುಂಟೆಂದು ಈ ಪಂಥದವರ ಇನ್ನೊಂದು ನಂಬಿಕೆ. ಈ ಪಂಥದ ಉದಯದ ಕಾಲದ ಬಗ್ಗೆ ಭಿನ್ನಾಭಿಪ್ರಾಯಗಳಿವೆ. ಮಹಾವೀರನ ಕಾಲದಲ್ಲೇ ಈ ಪಂಥವಿತ್ತೆಂದು ಮಿರ್ಜಿ ಅಣ್ಣಾರಾಯರಂಥ ಕೆಲವರು ಅಭಿಪ್ರಾಯಪಟ್ಟರೆ[೩೪] ಮಹಾವೀರ ನಿರ್ವಾಣದ ಸುಮಾರು ಇನ್ನೂರು ವರ್ಷಗಳ ತರುವಾಯ ಮಗಧದಲ್ಲಿ ಬರಗಾಲ ಬಿದ್ದು ಭದ್ರಬಾಹುಗಳು ದಕ್ಷಿಣದತ್ತ ಬರುವ ವೇಳೆಗೆ ಉತ್ತರದಲ್ಲಿ ಈ ಪಂಥದ ಉಗಮವಾಯಿತೆಂದು ಇನ್ನು ಕೆಲವರು ಅಭಿಪ್ರಾಯಪಡುತ್ತಾರೆ.

ಶ್ವೇತಾಂಬರ ಯತಿಗಳು ಹದಿನಾಲ್ಕು ಉಪಕರಣಗಳನ್ನಿಟ್ಟುಕೊಳ್ಳಲು ಶಾಸ್ತ್ರಸಮ್ಮತಿ ಇದ್ದರೆ, ದಿಗಂಬರ ಶ್ರಮಣರು ಕೇವಲ ಪಿಂಛ ಕಮಂಡಲುಗಳನ್ನು ಮಾತ್ರ ಇಟ್ಟುಕೊಳ್ಳಬಹುದು. ಶ್ರಾವಕರ ಅಷ್ಟಮೂಲ ಗುಣಗಳು ಣಾಮೋಕಾರ ಮಂತ್ರದ ಮಹತ್ವ, ದಿಗಂಬರ ಹಾಗೂ ಶ್ವೇತಾಂಬರ ಎರಡೂ ಗುಂಪುಗಳಿಗೂ ಸಮಾನ ಪ್ರಾಮುಖ್ಯತೆಯುಳ್ಳವುಗಳು.

ಕರ್ನಾಟಕದಲ್ಲಿ ಶ್ವೇತಾಂಬರ ಪಂಥದ ಪ್ರವೇಶ ಉತ್ತರ ಭಾರತದಿಂದ ಬಂದ ಶ್ರಾವಕರ ಮೂಲಕವಾಗಿ ಆಯಿತು. ಹೆಚ್ಚೆಂದರೆ ಈ ನೆಲಕ್ಕೆ ಈ ಪಂಥ ಕೇವಲ ಎರಡೂವರೆ ಶತಮಾನಗಳಷ್ಟು ಹಳೆಯದು. ಅಲ್ಲಿಯವರೆಗೂ ಕರ್ನಾಟಕದಲ್ಲಿ ಬಹಳವಾಗಿ ದಿಗಂಬರ ಪಂಥ ತಕ್ಕಮಟ್ಟಿಗೆ ಯಾಪನೀಯ ಪಂಥ ಮಾತ್ರವೇ ವಿಜೃಂಭಿಸಿದ್ದವು.

## ೧. ಮಂದಿರ ಮಾರ್ಗ :

ಇವರು ದೇವಾಲಯಗಳನ್ನು ಕಟ್ಟಿಕೊಂಡು ಜಿನ ಪ್ರತಿಮೆಗಳನ್ನು ಅಲ್ಲಿ ಪ್ರತಿಷ್ಠಾಪಿಸಿ ಪೂಜಿಸುವವರು. ಆದರೆ ಅಲ್ಲಿ ಜಿನ ಪ್ರತಿಮೆಗಳು ದಿಗಂಬರವಾಗಿರುವ ಬದಲು ಅಲಂಕೃತವಾಗಿರುತ್ತವೆ. ದೀಕ್ಷಾ ಗೃಹಣಕ್ಕಿಂತ ಮುನ್ನಿನ ತೀರ್ಥಂಕರನ ರೂಪವನ್ನು ಇವರು ಪ್ರತಿಮಿಸಿ ಪೂಜಿಸುತ್ತಾರೆ. ಇವರ ದೇವಸ್ಥಾನಗಳಲ್ಲಿ ಪುರೋಹಿತನಿಗೆ ದಿಗಂಬರ ದೇವಾಲಯಗಳಲ್ಲಿರುವಷ್ಟು ಮಹತ್ವ ಇಲ್ಲ. ಆತ ಅಲ್ಲಿ ದೇವಾಲಯದ ಶುಚಿತ್ವವನ್ನು ರಕ್ಷಣೆಯನ್ನು ನೋಡಿಕೊಂಡು ಶ್ರಾವಕರು ಪೂಜೆ ಸಲ್ಲಿಸಲು ಬೇಕಾದ ಅನುಕೂಲತೆಗಳನ್ನು ಒದಗಿಸುವವನಷ್ಟೇ ಗಂಧ, ಕೇಸರ, ಅಕ್ಕಿ, ಹಾಲು, ಹಣ್ಣುಗಳನ್ನು ಉಪಯೋಗಿಸಿ ಇವರು ಪೂಜೆ ಮಾಡುತ್ತಾರೆ.

---

೩೪. ಮಿರ್ಜಿ ಅಣ್ಣಾರಾಯರು – ಜೈನ ಧರ್ಮ – ಪು – ೩೭೩

## ೨. ತೇರಾಪಂಥ :

ಇದು ಭಟ್ಟಾರಕ ಯುಗದ ಶಿಥಿಲಾಚಾರಕ್ಕೆ ಪ್ರತಿಯಾಗಿ ಹುಟ್ಟಿಕೊಂಡಪಂಥ ಅಗ್ರಾದ ಪಂಡಿತ ಬನಾರಸೀ ದಾಸ ಇದರ ಸ್ಥಾಪಕ. ಸ್ಥಾಪನೆಯಾದದ್ದು ೧೭೫೮ರಲ್ಲಿ[೩೫] ಆಗ ಈ ಪಂಥಕ್ಕೆ 'ಬಾಣಾರಸೀಯ' ಅಂದರೆ 'ಬನಾರಸೀಮತೆ' ಎಂದು ಹೆಸರಿತ್ತು. ಜಿನಪ್ರತಿಮೆಗಳಿಗೆ ಗಂಧ ಹೂಗಳನ್ನು ಏರಿಸಿ ಪೂಜಿಸುವುದನ್ನಿವರು ವಿರೋಧಿಸಿದರು. ಮೂರ್ತಿ ಪೂಜೆ ಮಾಡದಿರುವುದು ಇವರ ಮುಖ್ಯ ಲಕ್ಷಣ. ಕೆಲವು ವಿದ್ವಾಂಸರ[೩೬] ಪ್ರಕಾರ "ಈ ಶಾಖೆಯನ್ನು ಸ್ಥಾಪಿಸಿದವನು ಮಾರವಾಡದ ಆಚಾರ್ಯ ಭೀಖಮ್ಮ್ರಷಿ ಅವರಿಂದ ೧೮೦೮ರ ಸುಮಾರಿಗೆ ಸ್ಥಾಪಿತವಾಯಿತು ಎಂಬ ಅಭಿಪ್ರಾಯವಿದೆ.



## ೩. ಸ್ಥಾನಿಕವಾಸಿಗಳು :

ಅಹಮದಾಬಾದಿನ ಲೋಕ್‌ಷಾ ಎಂಬ ವ್ಯಕ್ತಿಯಿಂದ ೧೫ನೆಯ ಶತಮಾನದಲ್ಲಿ ಸ್ಥಾಪಿತವಾದ ಪಂಥ ಮೂಲ ಶಾಸ್ತ್ರಗಳಲ್ಲಿರುವುದನ್ನು ಜೈನ ಶ್ರಾವಕರ ನಡತೆಗೂ ಇರುವ ವ್ಯತ್ಯಾಸವನ್ನು ಕಂಡು. ಶಾಸ್ತ್ರಾಶುದ್ಧ ನಡತೆಯುಳ್ಳ ಅಂದರೆ ಮೂರ್ತಿಪೂಜೆ ಮೊದಲಾದವುಗಳಿಲ್ಲದ ಜೈನಧರ್ಮ ಪಂಥದ ಸ್ಥಾಪನೆ ಮಾಡಿದ ಇದೇ ಸ್ಥಾನಿಕವಾಸಿ ಸಂಪ್ರದಾಯ. ಇವರ ಧಾರ್ಮಿಕ ವಿಧಿಗಳು ಮಂದಿರದಲ್ಲಿ ನಡೆಯದೆ 'ಸ್ಥಾನಿಕಗಳಲ್ಲಿ ಅಂದರೆ ಉಪಾಶ್ರಯ (ಕೇವಲ ಪ್ರಾರ್ಥನಾ ಹಾಲ್ ಇರುತ್ತದೆ.)ಗಳಲ್ಲಿ ನಡೆಯುತ್ತದೆ. ಶ್ವೇತಾಂಬರ ಸಂಪ್ರದಾಯದ ಒಟ್ಟು ೪೫ ಆಗಮಗಳ ಪೈಕಿ ೩೨ನ್ನು ಇವರು ಮನ್ನಿಸುತ್ತಾರೆ. ಇವರಿಗೆ ತೀರ್ಥಯಾತ್ರೆಯಲ್ಲಿ ನಂಬಿಕೆ ಇಲ್ಲ.

ಕರ್ನಾಟಕದಲ್ಲಿ ಈ ಮೂರು ಶ್ವೇತಾಂಬರ ಪಂಥಗಳ ಅನುಯಾಯಿಗಳು ಕಾಣಸಿಗುತ್ತಾರೆ. ಇವರೆಲ್ಲ ಉತ್ತರ ಭಾರತದಿಂದ ಬಂದ ವ್ಯಾಪಾರಸ್ಥ ವಂಶಜರು, ಈಗೀಗ ಕರ್ನಾಟಕದ ದಿಗಂಬರರು ಹಾಗೂ ಈ ಶ್ವೇತಾಂಬರರ ಕೆಲವು ಪಂಥಗಳೊಳಗೆ ವಿವಾಹ ಸಂಬಂಧವೂ ನಡೆದಿದೆ.

## ಯಾಪನೀಯ ಪಂಥ (ಗೋಪ್ಯಸಂಘ) :

ದಿಗಂಬರ ಹಾಗೂ ಶ್ವೇತಾಂಬರ ಎರಡೂ ಪಂಥಗಳ ತತ್ವಗಳ ಮಿಶ್ರಣದಿಂದ ಜನಿಸಿದ ಮೂರನೆ ಪಂಥವಿದು. ದರ್ಶನಸಾರ ಕರ್ತೃ ದೇವಸೇನ ಸೂರಿಯ ಪ್ರಕಾರ ಕ್ರಿ.ಶ. ೧೪೮ರಲ್ಲಿ ಶ್ರೀ ಕಲಶನೆಂಬ ಶ್ವೇತಾಂಬರ ಸಾಧುವಿನಿಂದ ಸ್ಥಾಪಿತವಾಯಿತು. ಸುಮಾರು ೧೫ನೆಯ ಶತಮಾನದವರೆಗೆ ಇದು ಜೀವಿಸಿತ್ತು. ಒಂದು ಕಾಲದಲ್ಲಿ ಕರ್ನಾಟಕ ಹಾಗೂ ಅದರ ಸಮೀಪದಲ್ಲಿ ಈ ಸಂಪ್ರದಾಯ ಬಹಳ ಪ್ರಭಾವಶಾಲಿಯಾಗಿತ್ತು. ಕದಂಬ ರಾಷ್ಟ್ರಕೂಟ ಹಾಗೂ

---

೩೫. ಮಿರ್ಜಿ ಅಣ್ಣಾರಾಯರು – ಜೈನ ಧರ್ಮ – ಪು – ೭೪

೩೬. ಪಂಡಿತ ಕೈಲಾಸಚಂದ್ರಶಾಸ್ತ್ರೀ – ಜೈನ ಧರ್ಮ – ಪು – ೩೭೩

ಬೇರೆ ಬೇರೆ ವಂಶಗಳ ರಾಜರು ಇದಕ್ಕೂ ಈ ಸಂಪ್ರದಾಯದ ಆಚಾರ್ಯರಿಗೂ ಅನೇಕ ದಾನಗಳನ್ನಿತ್ತುದುಂಟು. ಕಾಗವಾಡದ ವಿಕ್ರಮ ಸಂ. ೧೪೫೧ರ ಶಿಲಾಲೇಖದಲ್ಲಿ ಯಾಪನೀಯ ಸಂಘದ ಧರ್ಮಕೀರ್ತಿ ಹಾಗೂ ನಾಗಚಂದ್ರರ ಸಮಾಧಿ ಲೇಖನಗಳ ಉಲ್ಲೇಖ ಸಿಗುವುದು.[೩೭] (ಈ ಶಿಲಾಲೇಖ ಈ ಪಂಥಕ್ಕೆ ಸಂಬಂಧಿಸಿದಂತೆ ಕರ್ನಾಟಕದಲ್ಲಿ ಸಿಗುವ ಬಹುಶಃ ಕೊನೆಯ ದಾಖಲೆ)

ಈ ಪಂಥದ ಮುನಿಗಳು ದಿಗಂಬರ ಸಂಪ್ರದಾಯದಂತೆ ನಡೆದುಕೊಳ್ಳುತ್ತಿದ್ದರು. (ನಗ್ನತ್ವ, ಪಾಣಿಪಾತ್ರ, ರೋಜನ ನವಿಲುಗರಿಯ ಪಿಂಛ) ಆದರೆ ತಾತ್ವಿಕವಾಗಿ ಶ್ವೇತಾಂಬರ ಪಂಥದ ಕೆಲವು ತತ್ವಗಳನ್ನು ಒಪ್ಪುತ್ತಿದ್ದರು. ಸ್ತ್ರೀ ಮುಕ್ತಿ ಕೇವಲಿಗಳು ಆಹಾರ ಸೇವನೆ ಹಾಗೂ ವಿಸರ್ಜನೆ ಹೊಂದಿರುತ್ತಾರೆ. ಎಂಬಂಥ ಶ್ವೇತಾಂಬರ ಮಾತ್ರ ಮಾನ್ಯತೆಯ ತತ್ವಗಳನ್ನಿವರು ಮಾನ್ಯಮಾಡಿದ್ದಾರೆ. ಶ್ವೇತಾಂಬರ ಆಗಮಗಳನ್ನೆಲ್ಲಾ ಇವರು ಅಂಗೀಕರಿಸಿದ್ದರು.[೩೮]

ಇವುಗಳಲ್ಲದೆ 'ಅರ್ಥಸ್ಥಾಲಕ್ ಸಂಪ್ರದಾಯ'ವೆಂಬ ಈಗ ನಿಶ್ಯೇಷವಾಗಿರುವ ಒಂದು ಪಂಥವೂ ಉತ್ತರ ಭಾರತದ ಕೆಲಭಾಗಗಳಲ್ಲಿತ್ತು. ಅದೇ ರೀತಿ ತಾರಣ ಪಂಥ ಎಂಬ ಇನ್ನೊಂದು ಸಂಪ್ರದಾಯವೂ ೧೫ನೇ ಶತಮಾನದ ಕೊನೆಯಲ್ಲಿ ಮಧ್ಯಪ್ರದೇಶದ ಗ್ವಾಲಿಯರ್ ರಾಜ್ಯದಲ್ಲಿ 'ತರಣತಾರಣ ಸ್ವಾಮಿ' ಎಂಬಾತನಿಂದ ಸ್ಥಾಪಿಸಲ್ಪಟ್ಟಿತು. ಈ ಪಂಥದ ಕೆಲವೇ ಸಾವಿರ ಅನುಯಾಯಿಗಳು ಮಧ್ಯ ಪ್ರದೇಶದಲ್ಲಿದ್ದಾರೆ. ಈ ಎರಡು ಪಂಥಗಳು ಕರ್ನಾಟಕದಲ್ಲಿ ಬಹುಶಃ ಪ್ರವೇಶ ಪಡೆಯಲಿಲ್ಲ.

ಹೀಗೆ ಜೈನ ಪಂಥಗಳು ಗದಗ ಪರಿಸರದಲ್ಲಿ ದಿಗಂಬರವು ಹೆಚ್ಚು ಪ್ರಚಾರ ಪಡೆದಿದ್ದರೆ ಶ್ವೇತಾಂಬರ ಪಂಥವು ಅಲ್ಲಲ್ಲಿ ಕಾಣಿಸಿಕೊಂಡಿದೆ. ಆದರೆ ೮ನೇ ಶತಮಾನದಿಂದ ೧೫ನೆಯ ಶತಮಾನದವರೆಗೆ ಯಾಪನೀಯ ಪಂಥವು ಗದಗ ಪರಿಸರದಲ್ಲಿ ಹೆಚ್ಚು ಪ್ರಸಾರ ಹೊಂದಿತ್ತು. ಸದ್ಯಕ್ಕೆ ದಿಗಂಬರರು ಹೆಚ್ಚು ನೆಲೆಸಿರುವ ಪರಿಸರದಲ್ಲಿ ಶ್ವೇತಾಂಬರರು ಕೂಡಾ ಜೈನ ಧರ್ಮದ ಅಭ್ಯುದಯಕ್ಕೆ ಕಾರಣರಾಗಿದ್ದಾರೆ.




ಕರ್ನಾಟಕದಲ್ಲಿನ ಜೈನ ಸಮಾಜವು ಶ್ರಮಣ ಹಾಗೂ ಶ್ರಾವಕ ಸಮಾಜದ ಸಿದ್ಧಾಂತದ ನಂಬಿಕೆಗಳು ಆಚರಣೆಗಳು ಈ ಹಿಂದೆ ವಿವರಿಸಿದ್ದಕ್ಕಿಂತ ಭಿನ್ನವಾಗಿರಲಿಲ್ಲ. ಇದುವರೆಗಿನ ವಿವರಣೆಯು ಭಾರತದ ಜೈನ

೩೭. ಪಂಡಿತ ಕೈಲಾಸಚಂದ್ರಶಾಸ್ತ್ರೀ - ಜೈನ ಧರ್ಮ - ಪು - ೩೭

೩೮. ಹಂಪನಾ ಯಾಪನೀಯ ಸಂಘ - ಪುಟ - ೧೮.

ಸಮಾಜದ ಒಟ್ಟು ಬದುಕಿನ ಚೌಕಟ್ಟು ಹಾಗೂ ಅಡಿಪಾಯವಾಗಿದೆ. ಪೂಜ್ಯಪಾದರು (೫ನೇ ಶತಮಾನ) ಆಚಾರ್ಯ ಪುಷ್ಪದಂತ ಹಾಗೂ ಭೂತಭಲಿಗಳು (ಕ್ರಿ.ಶ. ೨ನೇ ಶತಮಾನ) ಆಚಾರ್ಯಕುಂದ ಕುಂದರು (ಕ್ರಿ.ಶ.೧ನೇ ಶತಮಾನ) ಆಚಾರ್ಯ ಉಮಾಸ್ವಾಮಿಗಳು ಹಾಗೂ ಸಮಂತಭದ್ರರು (ಕ್ರಿ.ಶ. ೩–೪ನೇ ಶತಮಾನ) ಅಕಲಂಕರು (೭ನೇ ಶತಮಾನ) ಇತ್ಯಾದಿ ಆಚಾರ್ಯರು ಕರ್ನಾಟಕದಲ್ಲಿ ಜೈನ ಧರ್ಮ ಬೆಳೆಯುವುದಕ್ಕೆ ಕಾರಣೀಭೂತರಾದವರು. ಇವರಿಂದ ಕರ್ನಾಟಕದಲ್ಲಿ ಜೈನ ಪರಂಪರೆಯು ಉಚ್ಛಾಯ ಸ್ಥಿತಿ ತಲುಪಲು ಸಾಧ್ಯವಾಯಿತೆನ್ನಬಹುದು.

ಕರ್ನಾಟಕದ ಜೈನ ಮುನಿಗಳು ಹಾಗೂ ಶ್ರಾವಕ ಶ್ರಾವಕಿಯರ ವ್ಯಕ್ತಿತ್ವ ನಡವಳಿಕೆಗಳು ಹೇಗಿದ್ದವೆಂಬುದನ್ನು ಕನ್ನಡ ಕಾವ್ಯಗಳಿಂದ ಸ್ಪಷ್ಟವಾಗಿ ತಿಳಿದು ಬರುತ್ತವೆ. ಆರಂಭದಲ್ಲಿ ಶುದ್ಧ ಜೈನಾಚಾರ ಸಂಪನ್ನವಾಗಿದ್ದ ಶ್ರಾವಕರ ನಡವಳಿಕೆಗಳು ಕ್ರಮೇಣ ಅನ್ಯಧರ್ಮಗ್ಗಳ ಪ್ರಭಾವ, ಮತಾಂತರ ಇತ್ಯಾದಿ ಕಾರಣಗಳಿಂದಾಗಿ ಸ್ವಲ್ಪ ಮಟ್ಟಿಗೆ ಸಮ್ಮಿಶ್ರಗೊಳ್ಳುತ್ತ ಬಂದವು. ಕವಿಬ್ರಹ್ಮಶಿವನ ಸಮಯ ಪರೀಕ್ಷೆಯಲ್ಲಿ ಈ ಎರಡು ಮಾದರಿಗಳಿಗೆ ಆಧಾರ ಸಿಗುತ್ತದೆ. ಅವನು ನೀಡುವ ತತ್ಕಾಲೀನ (೧೨ನೇ ಶತಮಾನ) ಜೈನ ಸಮಾಜದ ಕುರಿತಾದ ಸಂಬಂಧಿತ ಮಾಹಿತಿಗಳನ್ನು ಹೀಗೆ ಸಂಗ್ರಹಿಸಬಹುದು.

ಆ ಕಾಲದ ಮುನಿಗಳು ಕಠಿಣ ತಪಸ್ಸಿನಲ್ಲಿ ತೊಡಗಿರುತ್ತಿದ್ದರು. ಶ್ರಾವಕರ ಗೌರವಕ್ಕೆ ಪಾತ್ರರಾಗಿದ್ದರು. ಆಗಮರಹಸ್ಯ ಅರಿತಿದ್ದರು. ವಿನಯ ಪರರೂ ನಿರಹಂಕಾರಿಗಳೂ ಆಗಿದ್ದರೂ ದುರ್ಮಾರ್ಗಕ್ಕೆ ಹೋದ ಗೃಹಸ್ಥರಿಗೆ ಉಪದೇಶವಿತ್ತು ಸನ್ಮಾರ್ಗಕ್ಕೆ ತರುತ್ತಿದ್ದರು. ೧೨ನೇ ಶತಕದ ಶಾಸನಗಳಿಂದಲೂ ಇದಕ್ಕೆ ಇಂಬೂ ದೊರೆಯುತ್ತದೆ. ಜೈನ ಯತಿಗಳು ದಾರಿ ತಪ್ಪಿದರೆ ಅದನ್ನು ಸಮಾಜ ತೀವ್ರವಾಗಿ ಪರಿಗಣಿಸುತ್ತಿತ್ತು. ಆದರೆ ಅನ್ಯಧರ್ಮದ ಯತಿಗಳು ಕೆಟ್ಟರೆ ಅಷ್ಟೂ ತೀವ್ರವಾಗಿ ಪರಿಗಣಿಸುತ್ತಿರಲಿಲ್ಲ. ಶ್ರಾವಕರು ಯತಿಗಳನ್ನು ಭಕ್ತಿ ಗೌರವಗಳಿಂದ ನೋಡುತ್ತಿದ್ದರು. ಶ್ರಾವಕರು ನ್ಯಾಯಮಾರ್ಗದಿಂದ ಹಣ ಸಂಪಾದನೆ ಮಾಡುತ್ತಿದ್ದರು. ಸತ್ಕಾರ್ಯಕ್ಕೆ ಅದನ್ನು ವಿನಿಯೋಗ ಮಾಡುತ್ತಿದ್ದರು. ಚಾರಿತ್ರ್ಯ ಬಿಡುತ್ತಿರಲಿಲ್ಲ. ಸಮಾಜಬಂಧುಗಳೆಲ್ಲ ಪ್ರೇಮದಿಂದ ವರ್ತಿಸುತ್ತಿದ್ದರು. ಅನ್ಯಮತದವರೊಂದಿಗೆ ಹೆಚ್ಚು ಸಂಪರ್ಕ ಬೆಳೆಸುತ್ತಿರಲಿಲ್ಲ. ಹೀಗೆಲ್ಲ ಗುಣಗಳನ್ನು ಪಟ್ಟಿ ಮಾಡಿರುವ ಬ್ರಹ್ಮಶಿವ ತತ್ಕಾಲೀನ ಜೈನ ಸಮಾಜದ ದೋಷಗಳನ್ನು ಮುಚ್ಚಿಡದೆ ಹೇಳಿದ್ದಾನೆ. 'ಧರ್ಮಬಾಂಧವರು ಬಂದಾಗ ಕೆಲವರು ಸರಿಯಾಗಿ ಮಾತನಾಡಿಸದೆ ಗರ್ವದಿಂದ ಸತ್ತವರಂತೆ ಇರುತ್ತಿದ್ದರು. ಸಿರಿವಂತರು ಬಂದರೆ ಆದರಿಸುವ ಬಡವರು ಬಂದರೆ ತಿರುಗಿ ನೋಡದ ಶ್ರಾವಕರೂ ಇದ್ದರೂ. ಜಿನನಲ್ಲದ ಅನ್ಯದೈವಗಳನ್ನು ಪೂಜಿಸುವ ದೇವತಾಮೂಢಕ್ಕೆ ಕೆಲ ಜೈನರು ಗುರಿಯಾಗಿದ್ದರು. ಮಾರಿ, ಬಳ್ಳರಿ, ನಾಗಪೂಜೆ ಮಾಡುವುದು ಮೊದಲಾದ ಆಚರಣೆಗಳು ರೂಢಿಯಲ್ಲಿದ್ದವು. ಸ್ತ್ರೀಗೆ ಸಮಾನ

ಸ್ವಾತಂತ್ರ್ಯ ವಿಧವೆಗೆ ಗಂಡನ ಆಸ್ತಿಹಕ್ಕು ಸ್ವಾತಂತ್ರ್ಯವಾಗಿ ದತ್ತಕ ಸ್ವೀಕರಿಸುವ ಹಕ್ಕುಗಳಿದ್ದವು.[೩೯]

ಕರ್ನಾಟಕದಲ್ಲಿ ಮತ್ತು ಅಕ್ಕಪಕ್ಕದ ರಾಜ್ಯಗಳಲ್ಲಿ ಜೈನ ಧರ್ಮವು ಮೊದಲು ವಿಜೃಂಭಿಸಿ ಮೆರೆದರೂ ಕ್ರಮೇಣ ಆಘಾತಗಳನ್ನು ಅವಹೇಳನೆಗಳನ್ನು ಅನುಭವಿಸಬೇಕಾಗಿ ಬಂತು. ಈ ಆಘಾತಗಳು ಕೇವಲ ರಾಜಾಶ್ರಯ ತಪ್ಪಿದ್ದರಿಂದಷ್ಟೇ ಬಂದದ್ದೆಲ್ಲ ಅನ್ಯ ಸಂಸ್ಕೃತಿಗಳ, ಧರ್ಮಗಳ ಅಕ್ರಮಣಕ್ಕೆ ಸಿಕ್ಕದ್ದರಿಂದಲೂ ಉಂಟಾಯಿತು. ಕನಾಟಕದ ಜೈನ ಸಮಾಜ ಕನಿಷ್ಠ ಮೂರು ಭಾರೀ ಆಘಾತಗಳನ್ನು ಎದುರಿಸಿದೆ.[೪೦]

೧. ಶಂಕರಾಚಾರ್ಯ ಕಾಲದಲ್ಲಿ – ಕ್ರಿ.ಶ. ೮ನೆಯ ಶತಮಾನ.

೨. ವೀರಶೈವ ಧರ್ಮಸಂಸ್ಥಾಪನೆಯ ಕಾಲದಲ್ಲಿ – ಕ್ರಿ.ಶ. ೧೨ನೆಯ ಶತಮಾನ.

೩. ಹೊಯ್ಸಳ ರಾಜ್ಯದಲ್ಲಿ – ರಾಮಾನುಜಾಚಾರ್ಯರ ಕಾಲದಲ್ಲಿ – ೧೨ನೆಯ ಶತಮಾನ.

ಈ ಸಂಕ್ರಮಣ ಕಾಲಗಳಲ್ಲಿ ಭಾರೀ ಪ್ರಮಾಣದಲ್ಲಿ ಮತಾಂತರಗಳು ಬಸದಿಗಳ ನಾಶ ಇವೆಲ್ಲ ನಡೆದುವಲ್ಲದೆ ಜೈನರನ್ನು ಅವಹೇಳನ ಮಾಡುವುದೂ ನಡೆಯಿತು. ಈ ಕುರಿತು ವಿವರಗಳು ಬ್ರಹ್ಮಶಿವನ ಸಮಯ ಪರೀಕ್ಷೆಯಲ್ಲಿವೆ. ಇಂಥ ಘಟನೆಗಳನ್ನು ಕುರಿತು ಶ್ರೀ ಎಸ್. ಆರ್. ಶರ್ಮ ಅವರು "ಅಂದಿನ ಯುಗದಲ್ಲಿ ಜೈನರಿಗೆ ಅನ್ಯರು ಅಹಿಂಸೆ ಕೊಟ್ಟ ನೂರಾರು ಘಟನೆಗಳು ನಮಗೆ ದೊರೆಯುತ್ತವೆಯೇ ಹೊರತು ಅದಕ್ಕೆ ವಿರುದ್ಧವಾದವುಗಳು ನಡೆಯಲಿಲ್ಲವೆಂದೇ ಹೇಳಬೇಕು." ಎಂದು ಹೇಳಿದರೆ ಬಿ. ಎ. ಸಾಲಿತ್ತೊರೆಯವರು "ಅನ್ಯಮತಗಳ ವಿಷಯದಲ್ಲಿ ಉದಾರಿಗಳೆಂದು ಹೆಸರಾದ ಹಿಂದೂಗಳು ಆ ಯುಗದಲ್ಲಿ ದಕ್ಷಿಣ ಭಾರತದಲ್ಲಿ ಜೈನ ಧರ್ಮದ ವಿಷಯದಲ್ಲಿ ಅಸಹನೆಯಿಂದ ನಡೆದುಕೊಂಡದ್ದಕ್ಕಿಂತ ದುಃಖಪೂರ್ಣವಾದ ಘಟನೆ ಬೇರೊಂದಿಲ್ಲ." ಎಂದು ಅಭಿಪ್ರಾಯ ಪಟ್ಟಿದ್ದಾರೆ.[೪೧] ಇಂಥ ಘೋರ ಅಪಮಾನಗಳನ್ನು ಆಘಾತಗಳನ್ನು ಕರ್ನಾಟಕದ ಜೈನ ಸಮಾಜ ಕ್ರಿ.ಶ. ಹನ್ನೊಂದನೇ ಶತಮಾನದಿಂದ ಸುಮಾರು ೧೭ನೇ ಶತಮಾನದವರೆಗೂ ಎದುರಿಸುತ್ತ ಬಂದಿತು.

ಅನ್ಯಧರ್ಮದಿಂದ ಜೈನಧರ್ಮಕ್ಕೂ ಜೈನಧರ್ಮದಿಂದ ಅನ್ಯಧರ್ಮಕ್ಕೂ ಮತಾಂತರ ನಡೆದುದರ ಬಗ್ಗೆ ಸಾಕಷ್ಟು ವಿವರಗಳು ಕರ್ನಾಟಕದ ಸಾಹಿತ್ಯ ಮತ್ತು ಇತಿಹಾಸದಲ್ಲಿ ಲಭ್ಯವಿದೆ.[೪೨] ಆದರೆ ಈ ಮತಾಂತರಗಳ ವಿಷಯದಲ್ಲಿ ಮುಖ್ಯವಾದ ಮಾತು ಒಂದೇ ಒಂದು ಅದೆಂದರೆ ಜೈನಧರ್ಮ ಬಿಟ್ಟುಹೋದವರು. ಸ್ವಇಚ್ಛೆಯಿಂದಲೂ ಹೋಗಿದ್ದಾರೆ, ಬಲವಂತದಿಂದಲೂ ಹೋಗಿದ್ದಾರೆ. ಆದರೆ ಜೈನಧರ್ಮದೊಳಕ್ಕೆ ಬರುವವರ ಮೇಲೆ ಮಾತ್ರ ಬಲತ್ಕಾರ ಎಲ್ಲಿಯೂ ನಡೆಯಲಿಲ್ಲ ಎಂಬುದು. ಜೈನಧರ್ಮದ ಮಹತ್ವವನ್ನು ಅರುಹುತ್ತದೆ. ಕರ್ನಾಟಕದ ಮಟ್ಟಿಗಂತೂ ಒಂದು ಸಾವಿರ

---

೩೯. ಡಾ. ಕೆ. ಅನಂತರಾಮು – ಪೂರ್ವಕ್ತ ಗ್ರಂಥ – ಪುಟ – ೯೭.

೪೦. ಮಿರ್ಜಿ ಅಣ್ಣಾರಾಯರು – ಪೂರ್ವಕ್ತ ಗ್ರಂಥ – ಪುಟ – ೧೨೩.

೪೧. ಇವುಗಳ ವಿವರಣೆಗಳಿಗೆ – ಡಾ. ಅನಂತರಾಮು ಅವರ ಪೂರ್ವಕ್ತ ಗ್ರಂಥ ನೋಡಬಹುದು.

೪೨. ಡಾ. ಕೆ. ಅನಂತರಾಮು – ಪೂರ್ವಕ್ತ ಗ್ರಂಥ – ಪುಟ – ೯೩–೬

ವರ್ಷಗಳವರೆಗೆ ಜೈನಧರ್ಮ ಸಾಂಸ್ಕೃತಿಗಾಗಿ ಹಾಗೂ ರಾಜಕೀಯವಾಗಿ ಮಹತ್ವವನ್ನು ವಹಿಸಿತ್ತು. ಕನ್ನಡ ನಾಡಿನ ಜೀವನಕ್ಕೆ ಶಾಸ್ತ್ರದ ಬೆಳಕನ್ನು ಕಾವ್ಯದ ತಂಪನ್ನು ತಂದುಕೊಟ್ಟು ಅದನ್ನು ರೂಪಿಸಿದವರು ಜೈನರು. ೨ನೇ ಶತಮಾನದಿಂದ ೧೩ನೆಯ ಶತಮಾನದವರೆಗೆ ಕೆಲವು ಶಕ್ತಿಯುತ ಸಾಮ್ರಾಜ್ಯವನ್ನು ಮುನ್ನಡೆಸಿದ ಅದು ತನ್ನ ಧಾರ್ಮಿಕ ಉಪದೇಶಗಳ ಮೊತ್ತವನ್ನು ಒಂದು ಜೀವಂತ ರಾಜಕೀಯ ಶಕ್ತಿಯಾಗಿ ಮಾರ್ಪಡಿಸಿತ್ತು.

***

# ಅಧ್ಯಾಯ – ೩
# ಗದಗ ಪರಿಸರದ ಜೈನ ಮುನಿಗಳು ಮತ್ತು ಪರಂಪರೆ

ಅಧ್ಯಾಯ ೩

# ಗದಗ ಪರಿಸರದ ಜೈನ ಮುನಿಗಳು ಮತ್ತು ಪರಂಪರೆ

## ೩.೧. ಪೀಠಿಕೆ :

ಜೈನ ಮುನಿ ಪರಂಪರೆಗೆ ಗದಗ ಪರಿಸರವು ವಿಶೇಷವಾದ ಕೊಡುಗೆಯನ್ನು ಕೊಟ್ಟಿದೆ. ಸ್ವಪರ ಕಲ್ಯಾಣವನ್ನು ಬಯಸುವ ಜೈನಮುನಿಗಳು ಈ ಪರಂಪರೆಯ ಆಧಾರ ಸ್ತಂಭಗಳು ಇವರು ಆತ್ಮಕಲ್ಯಾಣದೊಂದಿಗೆ ಸಮಾಜ ಮತ್ತು ಧರ್ಮ ಕಲ್ಯಾಣಗಳಂತಹ ಕಾರ್ಯಗಳಲ್ಲಿ ಪ್ರೋತ್ಸಾಹಕರಾಗಿ ಈ ಪರಂಪರೆಯ ಅಭಿವೃದ್ಧಿಗೆ ಕಾರಣರಾಗಿದ್ದಾರೆ.

ಗದಗ ಪರಿಸರದಲ್ಲಿ ೮ನೆಯ ಶತಮಾನದಿಂದ ೧೬ನೆಯ ಶತಮಾನದವರೆಗಿನ ಕಾಲಾವಧಿಯಲ್ಲಿ ಅನೇಕ ಜೈನ ಮುನಿಗಳು ಆಗಿ ಹೋಗಿದ್ದಾರೆ. ಇಲ್ಲಿಯ ಜೈನ ಮುನಿಗಳಲ್ಲಿ ಮೂಲ ಸಂಘದವರೂ, ಯಾಪನೀಯ ಸಂಘದವರು ಗಣ, ಗಚ್ಛ, ಅನ್ವಯ ಸಂಘದವರೂ ಆಗಿಹೋಗಿದ್ದಾರೆ. ಈ ಜೈನ ಮುನಿಗಳಲ್ಲಿ ಪಂಡಿತರೂ, ವ್ಯಾಕರಣಕಾರರೂ, ಕವಿಗಳು ಆಗಿದ್ದರು. ಹೀಗೆ ಗದಗ ಪರಿಸರದಲ್ಲಿ ಮುನಿಗಳು ಜೈನ ಪರಂಪರೆಯನ್ನು ಉಳಿಸಿ ಬೆಳೆಸುವಲ್ಲಿ ಸಾಕಷ್ಟು ಪ್ರಯತ್ನಿಸಿದ್ದಾರೆ. ಅವರೆಲ್ಲರ ವಿವರಣೆಗಳನ್ನು ಮುಂದೆ ವಿವೇಚಿಸಲಾಗಿದೆ.

ಮುಳಗುಂದ ನಾಡಿನಲ್ಲೇ ಸೇನಗಣ, ಯಾಪನೀಯ ಸಂಘ, ನಂದಿಸಂಘ, ಸಿಂಹ ಸಂಘಗಳಿಗೆ ಸೇರಿದ ಮುನಿಗಳ ಶಾಸನಗಳು ದೊರಕಿವೆ. ಮುಳಗುಂದದ ಚಂದ್ರಿಕಾವಾಟದ ಜೈನಮುನಿ ಪರಂಪರೆ ಎಂದೇ ಪ್ರಸಿದ್ಧವಾದ ನಯಸೇನನ ಗುರುಶಿಷ್ಯ ಪರಂಪರೆಯು ಕುಮಾರಸೇನ ಮುನಿ ಮೊದಲುಗೊಂಡು ಹೇಮಸೇನ ಮುನಿಯವರೆಗೆ ಕ್ರಿ.ಶ. ೮೦೦ರಿಂದ ೧೪೨೦ರವರೆಗೆ ಅನ್ಯಪ್ರಬಲ ಧರ್ಮದೊಡನೆ ಒಡಂಬಡಿಕೆ ಮಾಡಿಕೊಂಡು ಉಳಿದು ಬಂದಿದ್ದೇ ಸಾಹಸವೆನ್ನಬೇಕು.

ಅಹಿಂಸಾ ಪಾಲನೆಯನ್ನು ಎಚ್ಚರಿಕೆಯಿಂದ ವಹಿಸುತ್ತ, ನಿವೃತ್ತಿ ಮಾರ್ಗದಲ್ಲಿ ಸಂಚಾರವನ್ನು ಕೈಕೊಂಡು ಲೌಕಿಕ ಅಪೇಕ್ಷೆಗಳನ್ನು ಗೆಲಿದು ಹೃದಯವನ್ನು ಸಂಪೂರ್ಣವಾಗಿ ಬರಿದುಮಾಡಿ ನಿರ್ವಾಣವನ್ನು ಸಾಧಿಸುವದೆ

ಜೈನ ಧರ್ಮದ ಮೂಲ ಮತ್ತು ಶ್ರೇಷ್ಠ ಉದ್ದೇಶವಾಗಿದೆ ಆ ಉದ್ದೇಶದ ಸಾಧನೆಯಲ್ಲಿ ನಿರತರಾಗಿರುವ ಮುನಿಗಳನ್ನು ಮ್ಯಾಕ್ಸ್‌ವೇಬರ್ "ಸುಸಂಸ್ಕೃತ ವೃತ್ತಿ ಸಂಪನ್ನರು" ಎಂದು ಕರೆದಿರುವನು.[೧]

ಪುಲಿಗೇರಿ-೩೦೦ರ ಆಡಳಿತ ವಿಭಾಗದಲ್ಲಿ ರಾಜ, ಮಹಾರಾಜರಿಂದ ಶೆಟ್ಟಿ-ಸಾಮಂತರಿಂದ ನಿರ್ಮಾಣಗೊಂಡ ಬಸದಿಗಳಲ್ಲಿ ಘನವಿದ್ವಾಂಸರಾದ ಜೈನ ಆಚಾರ್ಯರು ಇರುತ್ತಿದ್ದರು. ಉದಯದೇವ ಪಂಡಿತ, ನಿರವದ್ಯಾಪಂಡಿತ ರಾಮದೇವಾಚಾರ್ಯ, ಜಯದೇವ, ಶ್ರೀ ವಿಜಯದೇವ ಧ್ರುವದೇವಾಚಾರ್ಯ ದೇವಚಂದ್ರ ಭಟ್ಟಾರಕ, ಏಕದೇವ, ಜಯದೇವ ಪಂಡಿತ, ಗಂಡ ವಿಮುಕ್ತ ಭಟ್ಟಾರಕ, ತ್ರಿಭುವ ಚಂದ್ರಪಂಡಿತ, ಶ್ರೀನಂದಿ ಪಂಡಿತ, ಭಾಸ್ಕರ ಪಂಡಿತ ಇಂದ್ರಕೀರ್ತಿ ಪಂಡಿತ, ಪದ್ಮಸೇನ, ಹೇಮದೇವಾಚಾರ್ಯ, ಶಂಖಣಾಚಾರ್ಯ ಮೊದಲಾದ ಜೈನಾಚಾರ್ಯರು ಕ್ರಿ.ಶ. ೭-೮ನೆಯ ಶತಮಾನಗಳಿಂದ ಕ್ರಿ.ಶ. ೧೬ನೆಯ ಶತಮಾನದವರೆಗೂ ಪುಲಿಗೆರೆಯಲ್ಲಿ ಇದ್ದರು.[೨]

ಹೀಗೆ ಗದಗ ಜಿಲ್ಲೆಯಲ್ಲಿ ಜೈನ ಪರಂಪರೆಯನ್ನು ಬೆಳಗಿಸಿದ ಈ ಮುನಿಗಳ ಕುರಿತು ವಿವರಣೆಯನ್ನು ಮುಂದೆ ಕೈಗೊಳ್ಳಲಾಗಿದೆ. ಜೈನ ಧರ್ಮಕ್ಕೆ ಉಜ್ವಲಕೀರ್ತಿ ಪ್ರಾಪ್ತವಾಗುವಂತೆ ಮಾಡಿದ ಕಾರಣದಿಂದಾಗ ಅದು ಈ ನಾಡಿನ ಜನ ಸಾಮಾನ್ಯರ ಧರ್ಮವಾಗಿ ಬೆಳೆಯಲು ಸಾಧ್ಯವಾಯಿತು.

## ಗದಗ ಪರಿಸರದ ಜೈನ ಮುನಿಗಳು ಮತ್ತು ಪರಂಪರೆ

ನಯಸೇನ ಧರ್ಮಾಮೃತದ ಆರಂಭದಲ್ಲಿ ಶ್ರೀ ವೀರಜಿನೇಂದ್ರ ಸಿದ್ಧರು, ಆಚಾರ್ಯರು, ಉಪಾಧ್ಯಾಯರು, ಸಾಧುಗಳು, ಸಿದ್ಧಯಿನಿಯಕ್ಷಿ ಗಜಮುಖಯುಕ್ತ ಮತ್ತು ಸರಸ್ವತಿಯನ್ನು ಪ್ರಾರ್ಥಿಸಿ ಆಮೇಲೆ ಅರ್ಹದ್ವಲಾಚಾರ್ಯರಿಂದ ಮೊದಲುಗೊಂಡು ಅಕಳಂಕ ದೇವರವರಗೆ ಆಗಿ ಹೋದ ನಾಲ್ವತ್ತೆಂಟು ಜನ ಯತಿ ಮುನಿಗಳನ್ನು ಒಟ್ಟು ಮೂವತ್ತು ಪದ್ಯಗಳಲ್ಲಿ ಸ್ಮರಿಸಿದ್ದಾರೆ.[೩] (ಧರ್ಮಾಮೃತ-ನಯಸೇನ-ಪದ್ಯ ೯ರಿಂದ ೩೮ರವರೆಗೆ)

**೧. ಕುಮಾರಸೇನ (ಕ್ರಿ.ಶ. ೮೬೦) :**

ಚಾವುಂಡರಾಯ ಪುರಾಣದ ಒಂದು ಪದ್ಯದಿಂದ ಕುಮಾರಸೇನನೆಂಬ ಮುನಿಪನು ಮುಳ್ಗುಂದದಲ್ಲಿ ಅಸಿಧಾರಾವ್ರತದಿಂದಿದ್ದು. ಆಮೇಲೆ ಕೊಪಣದ್ರೀಂದ್ರಕ್ಕೆ ಹೋಗಿ ಅಲ್ಲಿ ಅಶಮೋಕ್ತವಿಧಾನದಿಂದ ಮುಡಿಪಿದ ವಿಷಯ ತಿಳಿದು ಬರುತ್ತದೆ. (ಚಾ.ರಾ.ಪು. ೧-೧೫) ಮುಳಗುಂದದ ಅತ್ಯಂತ ಪ್ರಾಚೀನ ಶಾಸನ (ಕ್ರಿ.ಶ.೯೦೦೨-೦೩) ರಾಷ್ಟ್ರಕೂಟ-೨ನೆಯ ಕೃಷ್ಣನ ಆಳ್ವಿಕೆಯಲ್ಲಿ ಹುಟ್ಟಿದ ಶಾಸನ ಈ ಶಾಸನದಲ್ಲಿ ಬರುವ ಚಂದ್ರಿಕಾವಾಟ ಸೇನಾನ್ವಯದ ಕುಮಾರಸೇನಾಚಾರ್ಯನು ಪ್ರಾಯಃ ಚಾವುಂಡರಾಯ ಪುರಾಣದಲ್ಲಿ ಬರುವ ಕುಮಾರಸೇನನೇ

---

೧. Max Weber, Religions of India. The Free Press, Glencoe Illinois 1958, pp.192-204.

೨. ತಿರುಳ್‌ಗನ್ನಡ ನಾಡು ಪುಲಿಗೆರೆ-ಪ್ರೊ. ಸದಾನಂದ ಕನವಳ್ಳಿ, ಸಿ. ವಿ. ಕೆರಿಮನಿ, ಪು. ೭೫.

೩. ನಯಸೇನ ಮತ್ತು ಅವನ ಕೃತಿಗಳು, ಡಾ. ಬಿ. ವ್ಹಿ. ಮಲ್ಲಾಪುರ, ಪು-೮ ರಿಂದ ೧೦.

ಆಗಿರಬೇಕು. ಇದರಿಂದ ೧೦ನೆಯ ಶತಮಾನದ ಆರಂಭಕ್ಕಾಗಲೇ ಮುಳಗುಂದದ ಜೈನ ಗುರುಗಳು ಜನರಿಂದ ದಾನಗಳನ್ನು ಸ್ವೀಕರಿಸುವಷ್ಟು ಪೂಜ್ಯರಾಗಿದ್ದರೆಂಬುದು ವೀಧಿತವಾಗುತ್ತದೆ. ಈತನು ಯಾಪನೀಯ ಪಂಥದ ಚಂದ್ರಕಾವಾಟ ಸೇನಗಣ/ಅನ್ವಯದ ಮುಖ್ಯಸ್ಥನಾಗಿದ್ದ ಚಾಂದಕವಟೆಯಿಂದ ಮುಳಗುಂದಕ್ಕೆ ಈ ಸಂಘವನ್ನು ಸ್ಥಳಾಂತರಿಸಿದನು. ಮುಳಗುಂದ ನಾಡಿನಲ್ಲಿ ಜೈನ ಪರಂಪರೆ ಬೆಳೆಯುವುದಕ್ಕೆ ಅಪಾರವಾದ ಕೊಡುಗೆಯನ್ನು ನೀಡಿದ್ದಾನೆ.[೪]

## ೨. ವೀರಸೇನ (ಕ್ರಿ.ಶ. ೮೯೦) :

ಮುಳಗುಂದಕ್ಕೆ ಸ್ಥಳಾಂತರವಾದ ಚಂದ್ರಕಾವಾಟ ಸೇನಾನ್ವಯದ ಮುಖ್ಯಸ್ಥರಾಗಿ ಕುಮಾರಸೇನನ ನಂತರ ಜೈನ ಪರಂಪರೆಯನ್ನು ಈ ನಾಡಿನಲ್ಲಿ ಬೆಳೆಸಿದರು. ರಾಷ್ಟ್ರಕೂಟರ ಮನೆತನದ ಪ್ರಸಿದ್ಧ ದೊರೆ ಅಮೋಘ ವರ್ಷನ ಕಾಲದಲ್ಲಿ (೮೧೪-೭೭) ಜೈನಧರ್ಮ ಮುಳಗುಂದ ನಾಡನ್ನು ಪ್ರವೇಶಿಸಿತು. ಈ ಅವಧಿಯಲ್ಲಿಯೇ ಚಂದ್ರಕಾವಾಟದ ಸೇನಗಣಕ್ಕೆ ಸೇರಿದ ಜೈನ ಮುನಿಗಳು ಮುಳಗುಂದ ನಗರವನ್ನು ಪ್ರವೇಶಿಸಿದರು. ಜಿನಸೇನ ಮುನಿಗಳು ರಾಜನ ರಾಜಕೀಯ ಗುರುಗಳಾಗಿದ್ದರು. ಜೈನ ಮುನಿ ವೀರಸೇನ ಇವರಿಗೆ ಆಶ್ರಯ ಒದಗಿಸಿದ್ದಲ್ಲದೆ ಸ್ವತಃ ಜೈನನೀತಿ ಶಾಸ್ತ್ರ ಕೃತಿಯಾದ 'ಪ್ರಶ್ನೋತ್ತರ ರತ್ನಮಾಲಾ' ಗ್ರಂಥವನ್ನು ರಚಿಸಿದನು.

ವೀರಸೇನನು ಮುಳಗುಂದ ನಾಡಿನಲ್ಲಿ ಜೈನ ಪರಂಪರೆಯನ್ನು ಬೆಳೆಸಿ ಈ ಪ್ರದೇಶದಲ್ಲಿ ನೆಲೆಗೊಳ್ಳುವಂತೆ ಈ ಮುನಿಯು ಹಲವಾರು ಅಭಿವೃದ್ಧಿ ಕಾರ್ಯಗಳನ್ನು ಕೈಗೊಂಡನು. ಈ ಪ್ರದೇಶದಲ್ಲಿ ಯಾಪನೀಯ ಪಂಥವು ಬೆಳೆಯುವಂತೆ ಜೈನ ಧರ್ಮದ ತತ್ವಗಳನ್ನು ಪ್ರಸಾರ ಮಾಡಿ ಜೈನ ಹಾಗೂ ಜೈನೇತರರ ನಡುವೆ ಸಾಮರಸ್ಯವನ್ನು ಬೆಸೆಯುವಲ್ಲಿ ಯಶಸ್ವಿಯಾದ ಮುನಿಗಳು ಇವರು.[೫]

## ೩. ಆರ್ಯಸೇನ – ಆರ್ಯನಂದಿ (ಸುಮಾರು ೯೩೦)

ಚಾವುಂಡರಾಯ ಪುರಾಣದಲ್ಲಿ ಹಾಗೂ ನೇಮಿಚಂದ್ರನ ಸಿದ್ಧಾಂತ ಚಕ್ರವರ್ತಿಕೃತ 'ಗೊಮ್ಮಟಸಾರ'ದಲ್ಲಿ ಅಜೀತಸೇನನ ಗುರು ಆರ್ಯಸೇನನೆಂದು ವಿಧಿತವಾಗುತ್ತದೆ. (ಎ. ಎನ್. ಉಪಾಧ್ಯೆ ಅವರ ಪ್ರಕಾರ ಅಜಿತಸೇನನ ಗುರು ಆರ್ಯನಂದಿ) ಇವನು ಸೇನಗಣಕ್ಕೆ ಸೇರಿದವನಾಗಿರುವುದರಿಂದ ಅಲ್ಲಿ ಆರ್ಯನಂದಿಗೆ ಪ್ರತಿಯಾಗಿ ಆರ್ಯಸೇನ ಇರಬೇಕು ಆದರೆ ಸೇನಗಣದ ಯತಿಗಳ ಹೆಸರಿನ ಕೊನೆಗೆ ಸೇನಶಬ್ದವೇ ಬರಬೇಕೆಂಬುದನ್ನು ಅಷ್ಟು ಖಚಿತವಾಗಿ ಪಾಲಿಸದಂತೆ ತೋರುವುದಿಲ್ಲ. ಮುನಿಯು ಮುಳಗುಂದ ನಾಡಿನಲ್ಲಿ ಜೈನ ಧರ್ಮದ ಪರಂಪರೆಯು ಬೆಳೆಯುವುದಕ್ಕೆ ಅಪಾರವಾದ ಕೊಡುಗೆಯನ್ನು ನೀಡಿದ್ದಾನೆ.

---

೪. ಯಾಪನೀಯ ಸಂಘ, ಹಂಪನಾ, ಪು. ೪೮.

೫. ನಯಸೇನ ಮತ್ತು ಅವನ ಕೃತಿಗಳು, ಡಾ. ಬಿ. ವ್ಹಿ. ಮಲ್ಲಾಪೂರ, ಪು. ೮ ರಿಂದ ೧೦.

## ೪. ಅಜಿತಸೇನ (೯೬೩) :

ಈತನು ಮುಳಗುಂದ ನಾಡಿನಲ್ಲಿ ಜೈನ ಧರ್ಮ ಪ್ರಸಾರ ಮಾಡಿದರು ಮೂಲ ಸಂಘದಿಂದ ಸೇನಾನ್ವಯ ಹುಟ್ಟಿತು ಅದಕ್ಕೆ ಚಂದ್ರಕವಾಟನ್ವಾಯವೆಂದೂ ಹೆಸರು ಆ ಚಂದ್ರಕವಟಾನ್ವಯದ ವರಿಷ್ಠರು ಅಜೀತಸೇನ ಭಟ್ಟಾರಕರಾದರು.[೬] ಅಜಿತಸೇನನ ಕಾಲ ಸ್ಥೂಲವಾಗಿ ಕ್ರಿ.ಶ.೯೬೩ ಆಗಿದೆ. ಗಂಗಮಾರಸಿಂಹ ಮತ್ತು ರಾಚಮಲ್ಲರ (ಕ್ರಿ.ಶ. ೯೭೪–೮೪) ದಂಡನಾಥನೂ ಮಂತ್ರಿಯೂ ಆಗಿದ್ದ ಚಾವುಂಡರಾಯ ತನ್ನ ತ್ರಿಷಷ್ಠಿ ಲಕ್ಷ್ಮಣ ಮಹಾಪುರಾಣವನ್ನು ಬರೆದು ಮುಕ್ತಾಯಗೊಳಿಸಿದ ಕಾಲ ಕ್ರಿ.ಶ. ೯೭೮ ಅವನ ಗುರು ಅಜಿತಸೇನ ಆದ್ದರಿಂದ ಮುಳಗುಂದದಲ್ಲಿದ್ದ ಈ ಅಜೀತಸೇನ ಮುನಿಗಳೇ ಚಾವುಂಡರಾಯನ ಗುರುವಾಗಿದ್ದರು. ಎಂಬುವುದನ್ನು ಶಾಸನಗಳು ಖಚಿತ ಪಡಿಸುತ್ತವೆ. ಹಾಗೂ ನಯಸೇನನು ತನ್ನ ಧರ್ಮಾಮೃತ ಕೃತಿಯಲ್ಲಿ ಗುರು ಪರಂಪರೆಯಲ್ಲಿ ಈ ಅಜಿತಸೇನರ ಕುರಿತು ಸ್ಪಷ್ಟವಾದ ವಿವರಣೆಯನ್ನು ನೀಡಿದ್ದಾನೆ.[೪೯]

## ೫. ಕನಕಸೇನ (೯೯೩) :

ಕನಕಸೇನರು ಮುಳಗುಂದದಲ್ಲಿ ಜೈನಧರ್ಮ ಪರಂಪರೆಯನ್ನು ಬೆಳೆಸಿದರು. ಕ್ರಿ.ಶ.೧೧ನೆಯ ಶತಮಾನದ ಶಾಸನವು ಕನಕಸೇನ ಮುನಿಗಳಿಗೆ ನರೇಂದ್ರಸೇನ–೧ ಹಾಗೂ ಜೀನಸೇನರೆಂಬ ಶಿಷ್ಯರ ಕುರಿತು ತಿಳಿಸುತ್ತದೆ. ಇದೇ ವಿಷಯವನ್ನು ಮುಳಗುಂದದಲ್ಲಿಯೇ ಇದ್ದ ಮಲ್ಲಿಷೇಣನ ನಾಗಕುಮಾರ ಕಾವ್ಯದಿಂದ ತಿಳಿದು ಬರುತ್ತದೆ. ಈ ಗುರುಪರಂಪರೆಯನ್ನು ನಯಸೇನನು ತನ್ನ ಧರ್ಮಾಮೃತ ಕಾವ್ಯದಲ್ಲಿ ತಿಳಿಸಿದ್ದಾನೆ. ಈತನು ಮುಳಗುಂದದಲ್ಲಿ ತನ್ನ ಆಧ್ಯಾತ್ಮಿಕ ಕಾರ್ಯಕ್ಷೇತ್ರವನ್ನಾಗಿ ಮಾಡಿಕೊಂಡು ಜೈನ ಧರ್ಮ ಪ್ರಸಾರವನ್ನು ಅಭಿವೃದ್ಧಿಕಾರ್ಯಗಳನ್ನು ಕೈಗೊಂಡಿದ್ದಾನೆ.

## ೬. ನರೇಂದ್ರಸೇನ–೧ (೧೦೨೩) :

ನರೇಂದ್ರಸೇನ ಎಂಬ ಹೆಸರಿನ ಎರಡು ಮಂದಿ ಮುನಿಗಳ ಹೆಸರು ಬರುತ್ತದೆ. ಆದ್ದರಿಂದ ಕನಕಸೇನನ ಶಿಷ್ಯನಾದ ಈತನನ್ನು ಚಾವುಂಡರಾಯ ಪುರಾಣದಲ್ಲಿ ಉಲ್ಲೇಖಿಸಲಾಗಿರುವುದರಿಂದ ಈತನನ್ನು ನರೇಂದ್ರಸೇನ–೧ ಎಂದು ಕರೆಯಬಹುದಾಗಿದೆ. ಈತನ ಕಾರ್ಯಕ್ಷೇತ್ರ ಮುಳಗುಂದವಾಗಿದ್ದು ಇಲ್ಲಿ ಜೈನ ಪರಂಪರೆ ಬೆಳೆಯುವುದಕ್ಕೆ ಅಪಾರವಾದ ಕಾಣಿಕೆಯನ್ನು ನೀಡಿದ್ದಾನೆ. ನರೇಂದ್ರಸೇನನ್ನು ನಯಸೇನ ಸ್ಮರಿಸಿದ್ದಾನೆ. ನರೇಂದ್ರಸೇನ ಮುನಿಪನು ತಡಶ್ರುತಿಗಳೆರಡನ್ನೂ ಪಡೆದಿದ್ದನೆಂದು ಬಣ್ಣಿಸಿದೆಯೇ ವಿನಾ ಅವನಿಗೆ 'ತ್ರೈವಿಧ್ಯ' ಬಿರುದಿದ್ದನ್ನು ಹೇಳಿಲ್ಲ ಆದುದರಿಂದ ಇವನು ನಯಸೇನನ ಗುರುವಾದ ತ್ರೈವಿಧ್ಯನರೇಂದ್ರ ಸೇನನಿಂದ ಭಿನ್ನನೆಂಬುದು ಸುವ್ಯಕ್ತ. ಈ ನರೇಂದ್ರಸೇನನ್ನು

---

೬. ಬಂಕಾಪುರ ಶೋಧ, ಡಾ. ಚನ್ನಕ್ಕ ಎಲಿಗಾರ, ಪು. ೧೫೭.

೪೯. ನಯಸೇನ ಮತ್ತು ಅವನ ಕೃತಿಗಳು, ಡಾ. ಬಿ. ವ್ಹಿ. ಮಲ್ಲಾಪೂರ, ಪು. ೨೭.

ಸ್ಮರಿಸುವ ಪದ್ಯ ತ್ರೈವಿಧ್ಯ ನರೇಂದ್ರ ಸೇನನ್ನು ಸ್ಮರಿಸುವ ಪದ್ಯಕ್ಕಿಂತ ಮೊದಲು ಬಂದಿದೆ. ಆದುದರಿಂದ ಇವನನ್ನು ಬೇಕಾದರೆ ಮೊದಲನೆಯ ನರೇಂದ್ರಸೇನನೆಂದು ಕರೆಯಬಹುದಾಗಿದೆ.

## ೭. ನಯಸೇನ ಸೂರಿ–೧ (೧೦೫೦) :

ನರೇಂದ್ರಸೇನ ಮುನಿಪನ ಸ್ಮರಣಾನಂತರ ಧರ್ಮಾಮೃತದಲ್ಲಿ ನಯಸೇನ ಒಬ್ಬ ನಯಸೇನ ಮುನೀಂದ್ರನನ್ನು ಸ್ತುತಿಸಿದ್ದಾನೆ. ಈ ಪದ್ಯದಲ್ಲಿ ನಯಸೇನ ಮುನೀಂದ್ರನ ತರ್ಕ ಮತ್ತು ಶಾಸ್ತ್ರಗಳ ಪರಿಣಿತಿಯನ್ನು ಪ್ರಪಂಚವೇ ಹೋಗಳುತ್ತಿದ್ದ ವಿಷಯವನ್ನು ತಿಳಿಸುತ್ತದೆ. ಈ ನಯಸೇನ ಮುನೀಂದ್ರ ಧರ್ಮಾಮೃತ ಕರ್ತೃ ನಯಸೇನನಿಗಿಂತ ಭಿನ್ನ ಆದುದರಿಂದ ಇವನನ್ನು ಮೊದಲನೆಯ ನಯಸೇನನೆಂದು ಕರೆಯಬಹುದು.[೮] ಮುಳಗುಂದದ ಒಂದು ಶಾಸನದಲ್ಲಿ ಚಾಲುಕ್ಯ ಅರಸ ೧ನೆಯ ಸೋಮೇಶ್ವರನ (೧೦೪೪–೬೮) ಆಳ್ವಿಕೆಯಲ್ಲಿ ಹುಟ್ಟಿದ ಈ ಶಾಸನ (೧೦೫೩) ಚಾಲುಕ್ಯ–೨ನೆಯ ಸೋಮೇಶ್ವರ ಬೆಳ್ವೊಲ–೩೦೦ ಮತ್ತು ಪುಲಿಗೆರೆ–೩೦೦ಕ್ಕೆ ಮಹಾಮಂಡಳೇಶ್ವರನಾಗಿದ್ದ ಸಂಧಿವಿಗ್ರಹಾಧಿಕಾರಿ ಬೆಲ್ದೇವನೆಂಬುವನು ತನ್ನ ಗುರುವಾದ ನಯಸೇನ ಸೂರಿಗೆ ದತ್ತಿಬಿಟ್ಟ ವಿಷಯವನ್ನು ಈ ಶಾಸನ ತಿಳಿಸುತ್ತದೆ. ಬೆಲ್ದೇವನು ಅಗ್ಗಳದೇವ–ಗೊಜ್ಜಿಕಟ್ಟಿಯರ ಮಗ ಅವನಿಗೆ ಬಲದೇವ ಮತ್ತು ಶಾಂತಿವರ್ಮ ಇಬ್ಬರು ತಮ್ಮಂದಿರು ದಾನವನ್ನು ಪಡೆದ ನಯಸೇನ ಸೂರಿಯ ಗುರುಪರಂಪರೆ ಮತ್ತು ಅವರ ಸಂಘ ಅನ್ವಯ ಯಾದಿಗಳ ಬಗೆಗೆ ಈ ಶಾಸನಗಳಿಂದ ಕೆಲವು ವಿಷಯ ತಿಳಿದು ಬರುತ್ತದೆ. ಈತನ ಗುರು ಪರಂಪರೆ ಹೀಗಿದೆ.

ಅಜೀತಸೇನ
|
ಕನಕಸೇನ
|
ನರೇಂದ್ರಸೇನ–೧
|
ನಯಸೇನ–೧

ನರೇಂದ್ರಸೇನನ್ನು ಚಂದ್ರ, ಕಾತಂತ್ರ ಇತ್ಯಾದಿ ವ್ಯಾಕರಣಗಳಲ್ಲಿ ಅವನಿಗಿದ್ದ ಪರಿಣಿತಿ ವ್ಯಕ್ತವಾಗುತ್ತದೆ. ಇಂತಹ ಜಗದ್ವಿಖ್ಯಾತ ನರೇಂದ್ರಸೇನ ಮುನಿಯ ಶಿಷ್ಯನಾದ ನಯಸೇನ ಸೂರಿಯು ತನ್ನ ಗುರುವಿನಂತೆ ವ್ಯಾಕರಣಶಾಸ್ತ್ರದಲ್ಲಿ ಅಪ್ರತಿಮ ಪಂಡಿತನಾಗಿದ್ದನೆಂದು ತಿಳಿದು ಬರುತ್ತದೆ. ಈ ನಯಸೇನನೇ ವ್ಯಾಕರಣದ ನಯಸೇನನೆಂದೂ ಕರ್ಣಾಟಕ ಭಾಷಾ ಭೂಷಣದಲ್ಲಿ ಉಲ್ಲೇಖಿತವಾಗಿರುವವನು ಇವನೇ ಎಂದು ತಿಳಿದು ಬರುತ್ತದೆ. ತರ್ಕ ಮತ್ತು ಶಾಸ್ತ್ರಗಳೆರಡರಲ್ಲೂ

---

೮. ಅದೇ ಕೃತಿಯ ೫೮ನೇ ಪುಟದಿಂದ ೬೦ನೇ ಪುಟದಲ್ಲಿ ಉಲ್ಲೇಖಿಸಿದ್ದಾರೆ.

ಬಲ್ಲಿದನೆಂದು ಧರ್ಮಾಮೃತದಲ್ಲಿ ವರ್ಣಿತನಾದವನು ಇದೇ ವ್ಯಾಕರಣದ ನಯಸೇನನೇ ಆದ್ದರಿಂದ ಇವನನ್ನು ಮೊದಲನೆಯ ನಯಸೇನನೆಂದು ಕರೆಯಲಾಗಿದೆ.

### ೮. ನರೇಂದ್ರಸೇನ-೨ ತ್ರೈವಿದ್ಯ ಚಕ್ರೇಶ್ವರ (೧೦೮೦) :

ನರೇಂದ್ರಸೇನ ತ್ರೈವಿಧ್ಯನ ಉಲ್ಲೇಖ ಲಕ್ಕುಂಡಿಯ ನಗರೇಶ್ವರ ದೇವಸ್ಥಾನದಲ್ಲಿರುವ ಹೊಡೆದು ಹೊದ ಜಿನ ಮೂರ್ತಿಯ ಆಧಾರಪೀಠದ ಮೇಲಿದೆ. ರಾಜವ್ವೆಯೆಂಬುವಳು ಅದನ್ನು ಆತನಿಗೆ ಹಾಸಿಕೊಟ್ಟಂತೆ ಅದರಲ್ಲಿ ಹೇಳಿದೆ. ಪ್ರಾಯಃ ಆ ನರೇಂದ್ರಸೇನ ತ್ರೈವಿಧ್ಯನು ನಯಸೇನನ ಗುರುವಾಗಿರಬೇಕು. ತನ್ನ ಗುರು ಸಿದ್ಧಾಂತ, ಶಾಸ್ತ್ರದುನ್ನತಿ, ಷತ್ತಿರ್ಕಗಳಲ್ಲಿ ಅನುಕ್ರಮವಾಗಿ ಜಿನಸೇನ ಪೂಜ್ಯಪಾದ ಸಮಂತ ಭದ್ರರನ್ನು ಮೀರಿಸಿದ್ದನು. ಎಂದು ಹೆಮ್ಮೆಯಿಂದ ಹೇಳಿಕೊಂಡಿದ್ದಾನೆ. ಈ ಗುರುಪರಂಪರೆಯನ್ನು ಚಾಲುಕ್ಯ ೩ನೇ ವಿಕ್ರಮಾದಿತ್ಯನ ಆಳ್ವಿಕೆಯಲ್ಲಿ ಹುಟ್ಟಿದ ಲಕ್ಷ್ಮೇಶ್ವರ ಶಾಸನ ಮುಂದುವರೆಸಿದೆ. ಅದರ ಕಾಲ ೧೦೮೧ ಎರ್‌ಮೆಯ್ಯನ ಸೊದರ ದೂಣನೆಂಬುವನು ಪುರಿಕರನಗರದಲ್ಲಿ ನರೇಂದ್ರಸೇನ ತ್ರೈವಿದ್ಯನಿಗೆ ದಾನಕೊಟ್ಟ ವಿಷಯ ಈ ಶಾಸನದಲ್ಲಿದೆ ಮತ್ತು ಈ ಮುನಿಯ ಗುರು ಪರಂಪರೆಯನ್ನು ತಿಳಿಸುತ್ತದೆ.[೯]

ನರೇಂದ್ರಸೇನ-೧
|
ನಯಸೇನ-೧
|
ನರೇಂದ್ರಸೇನ ತ್ರೈವಿಧ್ಯ-೨

ಹೀಗೆ ನಯಸೇನ ಸೂರಿಯ ಅಗ್ರಶಿಷ್ಯನಾದ ನರೇಂದ್ರಸೇನ ತ್ರೈವಿಧ್ಯನನ್ನು ರಾಜಪೂಜ್ಯತೆ, ಸುವಿಖ್ಯಾತಿ, ಶುತ್ರಪಾರಾವಾರಗತ್ವ ಮುಂತಾದ ಅನುಪಮ ಗುಣಗಳನ್ನು ಧರ್ಮಾಮೃತದಲ್ಲಿ ವರ್ಣಿಸಿದ್ದಾನೆ. ನಯಸೇನ, ಧರ್ಮಾಮೃತದಲ್ಲಿ ನಯಸೇನ ಹೇಳಿರುವ ದಿವಾಕರಣಂದಿ, ಶುಭಚಂದ್ರ ಮತ್ತು ರಾವಣಂದಿಯರು ನಯಸೇನ ಸೂರಿಯ ಸಧರ್ಮಿಗಳಾಗಿರಬಹುದು.

### ೯. ನಯಸೇನ-೨ (೧೧೧೩) :

ಮುಳಗುಂದ ಪ್ರದೇಶವೇ ತನ್ನ ಜನ್ಮ ಹಾಗೂ ಕರ್ಮಭೂಮಿಯೆಂದು ತನ್ನ ಕೃತಿಧರ್ಮಾಮೃತದಲ್ಲಿ ನಯಸೇನ ಹೇಳಿಕೊಂಡಿದ್ದಾನೆ. ೧೧೧೨ರಲ್ಲಿ ತನ್ನ ಕೃತಿಯನ್ನು ರಚಿಸಿದ್ದಾಗಿ ತಿಳಿಸುತ್ತಾನೆ. ಈತನು ತನ್ನ

೯. ೬ನೆಯ ವಿಕ್ರಮಾದಿತ್ಯನ ಶಾಸನಗಳು, ಡಾ. ಜಿ. ಎಂ. ನಾಗಯ್ಯ

ವಂಶಜರ ಬಗೆಗೆ ಸಾಂಸಾರಿಕ ಜೀವನದ ಬಗೆಗೆ ಸಂಪೂರ್ಣ ಮೌನವಾಗಿದ್ದಾನೆ. ನಯಸೇನ ತನ್ನನ್ನು ತಾನು ಉದ್ಯುತ್ತಪೋಮೂರ್ತಿ ನಯಸೇನಮುನೀಂದ್ರ "ಮುನೀಂದ್ರಂಮಿರುಹಾರ್ಕ" ಮುಂತಾಗಿ ಕರೆದುಕೊಂಡಿರುವುದರಿಂದ ಸಂಸಾರದಿಂದ ವಿರಕ್ತನಾಗಿ ಮುನಿಯಾಗಿರಬೇಕೆಂದು ಆಮೇಲೆ ಧರ್ಮಾಮೃತವನ್ನು ರಚಿಸಿರಬಹುದೆಂದೂ ತಿಳಿದು ಬರುತ್ತದೆ.[೧೦] ನಯಸೇನನ ಕಾಲಕ್ಕೆ ಜೈನಧರ್ಮ ಕರ್ನಾಟಕದಲ್ಲಿ ಶಿಥಿಲವಾಗಿತ್ತು. ಸಾಮಾನ್ಯ ಜನತೆಯಲ್ಲಿ ನಿತ್ಯಜೀವನ ನಡೆಸುವುದೇ ಕಷ್ಟಕರವಾಗಿ ಬಹುಶಃ ಧರ್ಮ ಕರ್ಮಗಳ ಬಗ್ಗೆ ಕಾಳಜಿ ಕಡಿಮೆಯಾಗಿರಬೇಕು ಇದಕ್ಕೆ ಜೈನಾನುಯಾಯಿಗಳೇನೂ ಹೊರತಲ್ಲ. ಇಂಥ ಸಂದರ್ಭದಲ್ಲಿ ಶಿಥಿಲವಾದ ಧರ್ಮದ ಪುನರುಜ್ಜೀವನಕ್ಕೆ ನಯಸೇನ ಮನಸ್ಸು ಮಾಡಿ ಕಥೆಗಳ ಮೂಲಕ ಧರ್ಮ ಪ್ರಸಾರ, ಪರಮತ ವಿಡಂಬನೆಯ ಮೂಲಕ ಸ್ವಮತ ಸ್ಥಾಪನೆ ಇದರ ಪರಂಪರೆಯೊಂದಕ್ಕೆ ನಯಸೇನ ಆದಿಪುರುಷ ಹೀಗೆ ಮುಳಗುಂದದ ಆಗಿನ ಕಾಲದ ಸಾಮಾಜಿಕ ಧಾರ್ಮಿಕ ಸ್ಥಿತಿಗತಿಯನ್ನು ತನ್ನ ಕ್ರಾಂತಿಯ ಮೂಲಕ ತಿಳಿಸುತ್ತಾನೆ.

ಜೈನಮುನಿ ನಯಸೇನನು ಜಿನದೀಕ್ಷೆಯೇ ಮೋಕ್ಷ ಎಂದು ಸಾರುತ್ತಾನೆ. ಈ ಎಲ್ಲ ಕಥೆಗಳು ಮನಸ್ಸಿನ ಪ್ರತಿಬಿಂಬವಾಗಿವೆ. ಮಧ್ಯಕಾಲೀನ ಕರ್ನಾಟಕದ ಒಟ್ಟು ಕನ್ನಡ ಸಮಾಜ ಹೇಗಿತ್ತು ಎಂಬುದನ್ನು ತಿಳಿಯಲು ಧರ್ಮಾಮೃತದ ಪಠ್ಯವು ಅಧಿಕೃತ ಸಾಕ್ಷಿಯಂತಿದೆ. ತನ್ನ ಧರ್ಮದ ಒಳಗೆ ಉಂಟಾಗುತ್ತಿದ್ದ ನೈತಿಕ ಅಧಃಪತನವನ್ನು ಕೂಡ ಧರ್ಮಾಮೃತವು ನುಡಿಸುತ್ತದೆ. ನೈತಿಕ ಧರ್ಮವನ್ನು ನಯಸೇನ ಪ್ರತಿಹಂತದಲ್ಲೂ ಒತ್ತಾಯಿಸುತ್ತ ತನ್ನ ಕಾಲದ ಕುರೂಪಗಳನ್ನು ಪಾತ್ರರೂಪಕಗಳಲ್ಲಿ ಪ್ರತಿಬಿಂಬಿಸಿದ್ದಾನೆ. ಈ ಎಲ್ಲ ಕತೆಗಳು ಪ್ರಭುತ್ವದ ಪರವಾದ ಕತೆಗಳಲ್ಲ ಎಂಬುದು ಗಮನಿಸಬೇಕಾದ ಸಂಗತಿ. ಆದ್ದರಿಂದಲೇ ನೀತಿ ಬೋಧನೆಯ ಮೂಲಕವೇ ಧರ್ಮಾಮೃತದ ಕತೆಗಳ ಸಾಮಾಜಿಕ ಪರಿಸರವು ಅರಾಜಕತೆಯನ್ನು ಬಿಂಬಿಸುತ್ತಿರುವುದು ಐಹಿಕ ಸುಖಗಳಿಂದ ದೂರವಿರುವ ಜಿನಮುನಿಯಾಗಿ ಕಳ್ಳರು, ವೈಶ್ಯಯರು, ವರ್ತಕರು ಮತ್ತು ದೊರೆಗಳ ಪ್ರಪಂಚದಲ್ಲಿ ಜೈನಧರ್ಮದ ಕಠೋರತೆ ಆತ್ಮಹಿಂಸೆ–ಜೀವನ ನಿರಾಕರಣೆಯ ವೈರಾಗ್ಯಗಳನ್ನು ನಯಸೇನನು ಪ್ರತಿಪಾದಿಸುತ್ತಾನೆ. ಆದರೆ, ಸಮೃದ್ಧ ಲೋಕಾನುಭವದ ನಾಣ್ಣುಡಿ ಉಪಮೆ–ಮೇಲೋಪಮೆಗಳ ಭಾಷೆಯಲ್ಲಿ ಮೈದಾಳುವ ಪ್ರಾಪಂಚಿಕತೆ ಜೀವನ ಪ್ರೀತಿಗಳು ಇವನ್ನು ಅಲ್ಲಗಳೆಯುವಷ್ಟು ಪ್ರಬಲವಾಗಿವೆ. ಧರ್ಮಾಮೃತದಲ್ಲಿ ಕೃತಿಕಾರನ ಉದ್ದೇಶ ಮತ್ತು ಕೃತಿ ಕಟ್ಟಿಕೊಡುವ ಆಶಯ ಪರಸ್ಪರ ಪೂರಕವಾಗುವ ಬದಲು ಮುಖಾಮುಖಿಯಾಗುತ್ತವೆ. ನಯಸೇನನು ತನ್ನ ಕಾಲದ ಧಾರ್ಮಿಕ ಮತ್ತು ಸಾಮಾಜಿಕ ಎರಡು ಸಂಗತಿಗಳನ್ನು ನಿರೂಪಿಸುತ್ತಿದ್ದಾನೆ. ನಿರೂಪಣೆಯ ಕ್ರಮದಲ್ಲಿ ನೀತಿ ಅನೀತಿಗಳೆರಡರ ವೈರುಧ್ಯದ ಮೂಲಕ ಇವೆರಡೂ ಸಂಗತಿಗಳನ್ನು ಮೀರಿದ ಮುಕ್ತಿಯ ಧ್ವನಿಯಿದೆ.

ಹೀಗೆ ನಯಸೇನನು ಜೈನ ಧರ್ಮದ ತತ್ವಗಳನ್ನು ಸ್ಥಾಪಿಸಲು ಮುನಿಯಾಗಿ ಒಬ್ಬ ಕವಿಯಾಗಿ ಆ ಕಾಲ ಘಟ್ಟದಲ್ಲಿ ಯಶಸ್ವಿಯಾಗಿದ್ದಾನೆ. ಜೈನ ಧರ್ಮದ ಅವನತಿಯ ಕಾಲದಲ್ಲಿ ಅದನ್ನು ಮರುಸ್ಥಾಪಿಸುವಲ್ಲಿ

---

೧೦. ಡಾ. ಬಿ. ವ್ಹಿ. ಮಲ್ಲಾಪುರ, ನಯಸೇನ ಮತ್ತು ಅವನ ಕೃತಿಗಳು, ಪು. ೬೬.

ಆತನು ತನ್ನ ಕೃತಿಯ ಮೂಲಕ ಪ್ರಯತ್ನ ಪಟ್ಟಿದ್ದಾನೆ. ಅದರ ಕುರುಹು ಆಗಿ ಇಂದಿಗೂ ಗದಗ ಪರಿಸರದಲ್ಲಿ ಅಂದರೆ ಮುಳಗುಂದದಲ್ಲಿ ಜೈನ ಧರ್ಮವು ಒಂದು ಪ್ರಬಲವಾದ ಧರ್ಮವಾಗಿ ವರ್ತಮಾನದಲ್ಲಿ ರಾರಾಜಿಸುತ್ತದೆ.

## ೧೦. ಧರ್ಮಸೇನ (ಕ್ರಿ.ಶ.ಸುಮಾರು ೮೩೦) :

ನಯಸೇನನು ತನ್ನ ಧರ್ಮಾಮೃತ ಕೃತಿಯಲ್ಲ ಗುರುಪರಂಪರೆಯಲ್ಲಿ ಮೊದಲಿಗೆ ಬರುವ ಯತಿ/ಮುನಿ ಧರ್ಮಸೇನನಿಂದ ನಯಸೇನವರೆಗಿನ ಎಲ್ಲಾ ಯತಿಗಳೆಲ್ಲರೂ ಸೇನಗಣಕ್ಕೆ ಸೇರಿದವರು. ಚಾವುಂಡರಾಯ ಪುರಾಣದಲ್ಲಿ "ಧವಳಯಶರ್.... ಚಂದ್ರಕಾವಾಟವಾಸದೋಳ್ ನೆಗಳ್ದ ಧರ್ಮಸೇನಾಚಾರ್ಯರ್" ಹೇಳಿಕೆ ಅನ್ವಯ ಸೇನಗಣಕ್ಕೆ ಸೇರಿದ ಚಂದ್ರಕಾವಾಟಾನ್ವಯ, ಚಂದ್ರಿಕಾವಾಟ ಸೇನ್ವಾನಯ ಎಂಬ ಹೆಸರಿನ ಯತಿ ಪರಂಪರೆಯೊಂದು ಕರ್ನಾಟಕದಲ್ಲಿತ್ತೆಂದು ತಿಳಿಸುತ್ತ, ಅದು ಸುಮಾರು ಒಂಭತ್ತನೆಯ ಶತಮಾನದ ಪ್ರಥಮ ಭಾಗದಲ್ಲಿ ಧರ್ಮಸೇನನೆಂಬ ಜೈನಯತಿ ಚಂದ್ರಿಕಾವಾಟ ಎಂಬ ಸ್ಥಳದಲ್ಲಿ ಬಂದು ನೆಲೆಸಿದನು.[೧೧] ಈತನು ಸೇನಗಣದವನಾಗಿದ್ದು ಯತಿ ಸಮಾಜದಲ್ಲಿ ಗಣ್ಯತೆ ಪಡೆದವನಾದರಿಂದ ಈತನ ಮೂಲಕ ಒಂದು ಸ್ವಾತಂತ್ರಯತೆ ಪರಂಪರೆ ಆ ಸ್ಥಳದಲ್ಲಿ ನಿರ್ಮಾಣವಾಯಿತು. ಆತನ ನಂತರ ಬಂದ ಮುನಿ ಕುಮಾರಸೇನರು ಈ ಸೇನಗಣದ ಕೇಂದ್ರವನ್ನು ಚಂದ್ರಿಕಾವಾಟದಿಂದ ಮುಳಗುಂದಕ್ಕೆ ವರ್ಗಾಯಿಸಿದನು. ಅಲ್ಲಿಂದ ಮುಂದೆ ಮುಳಗುಂದವು ಒಂದು ಯಾಪನೀಯ ಪಂಥದ ಪ್ರಮುಖ ಕೇಂದ್ರವಾಯಿತು. ಈತನ ಕಾಲದಿಂದ ಪ್ರಾರಂಭವಾದ ಈ ಗುರು ಪರಂಪರೆ ನಯಸೇನನ ಕಾಲದವರೆಗೂ ಈ ಗುರು ಪರಂಪರೆಯ ಮುನಿಗಳ ತಪ್ಪಸ್ಸು ಜೈನ ನಿಷ್ಠೆಯ ಸಾರವನ್ನುಂಡು ಜೈನ ಧರ್ಮ ಪುಷ್ಪವಾಯಿತು. ಜ್ಞಾನನಿಧಿ ತಪೋನಿಧಿಗಳ ಸಾನಿಧ್ಯದಿಂದ ಗದಗ ಹಾಗೂ ಮುಳಗುಂದ ನಾಡಿನ ಪರಿಸರಗಳು ಹೆಚ್ಚೆಚ್ಚು ಜೈನ ಪ್ರಭಾವದಿಂದ ಬೆಳಗಿದವು.

## ೧೧. ಜಿನಸೇನ (ಕ್ರಿ.ಶ. ಸುಮಾರು ೧೦೨೦) :

ಕನಕಸೇನನ ಇಬ್ಬರು ಶಿಷ್ಯರಲ್ಲಿ ೧ನೆಯ ನರೇಂದ್ರಸೇನ ಹಾಗೂ ಜಿನಸೇನ ಪ್ರಸಿದ್ಧರಾಗಿದ್ದರು. ಮುಳಗುಂದ ನಾಡಿನ ಜೈನಧರ್ಮ ಬೆಳೆಯಲು ಪ್ರಮುಖ ಪಾತ್ರ ವಹಿಸಿದವರು. ಈ ಮುನಿಗಳು ಮಲ್ಲಿಷೇಣನ ಕಾವ್ಯದಲ್ಲಿ ಈತನ ಉಲ್ಲೇಖವಿದೆ. ಸಮಕಾಲಿನ ಸ್ಥಿತಿಯಲ್ಲಿ ಜೈನ ಪರಂಪರೆಯ ತತ್ವಗಳನ್ನು ಪ್ರಸಾರ ಗೈದವರು ಇವರು ನಯಸೇನ ತನ್ನ ಕೃತಿಯ ಗುರುಪರಂಪರೆಯಲ್ಲಿ ಈ ಮುನಿಯನ್ನು ಗುರುತಿಸಿದ್ದಾರೆ.

---

೧೧. ಯಾಪನೀಯ ಸಂಘ, ಹಂಪನಾ, ಪು. ೪೮.

## ೧೨. ಮಲ್ಲಿಷೇಣ (ಕ್ರಿಶ. ೧೦೫೦) :

ಈತನು ಕಲ್ಯಾಣ ಚಾಲುಕ್ಯರ ೧ನೇ ಸೋಮೇಶ್ವರನ ಕಾಲದಲ್ಲಿ ಮುಳಗುಂದ ನಾಡಿನಲ್ಲಿದ್ದ ಒಬ್ಬ ಸಂಸ್ಕೃತ ಜೈನ ಕವಿ ಹಾಗೂ ಮುನಿ ಈತನನ್ನು ನಯಸೇನನು ಧರ್ಮಾಮೃತ ಕೃತಿಯ ಗುರುಪರಂಪರೆಯಲ್ಲಿ ಸೂಚಿಸಿದ್ದಾನೆ. ಮಲ್ಲಿಷೇಣನನು ಜೈನ ಆಚಾರ್ಯನಾಗಿ ಜೈನ ಧರ್ಮದ ಪ್ರಸಾರದಲ್ಲಿ ಪ್ರಮುಖ ಪಾತ್ರವಹಿಸಿದ್ದನು. ಈತನು ಸಂಸ್ಕೃತ ಪಂಡಿತನಾಗಿದ್ದು ಚಂಪೂ ಶೈಲಿಯಲ್ಲಿ ಐದು ಕಾವ್ಯ ಕೃತಿಗಳನ್ನು ರಚಿಸಿದ್ದಾನೆಂದು ಮುಳಗುಂದದ ಜೈನ ದೇವಾಲಯದಲ್ಲಿ 'ಅರವತ್ತುಮೂರು ಶಲಾಕ ಪುರುಷರ ಕಥೆಯನ್ನೊಳಗೊಂಡ ಮಹಾಪುರಾಣವನ್ನು ರಚಿಸಿದನೆಂದು ಈ ನಾಡಿನಲ್ಲಿ ಉಪಲಬ್ಧವಾದ ಶಾಸನಗಳಿಂದ ತಿಳಿದು ಬರುತ್ತದೆ.[೧೨]

ಹೀಗೆ ನಯಸೇನನು ತನ್ನ ಕೃತಿಯಲ್ಲಿ ಗುರುತಿಸಿದ ಗುರು ಪರಂಪರೆಯನ್ನು ಈ ಕೆಳಗಿನ ರೇಖಾಚಿತ್ರದಲ್ಲಿ ಗುರುತಿಸಿದೆ.[೧೩]

(೮೩೦) ಧರ್ಮಸೇನ
|
ಕುಮಾರಸೇನ
|
ವೀರಸೇನ
|
ಆರ್ಯಸೇನ
|
ಅಜಿತಸೇನ
|
ಕನಕಸೇನ
|
ನರೇಂದ್ರಸೇನ–೧ ಜಿನಸೇನ (೧೦೨೦)
|
ನಯಸೇನ–೧ ಮಲ್ಲಿಸೇನ (೧೦೫೦)

೫೪. SII XV ಶಾಸನ ೬೧೫–೬೬೭.

೫೫. ಡಾ. ಬಿ. ವ್ಹಿ. ಮಲ್ಲಾಪುರ, ನಯಸೇನ ಮತ್ತು ಅವನ ಕೃತಿಗಳು, ಪು. ೬೮.

|
ನರೇಂದ್ರಸೇನ-೨
|
ನಯಸೇನ-೨

ಹೀಗೆ ಮುಳಗುಂದ ಪ್ರದೇಶವನ್ನು ಕೇಂದ್ರವಾಗಿಟ್ಟುಕೊಂಡು ಜೈನ ಧರ್ಮದ ತತ್ವಗಳನ್ನು ಪ್ರಸಾರ ಮಾಡಿದರು. ೮ನೆಯ ಶತಮಾನದಿಂದ ೧೨ನೆಯ ಶತಮಾನದವರೆಗೆ ಸುಮಾರು ನಾಲ್ಕು ಶತಮಾನಗಳ ಕಾಲ ಈ ಪರಿಸರದಲ್ಲಿ ಜೈನ ಧರ್ಮವು ಉಚ್ಚ್ರಾಯ ಸ್ಥಿತಿಯಲ್ಲಿ ಬೆಳೆಯುವುದಕ್ಕೆ ಈ ಮುನಿ ಪರಂಪರೆಯು ಪರಂಪರೆಗೆ ಹಾಗೂ ಪ್ರದೇಶಕ್ಕೆ ಅಪೂರ್ವವಾದ ಕಾಣಿಕೆಗಳನ್ನು ನೀಡಿ ತಮ್ಮ ಜೀವನವನ್ನೇ ಮುಡುಪಾಗಿಸಿದ್ದಾರೆ. ತ್ಯಾಗಯೋಗ ಸಾಮರಸ್ಯದಿಂದ ಬದುಕನ್ನು ಸಾಗಿಸಿಕೊಂಡು ಅಂದಿನ ಹಾಗೂ ಇಂದಿನ ಸಮಾಜಕ್ಕೆ ಮಾದರಿಯಾಗಿವೆ. ಮಾರ್ಗದರ್ಶನ ನೀಡುತ್ತವೆ. ಹಾಗೂ ಈ ಮುನಿ ಜೀವನವು ಜನ ಸಾಮಾನ್ಯರಿಗೆ ದಾರಿದೀಪವಾಗಿವೆ.

ಮುಳಗುಂದ ನಾಡಿನ ಶಾಸನಗಳು ಈ ಪರಿಸರದಲ್ಲಿದ್ದ ನಾಗಚಂದ್ರ ಸಿದ್ಧಾಂತಿ, ದೇವಸೇನ ಮುನಿ, ಹೇಮಸೇನ ಮುನಿ, ಸಹಸ್ರ ಕೀರ್ತಿಚಾರ್ಯ ಮುಂತಾದ ಯತಿಗಳ ಹಿರಿಮೆ ಮತ್ತು ವಿದ್ಯಾಪ್ರೌಢಮೆಗಳನ್ನು ಬಾಯ್ತುಂಬ ಹೊಗಳುತ್ತವೆ. ಮುಳಗುಂದದಲ್ಲಿಯೇ ಸಂನ್ಯಸನ ವಿಧಿಯಿಂದ ಮುಡಿಪಿದ ಇಬ್ಬರು ಯತಿಗಳ ವಿಷಯವನ್ನು ಅಲ್ಲಿಯ ಎರಡು ಶಾಸನಗಳು ತಿಳಿಸುತ್ತವೆ. ಹೇಮಸೇನ ಶಿಷ್ಯನ ನಿಷಿದಿಗಲ್ಲೂ ಅಲ್ಲಿದೆ. ಇಂತಹ ಜೈನತೀರ್ಥವೂ ಯತಿಗಳ ಕೇಂದ್ರವೂ ಆದ ಮುಳಗುಂದದ ಜೈನ ಬಸದಿಗಳು, ಪರಧರ್ಮೀಯರಿಂದ ಹಾಳಾದ ಸಂಗತಿಯನ್ನು ಕೆಲವು ಶಾಸನಗಳು ತಿಳಿಸುತ್ತವೆ. ಮುಳಗುಂದ ದೇಸಿಗಣದ, ಹನಸೇಣಾನ್ವಯದ ಪುಸ್ತಕಗಚ್ಛದ ಯತಿಗಳಿಗೂ ಅವಾಸಸ್ಥಾನವಾಗುತ್ತೆಂಬುದೂ ವಿಧಿತವಾಗುತ್ತದೆ. ಮುಳಗುಂದದಿಂದ ಪಶ್ಚಿಮಕ್ಕೆ ೫ಕಿ.ಮೀ. ಅಂತರದಲ್ಲಿರುವ ಚಿಂಚಲಿಯ ಗುಡ್ಡದ ಬಂಡಿಯ ಮೇಲೆ ಛಾಯಾ ಚಂದ್ರನಾಥ ಪ್ರತಿಕೃತಿಯನ್ನು ಕೆತ್ತಲಾಗಿದೆ. ಪೂರ್ವಾಭಿಮುಖವಾಗಿರು ಕಾಯೋತ್ಸರ್ಗದ ಯೋಗಮುದ್ರೆಯಲ್ಲಿ ನಿಂತಿರುವ ಈ ಪ್ರತಿಕೃತಿ ಒಬ್ಬ ಯತಿಯ ಪ್ರತಿಕಾತಿಯಾಗಿರಬೇಕೆಂದು ಪಂಡಿತರ ಊಹೆ.[೧೪] ಈ ಪ್ರದೇಶದಲ್ಲಿ ಜೈನಯತಿ ಮುನಿಗಳು ತಪಸ್ಸನ್ನು, ಧ್ಯಾನ, ಯೋಗಾಸನ ಮಾಡಿರುವುದರ ಕುರುಹುಗಳು ಪತ್ತೆಯಾಗಿವೆ. ಆಗಾಗಿ ಈ ಪರಿಸರವು ಮುನಿಗಳ ನಾಡಾಗಿತ್ತು. ಜೈನ ಧರ್ಮವು ಪ್ರಬಲವಾಗಿ ಬೆಳೆದು ಬರುವುದಕ್ಕೆ ಕಾರಣವಾಗಿತ್ತು.

ಮುಳಗುಂದ ನಾಡು-೧೨ಕ್ಕೆ ಸಂಬಂಧಪಟ್ಟ ಹರ್ತಿ, ಕುರ್ತಕೋಟಿ ಹೊಸೂರು, ವೆಂಕಟಾಪುರ, ಸೊರಟೂರು, ಚಿಂಚಲಿ ಸುತ್ತಮುತ್ತಲಿನ ಪ್ರದೇಶಗಳಲ್ಲಿ ಜೈನಧರ್ಮವು ಪ್ರಬಲವಾಗಿ ಬೆಳೆದಿತ್ತು ಈ ಬೆಳವಣಿಗೆಗೆ ಈ ನಾಡಿನಲ್ಲಿದ್ದ ಯತಿಮುನಿಗಳ ಕೊಡುಗೆ ಅಪಾರವಾಗಿದೆ. ಹೊಸೂರುನಲ್ಲಿ ಒಂದು ಜೈನ ಮಠವಿದೆ. ಅದರ ಗುರುತುಗಳು

---

೧೪. ಮುಳಗುಂದ ನಾಡು : ಒಂದು ಅಧ್ಯಯನ, ಡಾ. ಧನವಂತ ಹಾಜವಗೋಳ.

ಇಂದಿಗೂ ಈ ಊರಲ್ಲಿ ಇದೆ. ಸ್ವಪರ ಕಲ್ಯಾಣವನ್ನು ಬಯಸುವ ಜೈನ ಮುನಿಗಳು ಈ ಪರಂಪರೆಯ ಆಧಾರ ಸ್ಥಂಭಗಳು ಇವರು ಆತ್ಮಕಲ್ಯಾಣದೊಂದಿಗೆ ಸಮಾಜ ಮತ್ತು ಧರ್ಮ ಕಲ್ಯಾಣಗಳಂತಹ ಕಾರ್ಯಗಳಲ್ಲಿ ಪ್ರೋತ್ಸಾಹಕರಾಗಿ ಈ ಪರಂಪರೆಯ ಅಭಿವೃದ್ಧಿಗೆ ಕಾರಣರಾಗಿದ್ದಾರೆ. ಗದಗ ಜಿಲ್ಲೆಯಲ್ಲಿಯೇ ಬಹಳಷ್ಟು ಪ್ರಾಮುಖ್ಯತೆಯನ್ನು ಪಡೆದಿರುವ ಮುಳಗುಂದ ಪ್ರದೇಶವು ಜೈನ ಪರಂಪರೆಗೆ ವಿಶಿಷ್ಟವಾದ ಕೊಡುಗೆಯನ್ನು ನೀಡಿದೆ. ಇನ್ನು ಗದಗ ಜಿಲ್ಲೆಯ ಇನ್ನೊಂದು ಜೈನ ಯತಿಗಳ ಬೀಡೆಂದು ಪ್ರಸಿದ್ಧವಾದ ಸ್ಥಳ ಅಂದಿನ ಪುಲಿಗೆರೆ ಇಂದಿನ ಲಕ್ಷ್ಮೇಶ್ವರ.

ಗದಗ ಜಿಲ್ಲೆಯ ಶಿರಹಟ್ಟಿ ತಾಲೂಕಿನಲ್ಲಿರುವ ಲಕ್ಷ್ಮೇಶ್ವರವು ಪ್ರಾಚೀನ ಕಾಲದಲ್ಲಿ ಪುಲಿಗೆರೆ ಎಂದು ಪ್ರಸಿದ್ಧಿ ಪಡೆದಿತ್ತು. ಅಂದಿನ ಆ ಪುಲಿಗೆರೆಯು ಪುಲಿಗೆರೆ-೩೦೦ರ ಆಡಳಿತ ಕೇಂದ್ರವಾಗಿದ್ದು ಪ್ರಸಿದ್ಧಿ ಪಡೆದಿತ್ತು. ಆ ಪ್ರದೇಶದಲ್ಲಿ ರಾಜರು ಸಾಮಂತರು ಮಾಂಡಳಿಕರು ಶೆಟ್ಟಿಗಳು ಜೈನಾಚಾರ್ಯರೂ ಕ್ರಿ.ಶ. ೭-೮ನೆಯ ಶತಮಾನದಿಂದ ೧೬ನೆಯ ಶತಮಾನದವರೆಗಿನ ಅವಧಿಯಲ್ಲಿ ಹಲವಾರು ಜೈನ ಬಸದಿಗಳನ್ನು ನಿರ್ಮಿಸಿದ್ದಾರೆ. ಈ ಪೂಜಾ ಕೇಂದ್ರಗಳಲ್ಲಿ ವಾಸ ಮಾಡುತ್ತಾ ಜೈನ ಧರ್ಮದ ತತ್ವಗಳನ್ನು ಪ್ರಸಾರ ಮಾಡಿದ ಕೀರ್ತಿ ಮುನಿ, ಆಚಾರ್ಯರಿಗೆ ಸಲ್ಲುತ್ತದೆ. ಈ ಪರಿಸರದಲ್ಲಿ ಸಿಗುವ ಶಾಸನಗಳು ಹಾಗೂ ಸಾಹಿತ್ಯ ಕೃತಿಗಳ ಆಧಾರದಿಂದ ಸುಮಾರು ೧೫ ರಿಂದ ೨೦ ಜೈನ ಯತಿಗಳ ಉಲ್ಲೇಖವಿದೆ.[೧೫] ಅವರಲ್ಲಿ ಪ್ರಮುಖರಾದ ಮುನಿಗಳ ವಿವರ ಈ ಕೆಳಗಿನಂತಿದೆ.

### ೧೩. ಉದಯ ದೇವ ಪಂಡಿತ :

ಜೈನ ಧರ್ಮದ ಇತಿಹಾಸದಲ್ಲಿ ಪೂಜ್ಯ ಪಾದರದು ಬಹುದೊಡ್ಡ ಹೆಸರು. ಇಂಥಹ ಶ್ರೇಷ್ಠ ಜೈನ ಆಚಾರ್ಯರ ಶಿಷ್ಯರಾಗಿದ್ದವರು ಉದಯದೇವ ಪಂಡಿತರು ಪುಲಿಗೇರಿಯನ್ನು ತಮ್ಮ ಆಧ್ಯಾತ್ಮಿಕ ಕೇಂದ್ರವನ್ನಾಗಿ ಮಾಡಿಕೊಂಡು ಜೈನ ಧರ್ಮವನ್ನು ತತ್ವಗಳನ್ನು ಪ್ರಸಾರ ಮಾಡಿದ್ದಾರೆ. ಪುಲಿಗೇರಿಯಲ್ಲಿ ಜೈನ ಧರ್ಮವು ನೆಲೆಗೊಳ್ಳಲು ಈ ಜೈನ ಮುನಿಯು ಅಪಾರವಾದ ಕೊಡುಗೆಯನ್ನು ನೀಡಿದ್ದಾರೆ. ಆ ಕಾಲ ಘಟ್ಟದ ರಾಜರು ಸಾಮಂತರಿಂದ ಜನ ಸಾಮಾನ್ಯರಿಂದ ಪೂಜೆಗೆ ಒಳಗಾಗಿದ್ದ ಈ ಮುನಿಯು ದಾನದತ್ತಿಗಳನ್ನು ಸ್ವೀಕರಿಸಿ ಈ ಪರಂಪರೆಯು ನೆಲೆಗೊಳ್ಳುವಂತೆ ಮಾಡಿದ ಕೀರ್ತಿ ಈ ಮುನಿಗೆ ಸಲ್ಲುತ್ತದೆ.

### ೧೪. ನಿರವದ್ಯ ಪಂಡಿತ :

ಈತನು ಪುಲಿಗೆರಿಯ ಶಂಖ ಜಿನಾಲಯದ ಆಚಾರ್ಯರಾಗಿದ್ದು ಈ ಜೈನ ಯತಿಯು ಚಾಲುಕ್ಯದೊರೆ ವಿಜಯಾದಿತ್ಯನ (ಕ್ರಿ.ಶ. ೭೩೦) ಗುರುವಾಗಿದ್ದನೆಂಬ ಅಂಶವನ್ನು ಶಾಸನಗಳು ಉಲ್ಲೇಖಿಸುತ್ತವೆ. ಈ ಮುನಿಗೆ ರಾಜರು ಗೌರವ ಕೊಡುತ್ತಿದ್ದರೆಂಬುವುದಕ್ಕೆ ವಿಜಯಾದಿತ್ಯನು ಶಂಖ ಜಿನಾಲಯಕ್ಕೆ 'ಕದ್ದಮ' ಎಂಬ ಗ್ರಾಮವನ್ನು

---

೧೫. ಪುಲಿಗೇರಿ : ಒಂದು ಅಧ್ಯಯನ, ಆರ್. ಶರಣಮ್ಮ.

ದತ್ತಿಯಾಗಿ ಕೊಟ್ಟ ಉಲ್ಲೇಖವನ್ನು ಶಾಸನ ಉಲ್ಲೇಖಿಸುತ್ತದೆ.[೧೬] ಈತನು ಪಂಡಿತನಾಗಿದ್ದು ಈ ಪರಿಸರದಲ್ಲಿ ಜೈನ ಪರಂಪರೆಯು ಬೆಳೆಯುವುದಕ್ಕೆ ಕಾರಣಿಕರ್ತನಾಗಿದ್ದು ನಿರವದ್ಯಪಂಡಿತನು ರಾಜಗುರುವಾಗಿ ಜನಸಾಮಾನ್ಯರಿಂದ ಪೂಜೆಗೆ ಪಾತ್ರನಾಗಿದ್ದ.

### ೧೫. ಪದ್ಮಸೇನ :

ಪುಲಿಗೇರಿಯಲ್ಲಿರುವ ಶ್ರೀ ವಿಜಯ ಜಿನಾಲಯವನ್ನು ಜೀರ್ಣೋದ್ಧಾರ ಮಾಡಿದ ಪದ್ಮಸೇನನು ರಾಜಗುರುವಾಗಿದ್ದನು.[೧೭] ಪುಲಿಗೇರಿಯಲ್ಲಿ ಬಾಳಿದ ಈ ಆಚಾರ್ಯರರು ಈ ಪರಿಸರದಲ್ಲಿದ್ದ ಬಸದಿಗಳನ್ನು ಹಾಗೂ ಜನರಲ್ಲಿ ಸಾಮರಸ್ಯವನ್ನು ಬೆಸೆಯುವಲ್ಲಿ ಈ ಮುನಿಗಳ ಪಾತ್ರ ಹಿರಿದು. ಈ ಪರಿಸರದಲ್ಲಿ ಸಿಕ್ಕಿರುವ ಶಾಸನಗಳು ಆ ಕಾಲ ಘಟ್ಟದಲ್ಲಿ ಯತಿಗಳು ಕೈಗೊಂಡ ಧಾರ್ಮಿಕ ಕಾರ್ಯಗಳನ್ನು ಕುರಿತು ತಿಳಿಸುತ್ತವೆ.

### ೧೬. ಧ್ರುವ ದೇವಾಚಾರ್ಯ :

ಪುಲಿಗೇರಿಯ ಮೂಲ ಸಂಘದ ದೇವಗಣತಿಲಕವಾದ ಧ್ರುವದೇವಾಚಾರ್ಯ ಮುನಿಯ ಧರ್ಮೋಪದೇಶದ ಪ್ರಕಾರ ಶಂಖ ಬಸದಿಯ ದುರಸ್ತಿಗೆ ಪೂಜೆಗೆ ಮತ್ತು ದಾನಶಾಲೆಗೆ ಬೆಳ್ವೊಲ-೩೦೦ರ ಹಡಗಿಲೆ ಎಂಬ ಗ್ರಾಮವನ್ನು ವಿನಯಾದಿತ್ಯ (೬೮೩) ಮಹಾರಾಜನು ದಾನಕೊಟ್ಟ ವಿವರಣೆ ಶಾಸನದಲ್ಲಿ ಉಲ್ಲೇಖಿಸಲಾಗಿದೆ.[೧೮] ಹೀಗಾಗಿ ರಾಜರಿಂದ ಈ ಮುನಿಗಳು ಗೌರವಕ್ಕೆ ಪಾತ್ರರಾಗಿದ್ದರು.

### ೧೭. ಶ್ರೀ ನಂದಿ ಪಂಡಿತ :

ಈ ಜೈನ ಮುನಿಯು ಪುಲಿಗೇರಿಯನ್ನು ತನ್ನ ಧಾರ್ಮಿಕ ಕಾರ್ಯಗಳ ಕರ್ಮಭೂಮಿಯಾಗಿ ಮಾಡಿಕೊಂಡು ಇಲ್ಲಿರುವ ಗೊಗ್ಗಿಯ ಬಸದಿಯಲ್ಲಿ ಒಂದು ತಿಂಗಳ ಕಾಲ ಸಲ್ಲೇಖನ ವ್ರತವನ್ನು ಸ್ವೀಕರಿಸಿ ಸಮಾಧಿ ಮರಣವನ್ನಪ್ಪಿದನೆಂಬ ಉಲ್ಲೇಖ ಶಾಸನದಲ್ಲಿದೆ.[೧೯] (SSI-XX)

ಹೀಗೆ ಪುಲಿಗೇರಿಯಲ್ಲಿ ಕ್ರಿ.ಶ. ೭ನೆಯ ಶತಮಾನದಿಂದ ೧೨ನೆಯ ಶತಮಾನದವರೆಗಿನ ಯತಿ ಪರಂಪರೆಯನ್ನು ಇಲ್ಲಿ ಸಿಕ್ಕಿರುವ ಶಾಸನಗಳ ಆಧಾರದಿಂದ ಈ ರೀತಿ ಗುರುತಿಸಬಹುದಾಗಿದೆ. ಉದಯದೇವ ಪಂಡಿತ, ನಿರವದ್ಯಪಂಡಿತ, ರಾಮದೇವಾಚಾರ್ಯ, ಜಯದೇವ ಶ್ರೀ ವಿಜಯದೇವ, ಧ್ರುವದೇವಾಚಾರ್ಯ, ದೇವಚಂದ್ರ ಭಟ್ಟಾರಕ, ಏಕದೇವ,

---

೧೬. ಡಾ. ಪಿ. ಬಿ. ದೇಸಾಯಿ, Jainism is South India. Page-398.

೧೭. SII Vol. XX, Page-7.

೧೮. SII Vol. XX, Page-3.

೧೯. SII Vol. XX, Page-65.

ಜಯದೇವ ಪಂಡಿತ, ಗಂಡವಿಮುಕ್ತ ಭಟ್ಟಾರಕ, ತ್ರಿಭುವಚಂದ್ರ ಪಂಡಿತ, ಶ್ರೀನಂದಿ ಪಂಡಿತ, ಭಾಸ್ಕರ ಪಂಡಿತ ಇಂದ್ರಕೀರ್ತಿ ಪಂಡಿತ ಪದ್ಮಸೇನನವರೆಗೂ ಗುರುತಿಸಬೇಕಾಗಿದೆ. ಈ ಕಾಲ ಘಟ್ಟದಲ್ಲಿ ಆಳ್ವಿಕೆ ಮಾಡಿದ ರಾಜ ಮಹಾರಾಜರು ಸಾಮಂತ ಶೆಟ್ಟಿಯರು ಈ ಪರಿಸರದಲ್ಲಿರುವ ಜೈನ ಪರಂಪರೆಯ ಕೇಂದ್ರಗಳೆನಿಸಿದ ಬಸದಿಗಳಿಗೆ ದಾನ ದತ್ತಿಗಳನ್ನು ನೀಡಿ ಬೆಳೆಸಿದ್ದಾರೆ. ಈ ಪ್ರದೇಶದ ಜೈನ ಮುನಿಗಳು ಧಾರ್ಮಿಕ ಹಾಗೂ ಸಾಮಾಜಿಕ ಉಪಯುಕ್ತ ಕಾರ್ಯ ಕೈಗೊಂಡು ಪ್ರಭಾವಶಾಲಿಯಾಗಿದ್ದರ ಕುರಿತು ತಿಳಿದು ಬರುತ್ತದೆ. ಕ್ರಿ.ಶ. ೧೦೭೭-೭೮ರ ಕಾಲದಲ್ಲಿ ಪುಲಿಗೇರಿಯಲ್ಲಿ ಜೈನಧರ್ಮ ಪ್ರಭಾವನೆ ಸಾಕಷ್ಟು ಪ್ರಭಾವಶಾಲಿಯಾಗಿತ್ತೆಂಬುದರ ಕಲ್ಪನೆ ಬರುತ್ತದೆಯಲ್ಲದೆ ಜೈನಧರ್ಮದವರು ಬಲಿಷ್ಠರಾಗಿದ್ದುಕೊಂಡು ಅನ್ಯಧರ್ಮದವರನ್ನು ಲಕ್ಷಕ್ಕೆ ತಾರದಷ್ಟು ಸ್ಥಿತಿ ಉದ್ಭವಿಸಿತ್ತೆಂದು ಕಾಣುತ್ತದೆ.[೨೦] ಯಾವುದಾದರೂ ಅತಿಯಾದರೆ ಅಲ್ಲಿ ಅವನತಿಯ ಆರಂಭವಾಗುತ್ತದೆಂದು ತಿಳಿಯಬೇಕು. ಬಹುಶಃ ರಾಜಕೀಯವಾಗಿ ಸಾಮಾಜಿಕವಾಗಿ ಧಾರ್ಮಿಕವಾಗಿ ಉನ್ನತ ಸ್ಥಿತಿಯಲ್ಲಿದ್ದು ಜೈನ ಧರ್ಮವು ಅನ್ಯಮತಿಯರ ಸಹಕಾರ ಸೌಹಾರ್ದ್ರತೆಗಳನ್ನು ಕಾಯ್ದುಕೊಳ್ಳುವುದನ್ನು ಬಿಟ್ಟು ಕಳೆದುಕೊಂಡಿತ್ತೆಂದು ಕಾಣುತ್ತದೆ. ಇದಕ್ಕೆ ಕಾರಣ ಈ ಕಾಲದಲ್ಲಿದ್ದ ಜೈನ ಮುನಿಗಳು ಪ್ರಭಾವಶಾಲಿಯಾಗಿದ್ದಿಲ್ಲದ ಕಾರಣ ಹಲವಾರು ಅಂಶಗಳಿಂದ ತಿಳಿಯಬಹುದು. ವಿಜಯನಗರದ ಆಳ್ವಿಕೆಯ ಕಾಲದಲ್ಲಿ ನಡೆದ ಘಟನೆಗಳೇ ಸಾಕ್ಷಿಯಾಗಿವೆ. ಈ ಕಾಲಘಟ್ಟದಲ್ಲಿದ್ದ ಇಬ್ಬರು ಜೈನ ಮುನಿಗಳ ವಿವರಣೆ.

### ೧೮. ಹೇಮ ದೇವಾಚಾರ್ಯರು :

ವಿಜಯನಗರದ ಅರಸಗಿನೆಯ ದೇವರಾಯನ ಕ್ರಿ.ಶ.೧೪೧೨ರ ಕಾಲದ ಶಾಸನವು ಈ ಜೈನಮುನಿ ಹೇಮದೇವಾಚಾರ್ಯನು ಪುಲಿಗೆರೆಯ ಶಂಖ ಬಸದಿಯ ಆಚಾರ್ಯರಾಗಿದ್ದರ ಕುರಿತು ಉಲ್ಲೇಖಿಸುತ್ತದೆ. ಈ ಜೈನ ಮುನಿಗೂ ಹಾಗೂ ಸೋಮದೇವಾಲಯದ ಆಚಾರ್ಯ ಶಿವರಾಮದೇವಯ್ಯನೆಂಬವರಿಗೂ ದೇವಸ್ಥಾನದ ಭೂಮಿಯ ಸಲುವಾಗಿ ವಿವಾದ ಉಂಟಾದಾಗ ನಾಗಣ್ಣ ಎಂಬ ದಣ್ಣಾಯಕನು ಈ ವಿವಾದವನ್ನು ಬಗೆಹರಿಸಿದ ಕುರಿತು ತಿಳಿಸುತ್ತದೆ. ಇದೇ ಪ್ರದೇಶದಲ್ಲಿದ್ದ ಸಂಗಮದೇವನೆಂಬ ಪುರೋಹಿತ ಹಾಗೂ ಇನ್ನು ಕೆಲವು ಪಂಡಿತರಿಂದ ಕಾಗದ ಪತ್ರಗಳನ್ನು ಪರಿಶೀಲಿಸಿ ಶಂಖ ಬಸದಿಯ ಹೇಮಾದ್ರಿಯ ಪರವಾಗಿ ಜಯಪತ್ರ ಬರೆಸಿಕೊಟ್ಟ ಉಲ್ಲೇಖವಿದೆ.[೨೧] ಹೀಗೆ ಸ್ಥಾನಿಕ ಧಾರ್ಮಿಕ ಘರ್ಷಣೆಗಳು ಉಂಟಾದಾಗ ದೊರೆಗಳು ಹಿರಿಯರು ಕೂಡಿ ಬಗೆಹರಿಸಿದ ಸಂದರ್ಭಗಳು ಇತಿಹಾಸದಲ್ಲಿ ವಿರಳ. ಅವು ಪುಲಿಗೇರಿಯಲ್ಲಿ ಜೈನ ಧರ್ಮ ಉಚ್ಛ್ರಾಯ ಸ್ಥಿತಿಯಲ್ಲಿದ್ದಾಗ ಉಂಟಾಗಿದ್ದು ಐತಿಹಾಸಿಕ ಸಂಗತಿ.

---

೨೦. SII Vol. XX

೨೧. SII Vol. XX, Page-282-284.

## ೧೯. ಶಂಖಣಾರ್ಯ :

ಈ ಜೈನ ಯತಿಯು ಶಂಖಬಸದಿಯ ಆಚಾರ್ಯರಾಗಿದ್ದ ಕಾಲದಲ್ಲಿ ಸೋಮೇಶ್ವರ ದೇವರ ಗುಡಿಯ ಕಾಳಹಸ್ತಿದೇವ ಮತ್ತು ಶಿವರಾಮದೇವ ಎಂಬವರಿಗೂ ಅಷ್ಟದಿಕ್ಪಾಲಾದಿಗಳು, ಧ್ವಜಪತಾಕಾದಿಗಳ ಉಪಯೋಗದಲ್ಲಿ ವಿವಾದದ ಕುರಿತು ಕ್ರಿ.ಶ. ೧೫೩೦ರ ಶಾಸನ ಉಲ್ಲೇಖಿಸುತ್ತದೆ.[೨೨] ಈ ವಿವಾದದಲ್ಲಿ ಜೈನ ಮುನಿಗಳು ತಪ್ಪಾಗಿ ಉಪಯೋಗಿಸಿದ್ದನ್ನು ಒಪ್ಪಿ ಅವುಗಳನ್ನು ಮುಂದೆ ಉಪಯೋಗಿವುದಿಲ್ಲವೆಂದು ಜೈನ ಆಚಾರ್ಯರು ಪ್ರಮಾಣಪೂರ್ವಕವಾಗಿ ಜಯಪತ್ರವನ್ನು ಕೊಟ್ಟಂತೆ ತಿಳಿಸುವುದು.

## ೨೦. ಹೇಮಣಾರ್ಯ :

ಪುಲಿಗೇರಿಯಲ್ಲಿದ್ದ ಈ ಜೈನಯತಿ ಶಂಖಣಾರ್ಯನ ಸಮಕಾಲಿನ ಜೈನಮುನಿ ಈತನು ಜಯಪತ್ರ ಬರೆದ ಸಂದರ್ಭದಲ್ಲಿ ಉಪಸ್ಥಿತನಿದ್ದ ಕುರಿತು ಶಾಸನವು ತಿಳಿಸುತ್ತದೆ. ಈತನ ಕಾಲದಲ್ಲಿ ಶೈವಧರ್ಮ ಹಾಗೂ ವೈದಿಕ ಧರ್ಮಗಳು ಜೈನ ಧರ್ಮದೊಡನೆ ಪ್ರಬಲವಾಗಿ ಪೈಪೋಟಿಗಿಳಿದ ಕಾಲದಲ್ಲಿ ಜೈನ ಪರಂಪರೆಯನ್ನು ಪುಲಿಗೇರಿಯಲ್ಲಿ ಬೆಳೆಸಿದ ಕೀರ್ತಿಗೆ ಶಂಖಣಾರ್ಯ ಮತ್ತು ಹೇಮಣಾರ್ಯ ಪಾತ್ರರಾಗಿದ್ದಾರೆ.

ಕ್ರಿ.ಶ. ೫ರಿಂದ ೬ನೇ ಶತಮಾನಗಳಷ್ಟು ಹಿಂದಿನಿಂದ ಪುಲಿಗೇರಿಯಲ್ಲಿ ಜೈನಧರ್ಮವು ಧಾರ್ಮಿಕ, ಸಾಹಿತ್ಯಿಕ, ಸಾಂಸ್ಕೃತಿಕ ವಾತಾವರಣದಿಂದ ಪ್ರಭಾವಶಾಲಿಯಾಗಿಯೂ ಸಾಕಷ್ಟು ಚಟುವಟಿಕೆಗಳಿಂದ ಕೂಡಿದ್ದಾಗಿಯೂ ಬಾಳಿಬಂದಿತೆಂದು ಈ ಎಲ್ಲಾ ಜೈನ ಮುನಿಗಳ ತಪ್ಪಸ್ಸಿನ ಫಲವಾಗಿ ಜೈನ ಪರಂಪರೆಯು ಇಂದಿನವರೆಗೂ ಈ ಪರಿಸರದಲ್ಲಿ ಪ್ರಬಲವಾಗಿ ಬೆಳೆದು ಬಂದಿದೆ.

## ೨೧. ಹುಳಿಯಬ್ಬಾಜ್ಜಿಕೆಯರು :

ಯಾಪನೀಯ ಪಂಥದ ಸೂರಸ್ಥಗಣದ ಆಚಾರ್ಯರಾದ ಈ ಜೈನಯತಿ ಸೊರಟೂರಿನಲ್ಲಿ ಜೈನ ಧರ್ಮ ಪರಂಪರೆಯನ್ನು ನೆಲೆಗೊಳ್ಳುವಂತೆ ಪ್ರಸಾರ ಮಾಡಿದ್ದರ ಕುರಿತು ಕ್ರಿ.ಶ. ೧೦೭೧ರ ಸೊರಟೂರ ಶಾಸನವು ಉಲ್ಲೇಖಿಸುತ್ತದೆ.[೨೩] ಕಲ್ಯಾಣ ಚಾಲುಕ್ಯರ ಕಾಲದಲ್ಲಿ ನಿರ್ಮಾಣಗೊಂಡ ಬಲದೇವ ಬಸದಿಯು ಸೊರಟೂರಿನಲ್ಲಿದೆ. ಜೈನ ಧರ್ಮದ ತತ್ವಗಳನ್ನು ಪ್ರಸಾರ ಮಾಡಿದ ಕೀರ್ತಿ ಈ ಜೈನ ಮುನಿಯದು.

---

೨೨. SII Vol. XX, Page-383.

೨೩. ಕ್ರಿ.ಶ. ೧೦೭೧ರ ಸೊರಟೂರು ಶಾಸನ.

## ೨೨. ಚಂದ್ರಭೂಷಣ :

ಕ್ರಿ.ಶ. ೧೧ನೆಯ ಶತಮಾನದ ಶಾಸನವೊಂದು ಗದುಗಿನಲ್ಲಿಯ ಬಸದಿಯೊಂದರಲ್ಲಿ ಈ ಜೈನ ಮುನಿಯು ಸಲ್ಲೇಖನ ವೃತದಿಂದ ಸಮಾಧಿ ಮರಣ ಪಡೆದರೆಂದು ಶಾಸನವು ವಿವರಿಸುತ್ತದೆ. ಆದರೆ ಇಂದು ಗದುಗಿನಲ್ಲಿ ಯಾವುದೇ ರೀತಿಯ ಬಸದಿಯ ಅವಶೇಷಗಳು ಕಂಡು ಬರುವುದಿಲ್ಲ. ಆದರೆ ಶಾಸನದಲ್ಲಿ ಉಲ್ಲೇಖಿಸಲಾಗಿದೆ.

## ೨೩. ಚಂದ್ರಪ್ರಭಾ ಭಟ್ಟಾರಕರು :

ರಾಷ್ಟ್ರಕೂಟರ ೪ನೆಯ ಗೋವಿಂದನ ಅಸುಂಡಿ (೯೨೫) ಶಾಸನವು ಅಸುಂಡಿಯಲ್ಲಿದ್ದ ಧೂರ ಜಿನಾಲಯದ ಆಚಾರ್ಯರಾಗಿದ್ದ ಚಂದ್ರಪ್ರಭಾ ಭಟ್ಟಾರಕರು ಈ ಪ್ರದೇಶದ ಆಳ್ವಿಕೆಯನ್ನು ನಡೆಸುತ್ತಿದ್ದರೆಂದು ಶಾಸನವು ತಿಳಿಸುತ್ತದೆ. ಹೀಗಾಗಿ ಈ ಪ್ರದೇಶದಲ್ಲಿ ಜೈನ ಪರಂಪರೆಯು ಬೆಳೆಯುವುದಕ್ಕೆ ಈ ಜೈನ ಮುನಿ ಅಪಾರವಾದ ಕೊಡುಗೆ ನೀಡಿದ್ದಾರೆ.

## ೨೪. ಅರ್ಹನಂದಿ ಪಂಡಿತ / ಅರುಹಣಂದಿ ಭಟ್ಟಾರಕ :

ಕ್ರಿ.ಶ. ೧೦೦೭ರ ಲಕ್ಕುಂಡಿ ಶಾಸನ ಹಾಗೂ ೧೦೭೧ರ ಸೊರಟೂರ ಶಾಸನಗಳಲ್ಲಿ ಈ ಮುನಿಶ್ರೇಷ್ಠ ಜೈನ ಯತಿಯ ಹೆಸರನ್ನು ಉಲ್ಲೇಖಿಸುತ್ತವೆ. ಯಾಪನೀಯ ಸಂಘದಲ್ಲಿ ಅಂತರ್ಗತವಾದ ಕೌರೂರ ಗಚ್ಛವು ಇಂದಿನ ಲಕ್ಕುಂಡಿಗೆ ತುಸು ದೂರದಲ್ಲಿರುವ ಕೌಲೂರು ಶಾಸನೋಕ್ತ ಕೌರೂರು ಇದು ತೆಂಕಣ ಅಯ್ಯವೂಳೆ ಪಟ್ಟಣವೆಂದು ಪ್ರಖ್ಯಾತವಾಗಿತ್ತು. ಇದು ಅತ್ತಿಮಬ್ಬೆಯ ಮಗ ಅಣ್ಣಿಗದೇವನು ಸಾಮಂತನಾಗಿ ಆಳಿದ ಮಾಸವಾಡಿ-೧೪೦ ಎಂಬ ಕಂಪಣದೊಳಗೆ ಸೇರಿದ ಗ್ರಾಮವಾಗಿತ್ತು. ಕೌರೂರು ಗಚ್ಛವು ಸೂರಸ್ತಗಣಕ್ಕೆ ಸೇರಿತ್ತು. ಇದರ ಆಚಾರ್ಯರಾಗಿದ್ದು ಈ ಪರಿಸರದಲ್ಲಿ ಜೈನ ಪರಂಪರೆಯನ್ನು ಬೆಳೆಸಿದವರು ಅರ್ಹನಂದಿ ಆಚಾರ್ಯರು.[೨೪] ದಾನಚಿಂತಾಮಣಿ ಅತ್ತಿಮಬ್ಬೆ ಆಕೆಯಮಗ ಅಣ್ಣಿದೇವನೂ ಈ ಕೌರೂರು ಗುರು ಪರಂಪರೆಯ ಅರ್ಹನಂದಿ ಆಚಾರ್ಯರ ಶಿಷ್ಯರಾಗಿದ್ದರು. ಕ್ರಿ.ಶ. ೯೮೦ರ ಸೌದತ್ತಿ ಶಾಸನವು ಅರ್ಹನಂದಿ ಆಚಾರ್ಯರ ಉಲ್ಲೇಖ ಮಾಡುತ್ತದೆ.

## ೨೫. ನಾಗಸೇನ ಪಂಡಿತ :

ಕಲ್ಯಾಣ ಚಕ್ರವರ್ತಿ ಜಯಸಿಂಹನ ಸಹೋದರಿಯಾದ ಅಕ್ಕಾದೇವಿಯು ಜಿನಮತ ಪರಿಪಾಲಿಸುತ್ತಿದ್ದ ಕುರಿತು ಸೂಡಿಯಲ್ಲಿ ಸಿಕ್ಕ ಶಾಸನವು ತಿಳಿಸುತ್ತದೆ. ಕ್ರಿ.ಶ. ೯೨೦ರಿಂದ ೧೨ನೆಯ ಶತಮಾನದ ಕಾಲಘಟ್ಟದಲ್ಲಿ ರಚನೆಯಾದ ಈ ಶಾಸನವು ನಾಗಸೇನ ಪಂಡಿತ ಜೈನ ಮುನಿಯ ಉಲ್ಲೇಖ ಮಾಡುತ್ತದೆ. ಈತನಿಗೆ ಅಕ್ಕಾದೇವಿಯು

---

೨೪. ಕ್ರಿ.ಶ. ೯೮೦ರ ಸೌದತ್ತಿ ಶಾಸನ, ಕ್ರಿ.ಶ. ೧೦೦೭ರ ಲಕ್ಕುಂಡಿ ಶಾಸನ, ಕ್ರಿ.ಶ. ೧೦೭೧ರ ಸೊರಟೂರು ಶಾಸನದಲ್ಲಿ ಈ ಪಂಡಿತರ ಉಲ್ಲೇಖವಿದೆ.

ಭೂಮಿದಾನ ಮಾಡಿದ ಉಲ್ಲೇಖವಿದೆ.[೨೫] ಹೀಗೆ ನಾಗಸೇನನು ಸೂಡಿ ಗ್ರಾಮದಲ್ಲಿ ಅಥವಾ ಅದರ ಸುತ್ತಮುತ್ತಲಿನ ಪ್ರದೇಶದಲ್ಲಿ ಬರುವ ಬಸದಿಯ ಆಚಾರ್ಯನಾಗಿದ್ದು ಜೈನ ಪರಂಪರೆಯನ್ನು ಬೆಳೆಸಿದ್ದರ ಕುರಿತು ಕಂಡುಕೊಳ್ಳಬೇಕಾಗಿದೆ.

## ೨೬. ಗುಣಚಂದ್ರ ಪಂಡಿತ (೯೫೦) :

ರೋಣ ತಾಲೂಕಿನ ನರೇಗಲ್ಲು ಗ್ರಾಮದಲ್ಲಿ ದೊರೆತ ಶಾಸನವು ರಾಷ್ಟ್ರಕೂಟ ೩ನೆಯ ಕೃಷ್ಣನ ಕಾಲದ ಕ್ರಿ.ಶ. ೯೫೦ರ ಒಂದು ಶಾಸನ ನರೇಗಲ್ಲ ಚಾವಡಿಯ ಮುಂದಿದ್ದು ಅದರಲ್ಲಿ ಕೃಷ್ಣದೊರೆಯ ಪಾದಪದ್ಮೋಪಜೀವಿ ಭೂತಯ್ಯ ಪೇರ್ಮಾನಡಿಯು ಗಂಗವಾಡಿಯನ್ನಾಳುತ್ತಿದ್ದಾಗ ಅವನ ವಲ್ಲಭೆ ಜೈನ ಬಸದಿ, ದಾನಶಾಲೆ ಮಾಡಿಸಿದಂತೆಯೇ ಆ ಸಂದರ್ಭದಲ್ಲಿ ಗುಣಚಂದ್ರ ಪಂಡಿತರೆಂಬ ಜೈನಾಚಾರ್ಯನಿಗೆ ಮಾರಸಿಂಗಯ್ಯನೆಂಬುವನು ಕೆರೆಯನ್ನು ದಾನ ಮಾಡಿದಂತೆಯೂ ತಿಳಿದುಬರುತ್ತದೆ. ಗುಣಚಂದ್ರ ಪಂಡಿತನ ಗುರು ಪರಂಪರೆಯನ್ನು ಈ ಶಾಸನ ತಿಳಿಸುತ್ತದೆ.[೨೬]

## ೨೭. ಬಾಳಚಂದ್ರ ಭಟ್ಟಾರಕ :

ಶ್ರೀ ಯಾಪನೀಯ ಸಂಘದ ಪುನ್ನಗ ವೃಕ್ಷ ಮೂಲಗಣದ ಶ್ರೀಬಾಳಚಂದ್ರ ಭಟ್ಟಾರಕರ ಉಲ್ಲೇಖವು ೧೦೪೪ರ ಹಾಲಿ ಶಾಸನ, ೧೦೪೫ರ ಮುಗುದ ಶಾಸನ ಹಾಗೂ ಕ್ರಿ.ಶ. ೧೨ನೆಯ ಶತಮಾನದ ಡೋಣಿ ಶಾಸನದಲ್ಲಿ ಉಲ್ಲೇಖವಿದೆ. ಸೇನಭೂವ ಆದಣ್ಣನ ಮೊಮ್ಮಗನಾದ ಶ್ರೀಕರಣದ ಬೋಪಣ್ಣನು ಪಾರ್ಶ್ವನಾಥ ಮೂರ್ತಿಯನ್ನು ಕಾಣೂರ್ಗಣದ ಮರುದೇವಿ ಅವ್ವೆಯ ಬಸದಿಗೆ ದಾನ ಮಾಡಿದ್ದನ್ನು ಹಾಗೂ ಈ ಬೊಪ್ಪಣ್ಣನು ಕಾಣೂರ್ಗಣದ ಜೈನ ಯತಿಯಾಗಿದ್ದು ಬಾಳಚಂದ್ರನ ಶಿಷ್ಯನಾಗಿದ್ದನ್ನು ಉಲ್ಲೇಖಿಸುತ್ತದೆ.[೨೭]

## ೨೮. ಚಾರುಕೀರ್ತಿ ಪಂಡಿತದೇವ :

ಕಪೋತಗಿರಿಯ ಅಂಚಿನಲ್ಲಿರುವ ಇಂದಿನ ಡೋಣಿ ಪ್ರಾಚೀನ ಕಾಲದಲ್ಲಿ ದ್ರೋಣಪುರಿ ಎಂದು ಪ್ರಸಿದ್ಧಿ ಪಡೆದಿತ್ತು. ಕ್ರಿ.ಶ. ೧೦೯೬ರಲ್ಲಿಯ ಶಾಸನವು ೬ನೆಯ ವಿಕ್ರಮಾದಿತ್ಯನ ಪಿರಿಯರಸಿ ಲಕ್ಷ್ಮೀದೇವಿ ಕ್ರಿ.ಶ. ೧೦೮೦ರಲ್ಲಿ ಡೋಣಿಯಲ್ಲಿಯೇ ರಾಜ್ಯಾಡಳಿತ ನಡೆಸುತ್ತಿದ್ದ. ಸಂದರ್ಭದಲ್ಲಿ ಇಲ್ಲಿಯ ಶೋಕಶೆಟ್ಟಿ ಎಂಬುವನ ಬಸದಿಗೆ ಭೂದಾನ ಮಾಡಿದ ಉಲ್ಲೇಖವಿದೆ. ಹಾಗೂ ಆ ಬಸದಿಯ ಆಚಾರ್ಯರಾಗಿದ್ದ ಚಾರುಕೀರ್ತಿ ಜೈನ ಯತಿಗೆ ಗೌರವ ಸಲ್ಲಿಸಿದ ವಿವರ ಸಿಗುತ್ತದೆ. ಈ ಪರಿಸರದಲ್ಲಿ ಜೈನ ಪರಂಪರೆಯನ್ನು ಬೆಳೆಸಿದ ಕೀರ್ತಿ ಇವರಿಗೆ ಸಲ್ಲುತ್ತದೆ.

---

೨೫. ಕ್ರಿ.ಶ. ೯೭೦ರ ಸೂಡಿ ಶಾಸನ.

೨೬. ಕ್ರಿ.ಶ. ೯೫೦ರ ನರೇಗಲ್ಲು ಶಾಸನ.

೨೭. ಯಾಪನೀಯ ಸಂಘ, ಹಂಪನಾ, ಪು. ೪೯.

ಈ ಶಾಸನದಲ್ಲಿ ಮುನಿಚಂದ್ರದೇವ ಎಂಬ ಇನ್ನೊಬ್ಬ ಜೈನ ಯತಿಯ ಉಲ್ಲೇಖವೂ ಇದೆ.[೨೮] ಈ ಮುನಿಯು ಸಮಕಾಲಿನರಾಗಿರಬಹುದು ಇಲ್ಲವೆ ಶಿಷ್ಯ ನಾಗಿರಬಹುದೆಂದು ತಿಳಿಯಲು ಅಡ್ಡಿಯಿಲ್ಲ.

ಜೈನ ಮುನಿಗಳು ತಮ್ಮೆದುರು ಇರಿಸಿಕೊಂಡಿದ್ದ ಆದರ್ಶಗಳನ್ನು ಅನುಸರಿಸ ಬಯಸಿದ ಜೀವನ ಮೌಲ್ಯಗಳನ್ನು ಅವರ ಚಾಗ, ವೀರಸಮನ್ವಯ ಮತ್ತು ಸಹಕಾರ ಮನೋಭಾವನೆಗಳನ್ನು ಶಾಸನಗಳು ಸಾರಿ ಹೇಳುತ್ತವೆ. ಜೀವದಯೆಯನ್ನೇ ಜೀವಾಳವಾಗಿಸಿಕೊಂಡು ಅಹಿಂಸೆಯನ್ನು ಉಸಿರಾಗಿಸಿಕೊಂಡು ಇಹಪರಗಳಿಗೆ ಸೋಪಾನ ನಿರ್ಮಿಸಿದ ಶ್ರೇಯಸ್ಸು ಜೈನ ಮುನಿಗಳದ್ದಾಗಿದೆ. ಜಪ-ತಪಗಳ ಜೊತೆ ಸ್ವಚ್ಚಾರಿತ್ಯದ ಜನಸಮೂಹವನ್ನು ನಿರ್ಮಿಸುವಲ್ಲಿ ಸದಾ ನಿರತರಾಗಿದ್ದ ಆ ಕಾಲದ ಜೈನ ಯತಿಗಳ ಅಣತಿಯನ್ನು ಅರಸರಾದಿಯಾಗಿ ಸರ್ವರೂ ಗೌರವಿಸುತ್ತಿದ್ದರು. ಶ್ರದ್ಧೆ ಭಕ್ತಿಯಿಂದ ಪರಿಪಾಲಿಸುತ್ತಿದ್ದರ ಫಲ, ಸರ್ವಧರ್ಮ ಸಮನ್ವತೆಯಲ್ಲಿ ಹಾಸುಬೀಸಾಗಿ ಹರಡಿತ್ತು. ಹೀಗಾಗಿ ಅಂದಿನ ಅರಸರು ಚತುಃಸಮಯ ದೀಪಕರೆನಿಸಿಕೊಂಡಿದ್ದರು. ಪ್ರಭುವಿಗೆ ತಕ್ಕಂತೆ ಪ್ರಜೆಗಳು ಪರೋಪಕಾರಿಗಳೂ ವಿವೇಕಿಗಳೂ, ಗುಣಿಗಳೂ, ಅನ್ಯಾಯ ಅಧರ್ಮಕ್ಕೆ ಅತ್ಯಗ್ರರು ಆಗಿ ರೂಪಗೊಂಡಿದ್ದರು. ಆಯಾ ಪ್ರದೇಶಗಳ ರೀತಿ ರಿವಾಜುಗಳಿಗೆ ಮಾದರಿಯಾಗಿದ್ದರು. ಇಂತಹ ಜನಸಮೂಹವನ್ನು ನಿರ್ಮಿಸುವಲ್ಲಿ ಸುಸಂಸ್ಕೃತ ಬದುಕು ಕಟ್ಟುವಲ್ಲಿ ಜೈನ ಧರ್ಮದ ಯತಿಗಳ ಕೊಡುಗೆಯು ಅಪಾರವಾದುದ್ದು. ಇಂಥಹ ಜೈನ ಮುನಿಗಳಿಗೆ ಯತಿಗಳ ವಾಸಸ್ಥಾನಗಳಾದ ಬಸದಿಗಳಿಗೆ ದಾನ ದತ್ತಿಗಳನ್ನು ನೀಡಿ ದಾನ ಚಿಂತಾಮಣಿ ಎನಿಸಿಕೊಂಡ ಅತ್ತಿಮಬ್ಬೆಯು ಯತಿಗಳಂಥೆಯೇ ಜೀವಿಸಿ ಪರೋಪಕಾರಿ ಕಾರ್ಯಗಳನ್ನು ಮಾಡಿ ಜಿನ ಧರ್ಮದ ಪ್ರಸಾರದಲ್ಲಿ ತನ್ನನ್ನು ತಾನು ತೊಡಗಿಸಿಕೊಂಡು ತನ್ನ ಬದುಕನ್ನು ಹಸನಾಗಿಸಿಕೊಂಡಿದ್ದಲ್ಲದೇ ಚರಿತ್ರೆಯಲ್ಲಿ ಸದಾಮಿನುಗುವ ನಕ್ಷತ್ರದಂತೆ ಇಂದಿನ ಸಮಾಜಕ್ಕೆ ಜನಸಾಮಾನ್ಯರಿಗೆ ಮಾದರಿಯ ವ್ಯಕ್ತಿತ್ವ ಅವಳದು. ಅತ್ತಿಮಬ್ಬೆ ಜೈನ ಧರ್ಮಕ್ಕೆ ಸಲ್ಲಿಸಿದ್ದ ಕೊಡುಗೆಗಳನ್ನು ತಿಳಿಸದೆ ಇದ್ದರೆ ಅದು ಅಪೂರ್ಣವೆನಿಸುತ್ತದೆ. ಹಾಗಾಗಿ ಅತ್ತಿಮಬ್ಬೆ ಜೈನ ಧರ್ಮಕ್ಕೆ ಯತಿಗಳಗೆ ಕವಿಗಳಿಗೆ ಬಸದಿಗಳಿಗೆ ನೀಡಿದ ಪ್ರೋತ್ಸಾಹವನ್ನು ಕುರಿತು ಈ ಮುಂದೆ ವಿವರಿಸಲಾಗಿದೆ.

### ೨೯. ದಾನಚಿಂತಾಮಣಿ ಅತ್ತಿಮಬ್ಬೆ :

"ಬಿಳಿಯರಳೆಯಂತೆ ಗಂಗಾಜಲದಂತೆಸೆವಜಿತಸೇನ ಮುನಿಪತಿಯ
ಗುಣಾವಳಿಯಂತೆ ನೆಗ್ದಾಳ ಕೊಪಣಾಚಲದಂತೆ ಪವಿತ್ರಮತ್ತಿಬ್ಬೆಯ ಚರಿತ್ರಂ"

ಕವಿ ಚಕ್ರವರ್ತಿ ರನ್ನ ಅತ್ತಿಮಬ್ಬೆಯ ವ್ಯಕ್ತಿಚಿತ್ರ ನೀಡುವಾಗ ಕೊಪಣಾಚಲದಂತೆ ಪವಿತ್ರ ಎಂದಿದ್ದಾನೆ. ಪ್ರಾಚೀನ ಕರ್ನಾಟಕದ ಸ್ತ್ರೀಯರಲ್ಲಿ ಅಗ್ರಗಣ್ಯಗಳು ಪರಮ ಜಿನಭಕ್ತೆ ಲಕ್ಕುಂಡಿಯ ಧಾರ್ಮಿಕ ಹಾಗೂ ಸಾಂಸ್ಕೃತಿಕ ಚರಿತ್ರೆಯೊಡನೆ ಹಾಸುಹೊಕ್ಕಾಗಿ ನಿಲ್ಲುವ ಮಹಾಸಾಧ್ವಿ ಅತ್ತಿಮಬ್ಬೆ.[೨೯] ಇವಳು ಕ್ರಿ.ಶ.೯೭೩-೯೭ರ ಚಾಲುಕ್ಯ

೨೮. SII XI-i, 140-1096, ಡೋಣಿ-ಪು. ೧೬೯-೭೧.

೨೯. ದಾನಚಿಂತಾಮಣಿ ಅತ್ತಿಮಬ್ಬೆ, ಶ್ರೀಮತಿ ಪಾರ್ವತೆವ್ವ ಪೂಜಾರ

ಅಹವಮಲ್ಲ ತೈಲಪನ ಮಗ ಇರಿವ ಬೆಡಂಗ ಹಾಗೂ ಸತ್ಯಾಶ್ರಯ ೯೯೭-೧೦೦೮ರ ಕಾಲದಲ್ಲಿದ್ದಳು. ಇವಳ ಕಾಲದಲ್ಲಿ ರನ್ನಕವಿ ಅಜಿತ ಪುರಾಣ (೯೯೩)ವನ್ನು ಬರೆದರೆ ಪೊನ್ನನಿಂದ 'ಶಾಂತಿಪುರಾಣವನ್ನು ಬರೆಸಿ ಸಾವಿರ ಕೈಬರಹದ ಪ್ರತಿಗಳನ್ನು ಮಾಡಿಸಿ ಹಂಚಿದಳು. ಇವಳು ೧೦೦೭ರಲ್ಲಿ ಲಕ್ಕುಂಡಿಯಲ್ಲಿ ಬಸದಿಗಳನ್ನು ಕಟ್ಟಿಸಿ ದತ್ತಿ ದಾನಗಳನ್ನು ನೀಡಿದಳು. ಮಹಾಕವಿ ರನ್ನನು ಗುಣದಂತಕಾರ್ತಿ ಕವಿವರ ಕಾಮದೇನು, ಕಟಕ ಪವಿತ್ರೆ, ಚಾರಿತ್ರ್ಯಮೇರು ಎಂದು ಬಿರುದುಗಳನ್ನು ನೀಡಿದ್ದರು. ಅತ್ತಿಮಬ್ಬೆಯ ಗಂಡ ವಾಜಿಕುಲದ ನಾಗದೇವ (ಚಾಲುಕ್ಯ ಚಕ್ರವರ್ತಿಯ ಮಹಾಮಂತ್ರಿ ದಲ್ಲಪನ ಹಿರಿಯ ಮಗ) ಈಕೆಯ ತಂದೆ ನಾಗಮಯ್ಯ-ಆಂಧ್ರ-ಕಮ್ಮಾ-ಪುಂಗನೂರು, ತಂಗಿ-ಗುಂಡಮಬ್ಬೆ ಮಗ ಅಣ್ಣಿಗದೇವ, ನಾಗದೇವ ಸ್ವರ್ಗಸ್ಥನಾದ ಮೇಲೆ ತಂಗಿ ಗುಂಡುಮಬ್ಬೆ ಗಂಡನೊಡನೆ ಸಹಗಮನವಾದಳು. ಅತ್ತಿಮಬ್ಬೆ ಕಲ್ಲು ಮನಸ್ಸು ಮಾಡಿ ಮಗನ ಪಾಲನೆಗಾಗಿ ಉಳಿದಳು. ತನ್ನ ಐಶ್ವರ್ಯವನ್ನು ಜೈನ ಧರ್ಮದ ಬೆಳವಣಿಗೆಗಾಗಿ ನೀಡಿದಳು. ೧೫೦೦ ಮಣಿಖಚಿತವಾದ ಜಿನ ಪ್ರತಿಮೆಗಳನ್ನು ಮಾಡಿಸಿ ದಾನ ಮಾಡಿದಳು. ಕರ್ನಾಟಕದ ಜೈನವಾಸ್ತುಶೈಲಿಯ ಮೈಲುಗಲ್ಲು ಎನಿಸಿಕೊಂಡ 'ಬ್ರಹ್ಮಜಿನಾಲಯವನ್ನು ಲಕ್ಕುಂಡಿಯಲ್ಲಿ ನಿರ್ಮಿಸಿದಳು. ಹೀಗೆ ಅತ್ತಿಮಬ್ಬೆ ಇತಿಹಾಸದಲ್ಲಿ ಜಿನಧರ್ಮ ಚರಿತ್ರೆಯಲ್ಲಿ, ಕರ್ನಾಟಕದ ವಾಸ್ತುಶಿಲ್ಪದ ಪರಂಪರೆಯಲ್ಲಿ ಚಿರಸ್ಮರಣೀಯಳಾಗಿದ್ದಾಳೆ.

'ಹಮ್ಮಿಯಕ್ಕ' ಎಂಬ ಹೆಣ್ಣುಮಗಳು ಅತ್ತಿಮಬ್ಬೆಯ ಹಾಗೆ ತೀರ್ಥಂಕರರ ವಿಗ್ರಹವನ್ನು ಮಾಡಿಸಿದಳೆಂದು ಲಕ್ಕುಂಡಿಯ ವಸ್ತುಸಂಗ್ರಹಾಲಯದಲ್ಲಿರುವ ತೀರ್ಥಂಕರರ ವಿಗ್ರಹದ ಕೆಳಗೆ ರಚಿಸಿದ ಶಾಸನದಿಂದ ತಿಳಿದು ಬರುತ್ತದೆ.[೩೦] ಬದಾಮಿ ಚಾಲುಕ್ಯರ ವಿಜಯಾದಿತ್ಯನ ಸೋದರಿ ಕುಂಕುಮ ಮಹಾದೇವಿ ಲಕ್ಷ್ಮೇಶ್ವರದಲ್ಲಿ ಅನೆಸಜ್ಜೆಯ ಬಸದಿ ಕಟ್ಟಿಸಿದಳು. ಕ್ರಿ.ಶ. ೧೨ನೆಯ ಶತಮಾನದಲ್ಲಿ ಎಕ್ಕಟಗರ ಕಲ್ಲಸೆಟ್ಟಿಯರ ಮೊಮ್ಮಗಳು ಮತ್ತು ಮಹಾದೇವ ಸೆಟ್ಟಿಯರ ಮಗಳೂ ಆದ ಮಲ್ಲಿಯಕ್ಕ ಎನ್ನುವಳು ಕಟ್ಟಿಸಿದ ಬಸದಿಯಲ್ಲಿಯ ದೇವರು ಎಂದು ಪಾರ್ಶ್ವನಾಥ ತೀರ್ಥಂಕರ ವಿಗ್ರಹದ ಪಾದ ಪೀಠದ ಮೇಲೆರುವ ಶಾಸನ ತಿಳಿಸುತ್ತದೆ. ಇದು ಸದ್ಯ ಗದುಗಿನ ಪುರಾತತ್ವ ಇಲಾಖೆಯ ಮ್ಯೂಸಿಯಂನಲ್ಲಿದೆ. ೬ನೆಯ ವಿಕ್ರಮಾದಿತ್ಯನ ಕಿರಿಯರಾಣಿ ಲಕ್ಷ್ಮೀದೇವಿಯೂ ಮಾಡಿದ ದಾನದ ಕುರಿತು ಡೋಣಿ ಶಾಸನ ತಿಳಿಸುತ್ತದೆ. ಹೀಗೆ ಕಲ್ಯಾಣದ ಚಾಲುಕ್ಯರ ಅರಸ ೨ನೆಯ ಜಯಸಿಂಹನ ಸಹೋದರಿ ಅಕ್ಕದೇವಿಯು ಜೈನಧರ್ಮದ ಬಸದಿಗೆ ದಾನ ನೀಡಿದ್ದರ ಕುರಿತು ಶಾಸನಗಳು ತಿಳಿಸುತ್ತವೆ. ಲಕ್ಕುಂಡಿಯ ನಗರೇಶ್ವರ ದೇವಸ್ಥಾನದಲ್ಲಿರುವ ಒಡೆದು ಹೋದ ಜಿನ ಮೂರ್ತಿಯ ಆಧಾರ ಪೀಠದ ಮೇಲಿರುವ ಶಾಸನವು ರಾಜವ್ವೆಯೆಂಬುವಳು ೧ನೆಯ ನರೇಂದ್ರಸೇನ ಮುನಿಗೆ ದಾನಕೊಟ್ಟಂತೆ ಅದರಲ್ಲಿ ಉಲ್ಲೇಖವಿದೆ. ೧ನೆಯ ನೃಪತುಂಗನ ತಾಯಿ ಚಾಚಿಲಾದೇವಿಯ ಪ್ರೇರಣೆಯಿಂದ ಅಮೋಘವರ್ಷನು ಜೈನ ಧರ್ಮಕ್ಕೆ ಅಮೋಘವಾದ ಕಾಣಿಕೆಯನ್ನು ನೀಡಿದ್ದಾನೆ.[೩೧]

---

೩೦. ಲಕ್ಕುಂಡಿ ಶಾಸನಗಳು, ಶ್ರೀಮತಿ ಹನುಮಕ್ಷಿ ಗೋಗಿ.

೩೧. ಉತ್ತರ ಗದಗ ಜಿಲ್ಲೆಯ ಶಾಸನಗಳು-ಒಂದು ಅಧ್ಯಯನ, ಡಾ. ಎಂ. ಎಸ್. ನರೇಗಲ್ಲ.

ಹೀಗೆ ರಾಣಿಯರು ಜೈನ ಧರ್ಮದ ಸ್ವಾದಿಯರು ಜೈನ ಧರ್ಮತತ್ವಗಳನ್ನು ಪ್ರಸಾರ ಮಾಡಿ ಸಮಾಜಕ್ಕೆ ಮಾದರಿಯೆನಿಸುವ ವ್ಯಕ್ತಿತ್ವವನ್ನು ರೂಪಿಸಿಕೊಂಡು ಮಾದರಿಯಾಗಿದ್ದಾರೆ. ಈ ರೀತಿಯಾಗಿ ಜೈನ ಧರ್ಮವು ಗದಗ ಜಿಲ್ಲೆಯಲ್ಲಿ ಪ್ರಬಲವಾಗಿ ಬೆಳೆದು ನಿಲ್ಲುವಲ್ಲಿ ಪ್ರಮುಖ ಪಾತ್ರವನ್ನು ಈ ಜೈನ ಮುನಿಗಳು, ಸ್ವಾದಿಗಳ ಕೊಡುಗೆ ಅಪಾರವಾಗಿದೆ.

ಹಿಂದಿನ ಕಾಲದಂತೆ ಬಹುಶಃ ಅದೇ ಪರಂಪರೆಯಲ್ಲಿ ಇಂದು ಸಹ ಜೈನ ಧರ್ಮವು ಸಾಮಾಜಿಕ, ಧಾರ್ಮಿಕ, ವ್ಯಾಪಾರ ಮೊದಲಾದ ಕ್ಷೇತ್ರಗಳಲ್ಲಿ ಇನ್ನುಳಿದ ಧರ್ಮಗಳೊಂದಿಗೆ ಸಹಕಾರ ಸೌಹಾರ್ದತೆಯಿಂದ ಗದಗ ಪರಿಸರದಲ್ಲಿ ಬಾಳುತ್ತಲಿದೆ. ಹಿಂದಿನ ಧಾರ್ಮಿಕ ಪರಂಪರೆಗಳನ್ನು ಪಾಲಿಸಿಕೊಂಡು ಬರುವಂತಹ ಜೈನಧರ್ಮಬಾಂಧವರು ಇನ್ನು ಇಲ್ಲಿ ಉಂಟು ಸಮಾಜದಲ್ಲಿ ಉನ್ನತ ಸ್ಥಾನಮಾನಗಳಿಸಿಕೊಂಡಿರುವುದರ ಜೊತೆಗೆ ಆರ್ಥಿಕವಾಗಿಯೂ ಸುಸ್ಥಿತಿಯಲ್ಲಿರುವ ಜೈನ ವ್ಯಾಪಾರಸ್ಥರಲ್ಲುಂಟು. ಇಷ್ಟೇ ಅಲ್ಲ, ಜೈನ ಧರ್ಮದ ತತ್ತ್ವವನ್ನು ಜೀವನದಲ್ಲಿ ಅಳವಡಿಸಿಕೊಂಡು ಶ್ರಾವಕ (ಗೃಹಸ್ಥ) ಧರ್ಮವನ್ನು ಬಿಟ್ಟು ಶ್ರಮಣ (ಮುನಿ) ಧರ್ಮವನ್ನು ಸ್ವೀಕರಿಸಿದವರೂ ಈ ಪರಿಸರದಲ್ಲುಂಟು. ಅವರಲ್ಲಿ ಲಕ್ಷ್ಮೇಶ್ವರದ ಶ್ರೀ ರಾಯಪ್ಪನವರು ಬರಗಾಲಿ ಹಾಗೂ ಗಜೇಂದ್ರಗಡದ ಶ್ರೀ ಯಲ್ಲಪ್ಪ ಸೋಮಪುರ (ಕಣಕೊಪ್ಪ) ಪ್ರಮುಖರಾಗಿದ್ದಾರೆ.

### ೩೦. ಶ್ರೀ ಯಲ್ಲಪ್ಪ ಸೋಮಪುರ (ಕಣಕೊಪ್ಪ) :

"ಜೈನ ಧರ್ಮಾಚರಣೆ" ಎಂಬ ಕಿರು ಪುಸ್ತಕವನ್ನು ರಚಿಸಿರುವ ಇವರು ಗಜೇಂದ್ರಗಡದ ನಿವಾಸಿಯಾಗಿದ್ದು ಕಲಿಕೆಯಲ್ಲಿ ಆಸಕ್ತಿವಹಿಸದೆ ೧೦ನೆಯ ತರಗತಿಯವರೆಗೆ ಮಾತ್ರ ಕಲಿತರು. ಸುಖರಾಜಜಿ ಬಾಗಮಾರ ಎಂಬುವವರಲ್ಲಿ ನೌಕರಿಯಲ್ಲಿದ್ದುದರಿಂದ ಸ್ಥಾನಕದ ಯಾವುದೇ ಕಾರ್ಯಕ್ಕಾಗಿ ಇವರಿಗೆ ಅಲ್ಲಿಬರ ಹೋಗುವ ಸಂದರ್ಭ ಬಂದೊದಗಿತು. ಮಹಾಸತಿ, ಪ.ಪೂ. ಶ್ರೀ ಮೈನಾ ಸುಂದರಜಿ ಸಾದ್ವಿಜಿ ಅವರ ಸೇವಾ ಕಾರ್ಯಕ್ಕೆ ಮನಸ್ಸು ಒಲಿದು ೭೦ ದಿನಗಳವರೆಗೆ ಸಾಮಾಯಿಕ ವಿಧಿ ಬಗ್ಗೆ ಓದಿಕೊಂಡು ಅದೇ ಸಮಯದಿಂದ ಪ್ರತಿಕ್ರಮಣ ೨೧ ವಿಧಿ ಸೂತ್ರಗಳನ್ನು ೧ ತಿಂಗಳ ಕಾಲ ಪಠಿಸಿ ಮನನ ಮಾಡಿಕೊಂಡು ೨೦ ವರ್ಷಕಾಲ ಮುಂದುವರಿಸಿಕೊಂಡು ಬಂದರು. ನಂತರ ಆಚಾರ್ಯವರ್ಯರಾದ ಪ.ಪೂ. ೧೦೦೮ ಶ್ರೀ ಹಸ್ತಮಲಜಿ ಮಹಾಸನ್ನಿಧಿ ರಾಯಚೂರು ಇವರ ಚಾತುರ್ಮಾಸದ ಸೇವೆಯಲ್ಲಿದ್ದಾಗ ೧೫೦ ರಿಂದ ೨೦೦ ಜನರಿಗೆ ಪ್ರತಿಕ್ರಮಣ ಮಾಡಿಸಿದ ಶ್ರೇಯಸ್ಸು ಇವರದು. ಇದೇ ಸಮಯದಲ್ಲಿ ಜಯಪುರ ನಿವಾಸಿಗಳಾದ ಶ್ರೀಮಾನ್ ಪೂನಮಚಂದಜಿ ಬಡೇರ ಇವರ ಪ್ರೇರಣೆ ಪೂರ್ವಕ ಗುರುದೇವರ ದರ್ಶನಲಾಭದೊರೆಯಿತು. ಅವರ ಸನ್ನಿಧಾನದಿಂದ ೩ ವರ್ಷ ವೈರಾಗ್ಯ ಅವಸ್ಥೆಯಲ್ಲಿ ಧರ್ಮದ ೧೦ ಸೂತ್ರಗಳನ್ನು ಕನ್ನಡದಲ್ಲಿ ಅನುವಾದಿಸಿ ಅಧ್ಯಯನ ಪಾಠ ಮಾಡಿದರು. ೧೯೮೨ರಲ್ಲಿ ತಮ್ಮ ೨೪ನೆಯ ವಯಸ್ಸಿನಲ್ಲಿ ನಾಗೋರದಲ್ಲಿ ಇವರಿಗೆ ದೀಕ್ಷಾ ಗ್ರಹಣ ಪ್ರಾಪ್ತವಾಗಿ ಹರೀಶ ಮುನಿಜಿ ಎಂಬ ದೀಕ್ಷಾನಾಮ ಪ್ರಾಪ್ತವಾಯಿತು. ಮುಂದೆ ಇವರು

೮ ವರ್ಷಗಳ ಕಾಲ ಸಾಧುಗಳಾಗಿ ಅಲೆದಾಡಿ ಜೈನ ಪರಂಪರೆಯ ತತ್ವಗಳನ್ನು ಪ್ರಸಾರ ಮಾಡಿದರು. ಮುಂದೆ ಅನಾರೋಗ್ಯದಿಂದ ಮರಳಿ ಗ್ರಹಸ್ಥಾಶ್ರಮಕ್ಕೆ ಪರಿವರ್ತಿತರಾಗಿ ಸದ್ಯ ಗಜೇಂದ್ರಗಡದಲ್ಲಿ ಪತ್ನಿ, ಪುತ್ರನೊಂದಿಗೆ ಇರುವರು. ಈಗಲೂ ಇವರು ಜೈನ ಧರ್ಮಾಚರಣೆಯನ್ನೇ ಆಚರಿಸುತ್ತಿದ್ದಾರೆ. ಇವರು ಶ್ವೇತಾಂಬರ ಪರಂಪರೆಯ ಸ್ಥಾನಿಕವಾಸಿ ಶ್ರಾವಕ ಸಂಘದಲ್ಲಿದ್ದು ವ್ರತ ಕೈಗೊಂಡವರು.

### ೩೧. ಶ್ರೀ ರಾಯಪ್ಪನವರು ಬರಗಾಲಿ :

ಲಕ್ಷ್ಮೇಶ್ವರದ ನಿವಾಸಿಯಾದ ಇವರು ಜೈನ ಧರ್ಮದ ತತ್ತ್ವವನ್ನು ಜೀವನದಲ್ಲಿ ಅಳವಡಿಸಿಕೊಂಡು ಶ್ರಾವಕ ಧರ್ಮವನ್ನು ಬಿಟ್ಟು ಶ್ರಮಣ ಧರ್ಮವನ್ನು ಸ್ವೀಕರಿಸಿದವರು ಸದ್ಗ್ರಹಸ್ತರು. ಸನ್ಯಾಸವನ್ನು ಸ್ವೀಕರಿಸಿ ದಿಗಂಬರ ಮುನಿಗಳಾಗಿ ಜೈನರಿಗೆ ಪವಿತ್ರವಾದ ಸಮ್ಮೇದಗಿರಿಯಲ್ಲಿ ಮುಕ್ತರಾದವರು ಇವರು ಜೈನ ಧರ್ಮಕ್ಕೆ ಬಹಳಷ್ಟು ದಾನದತ್ತಿ ನೀಡಿದ್ದಾರೆ.

ಗದಗ ಪರಿಸರದಲ್ಲಿ ಜೈನ ಪರಂಪರೆಯು ಬೆಳೆದು ಬರುವುದಕ್ಕೆ ಕಾರಣ ಈ ಜೈನ ಯತಿಗಳು. ಈ ಪ್ರದೇಶದಲ್ಲಿ ಜೈನ ಧರ್ಮ ನೆಲೆಕಂಡುಕೊಳ್ಳಲು ಅಪಾರವಾದ ಸೇವೆಯನ್ನು ಸಲ್ಲಿಸಿದ್ದಾರೆ. ಜೈನ ಸಂಸ್ಕೃತಿ ಭಾರತೀಯ ಜೀವನವನ್ನು ರೂಪಿಸುವಲ್ಲಿ ಮೌಲ್ಯಗಳನ್ನು ನಿರ್ಧರಿಸುವಲ್ಲಿ ಹಿರಿದಾದ ಪಾತ್ರವನ್ನಾಡಿದ ಮುನಿಗಳು ಜೀವದಯೆ, ದಾನ, ಸಂಯಮ, ತಪಸ್ಸು, ಶೀಲವೆಂಬ ಪಂಚಾಂಗಗಳ ಹಿರಿಮೆಯನ್ನರುಹಿ ಧರ್ಮದ ಸುಭದ್ರವಾದ ತಳಹದಿಯನ್ನು ಜೈನ ಸಂಸ್ಕೃತಿಯು ಮುನಿಗಳ ಮುಖಾಂತರ ತಾತ್ವಿಕ ಕ್ಷೇತ್ರದಲ್ಲಿ ಧಾರ್ಮಿಕ ವಿಷಯಗಳಲ್ಲಿ ಸಾಂಸ್ಕೃತಿಕ ರೀತಿ–ನೀತಿಗಳಲ್ಲಿ ಜೈನ ಸಂಪ್ರದಾಯ ವಿಶಿಷ್ಠ ಪಥವನ್ನು ತುಳಿದು ಅಮೂಲ್ಯಕಾಣಿಕೆಯನ್ನಿಡಲು ಈ ಜೈನ ಮುನಿಗಳ ಕೊಡುಗೆ ಅಪಾರವಾಗಿದೆ. ಜೈನ ಸಂಸ್ಕೃತಿಯು ನಮ್ಮ ಜೀವನದಲ್ಲಿ ಹಾಸುಹೊಕ್ಕಾಗಿ ಹೆಣೆದುದರಿಂದ ಅದರ ಪ್ರತಿಫಲವಾಗಿ ಇಂದು ಈ ಪರಿಸರದಲ್ಲಿ ಬೆಳೆದು ನಿಂತಿವೆ.

ಭಾವಶುದ್ಧಿ ಸ್ವಾತಿಕ ಶುದ್ಧಿಯ ಜೊತೆ ಜೀವನಾಭಿವೃದ್ಧಿಯ ಮುಖ್ಯ ಗುರಿ ಜೈನ ಪರಂಪರೆಯದ್ದು. ಅದರ ಪ್ರೇರಣೆಯು ಧಾರ್ಮಿಕವಾಗಿದೆ. ಅವರು ಕಲೆಯ ಮೂಲಕ ಜೈನ ತತ್ವಜ್ಞಾನ ಮತ್ತು ಆಚಾರ್ಯಗಳ ಆದರ್ಶಕ್ಕೆ ಮೂರ್ತಿ ಸ್ವರೂಪಕೊಡಲು ಪ್ರಯತ್ನಿಸಿದ್ದಾರೆ. ಮಾನವನ ಮೂಲಭೂತ ವಾಸನೆಗಳಿಗೆ ಕಡಿವಾಣ ಹಾಕಿ ಸಂಯಾಮಿಯಾಗಲು ಮುನಿಧರ್ಮದ ಮೂಲಕ ವ್ರತ ನಿಯಮಗಳ ಕಟ್ಟಳೆ ಹಾಕಲಾಯಿತು. ಸಕಲ ಕ್ರಿಯಾ ಕರ್ಮಗಳಿಗೆ 'ಕಾಯ' ಕಾರಣವಾಗಿದ್ದರಿಂದ ತ್ಯಾಗ ಯೋಗದ ಮೂಲಕ ಕಾಯದ ಮೇಲಿನ ಮಮಕಾರವನ್ನಳಿಯಲು ನಗ್ನತೆಗೆ ಶರಣು ಹೋಗಿದ್ದಾರೆ. ನರರ ಕಷ್ಟಕೊಟಲೆಗಳಿಗೆ ಅಹಿಂಸೆಯೊಂದೇ ಪರಮೌಷದವೆಂದು ಮನಗಂಡು ಜೈನ ತೀರ್ಥಂಕರು, ಸಾಧಕರು, ಜೈನಮುನಿಗಳು ಅಹಿಂಸೆಯನ್ನು ಜೀವನದ ಉಸಿರನ್ನಾಗಿಸಿಕೊಂಡವರು. ಜೈನ ಧರ್ಮಯೋಗ ಮತ್ತು ತಪಸ್ಸಿಗೆ ತುಂಬಾ ಮಹತ್ವ ನೀಡಿದೆ. ಮೂಗಿನ ತುದಿಯಲ್ಲಿ ನೆಟ್ಟ ನೋಟ, ಅರೆತೆರೆದ ಕಂಗಳು ಇವು ತೀರ್ಥಂಕರರ ಜೈನ ಮುನಿಗಳ ತಪೋಭಂಗಿ ತೀರ್ಥಂಕರರು ನಿಂತು (ಸ್ಥಾನಿಕ) ಕುಳಿತು (ಅನೇಕ)

ತಪಗೈದು ಬೆಳಕನ್ನು ಕೇವಲ ಜ್ಞಾನವನ್ನು ಕಂಡುಕೊಂಡ ಕಾರಣ ಧ್ಯಾನಮುದ್ರೆಯು ನಿಂತ ಕುಳಿತ ಜಿನಬಿಂಬಗಳು ವ್ಯಾಪಕವಾಗಿ ಕಂಡು ಬರುತ್ತವೆ. "ಮೂರ್ತಿ ಜೈನರಿಗೆ ಸಾಧನೆಯ ಆರಾಧನೆಯ ಆಲಂಬನವಾಗಿರುತ್ತದೆ. ಅದು ಸಾಧನೆಯೆ ಹೊರತು ಸಾಧ್ಯವಲ್ಲ. ಅಂದರೆ ಮಾಧ್ಯಮವೇ ಹೊರತು ಗುರಿಯಲ್ಲ. ಅದರಲ್ಲಿ ಮನಸ್ಸನ್ನು ನೆಲೆಗೊಳಿಸುವುದರ ಮೂಲಕ ಪರಮಾತ್ಮನ ತತ್ವವನ್ನು ಕಲ್ಪಿಸಿಕೊಳ್ಳಲಾಗುತ್ತದೆ" ಎಂದು ಮುನಿವರ್ಯ ವಿದ್ಯಾನಂದರು ಹೇಳುತ್ತಾರೆ.[೩೨]

'ಪರಮ ಜೀನೇಂದ್ರವಾಣಿಯೇ ಸರಸ್ವತಿ' ಎಂದು ಪಂಪ ಹೇಳಿದ್ದಾನೆ. ವಿದ್ಯೆ ಹಾಗೂ ಜ್ಞಾನಕ್ಕೆ ದೈವೀ ಸ್ವರೂಪವನ್ನು ಈ ಶಾರೀರಿಕ ಕಲ್ಪನೆಯನ್ನು ನೀಡಿದ ಶ್ರೇಯಸ್ಸು ಜೈನರಿಗೆ ಸಲ್ಲುತ್ತದೆ. ಜೀವದ ನಾಲ್ಕು ಗತಿಗಳನ್ನು (ನಾರಕಿ, ತಿರ್ಯಕ, ಮನುಷ್ಯದೇವ) ಸೂಚಿಸುವ ಸ್ವಸ್ತಿಕವು ಜೈನ ಕಲ್ಪನೆಯೇ ಸ್ವಸ್ತಿ ಎಂಬ ಪದಕ್ಕೆ ಮಂಗಳ ಎಂಬ ಅರ್ಥವೂ ಇದೆ. ಸ್ವಸ್ತಿಕವು ಮೇಲ್ಭಾಗದಲ್ಲಿ ರತ್ನತ್ರಯದ ಪ್ರತೀಕವಾದ ಮೂರು ಬಿಂದುಗಳನ್ನು ಇಡಲಾಗುತ್ತದೆ. ಈ ಮೂರು ಬಿಂದುಗಳ ಮೇಲೆ ಒಂದು ಚಂದ್ರಬಿಂದು ಸಿದ್ಧಶಿಲೆ ಮುಕ್ತಿಯ ತಾಣಕ್ಕೆ ಸಂಕೇತವಾಗಿದೆ.

ಸಮಾಧಿ ಮರಣ ಹೊಂದಿದ ಜಿನಮುನಿಗಳ ಜಿನಭಕ್ತರ ಸ್ಮಾರಕ ಶಿಲೆಗಳೇ ನಿಷಿಧಿ ಶಿಲ್ಪಗಳು. ಕೆಲ ನಿಷಿಧಿ ಕಲ್ಲುಗಳಲ್ಲಿ ಶಾಸನಗಳನ್ನು ಕೆತ್ತಿರುತ್ತಾರೆ. ಪ್ರವಚನ ನೀಡುತ್ತಿರುವ ಜಿನಮುನಿಯ ಮುಂದೆ ಭಕ್ತರಾದವರು ಕೈಮುಗಿದು ಕುಳಿತಿರುತ್ತಾರೆ. ಮೇಲ್ಭಾಗದಲ್ಲಾಗಲಿ ಇವರಿಬ್ಬರ ಮಧ್ಯದಲ್ಲಿ ಜಿನಬಿಂಬ ಇರುತ್ತದೆ. ಸಮಾಧಿ ಮರಣ ಪಡೆದ ಮುನಿಗಳ ಪಾದುಕೆಗಳನ್ನು ಕಮಂಡಲ ಪಿಂಛಿಯನ್ನು ಶಿಲೆಯಲ್ಲಿ ಬೆಟ್ಟದ ಬಂಡಿಗಳ ಮೇಲೆ ಕೊರೆದು ನಿಷಧಿ ಸ್ಮಾರಕಗಳನ್ನು ರಚಿಸುವುದುಂಟು. ಗಗನಗಾಮಿಯಾದ ಜಿನಮುನಿಗಳನ್ನು ಚಾರಣ ಮುನಿಗಳೆಂದೂ ಇವರೂ ಜೋಡಿಯಾಗಿ ಇರುವುದರಿಂದ ಅಂಥ ಇಬ್ಬರು ಚಾರಣ ಮುನಿಗಳು ಬೆಟ್ಟ ಪ್ರದೇಶದಲ್ಲಿ ಬಂದಿಳಿದು ಧರ್ಮಬೋಧನೆಯನ್ನು ಮಾಡಿ ಕೊನೆಗೆ ಸಮಾಧಿ ಮರಣ ಹೊಂದಿದ ಗಿರಿಗಳಿಗೆ ಚಾರಣಗಿರಿ ಅಥವಾ ಚಾರಣರ ಬೆಟ್ಟವೆಂದು ಕರೆಯುವುದುಂಟು ಅಂಥಲ್ಲಿ ಇಬ್ಬರು ಜಿನಮುನಿಗಳ ಪಾದುಕೆ, ಕಮಂಡಲ, ಪಿಂಛಿಗಳನ್ನು ಕೆತ್ತಿರುವುದುಂಟು.

ವೃಷಭನು ವೃತ್ತಿಗನುಗುಣವಾಗಿ ಮಾನವ ಕುಲವನ್ನು ಮೂರು ವರ್ಣಗಳಾಗಿ ವಿಂಗಡಿಸಿದನೆಂದು ಉಲ್ಲೇಖವಿದ್ದರೆ ಐತಿಹಾಸಿಕ ವ್ಯಕ್ತಿಯಾದ ಅಂತಿಮ ತೀರ್ಥಂಕರ ಮಹಾವೀರನು ಜೈನ ಸಮಾಜ ಅವರು ಆಚರಿಸುವ ನಿಯಮಗಳ ಮೃದುತ್ವ ಕಠೋರತೆಗೆ ಅನುಗುಣವಾಗಿ ೪ ಭಾಗಗಳಾಗಿ ವಿಂಗಡಿಸಿದನು. ಇದನ್ನೇ ಮಹಾವೀರ ರೂಪಿಸಿದ 'ಚತುಃಸಂಘ ಯೋಜನೆ' ಎನ್ನುತ್ತೇವೆ.

೧. ಮುನಿಗಳು ೨. ಆರ್ಯಕೆಯರು ೩. ಶ್ರಾವಕರು ೪. ಶ್ರಾವಿಕೆಯರು. ಇವುಗಳಲ್ಲಿ ಮೊದಲನೆರಡು ಸನ್ಯಾಸಿಗಳದ್ದಾದರೆ (ಶ್ರಮಣ) ಉಳಿದೆರಡು ಗೃಹಸ್ಥ ಜೈನರದ್ದು. ಇವರುಗಳಿಗೆ ಉಳಿದವರ ಬಗ್ಗೆ ನಿರ್ದಿಷ್ಟ ಕರ್ತವ್ಯಗಳಿದ್ದವು. ಮುನಿ ಹಾಗೂ ಆರ್ಯಿಕೆಯರು ಉಳಿದೆರಡು ವರ್ಗಗಳವರೆಗೆ (ಗೃಹಸ್ಥರಿಗೆ) ಧರ್ಮವನ್ನು

---

೩೨. ಮಿರ್ಜಿ ಅಣ್ಣಾರಾಯ-ಜೈನಧರ್ಮ, ಸೇಡಬಾಳ, ಪುಟ-೮೨೨, ೧೯೫೨.

ವಿವರಿಸಿ ಹೇಳಿ ಅವರನ್ನು ಪಾರಲೌಕಿಕದಲ್ಲಿ ಸ್ಥಿರಗೊಳಿಸಬೇಕಾಗಿತ್ತು. ಈ ಶ್ರಮಣರಿಗೆ ಆಹಾರ ಮೊದಲಾದವುಗಳನ್ನು ಒದಗಿಸಿ ಧರ್ಮಧ್ಯಾನದಲ್ಲಿ ಅವರು ಕಳೆಯುವಂತೆ ನೋಡಿಕೊಳ್ಳುವುದು. ಗ್ರಹಸ್ಥರ ಕರ್ತವ್ಯವಾಗಿತ್ತು. ಈ ಎರಡು ವಿಭಾಗಗಳು (ಶ್ರಮಣ–ಗೃಹಸ್ಥ) ಪರಸ್ಪರ ಪೂರಕವಾಗಿದ್ದು ಒಂದು ಮತ್ತೊಂದನ್ನು ನಿಯಂತ್ರಿಸುತ್ತಿತ್ತು. ಸನ್ಯಾಸಿಗಳು ಶೀಲಭ್ರಷ್ಟರು ದುರಾಚಾರಿಗಳು ಆದರೆ ಗ್ರಹಸ್ಥರಿಂದ ಮನ್ನಣೆ ಇರುತ್ತಿರಲಿಲ್ಲ. ಹಾದಿ ತಪ್ಪಿದ ಗ್ರಹಸ್ಥರಿಂದ ಮುನಿಗಳು ಆಹಾರ ಸ್ವೀಕರಿಸುತ್ತಿರಲಿಲ್ಲ.[೩೩]

ಪಾರಮಾರ್ಥಿಕ ನಿಚ್ಚಣಿಕೆಯ ಭಾವವನ್ನು ಆಧರಿಸಿ ಬೆಳೆದದ್ದು. ಶ್ರಮಣರ ಧಾರ್ಮಿಕ ಜೀವನ ಸಾಧನೆಯ ಮೇಲೆಯೂ ತರತಮಭಾವದ ಮೇಲೆಯೂ ಆ ನಿಚ್ಚಣಿಕೆಯನ್ನು ರಚಿತವಾಗಿದೆ. ಸರ್ವಜೀವಿಗಳನ್ನು ಸಮಾನಭಾವದಿಂದ ಕಾಣಬೇಕೆಂದು ಉಪದೇಶಿಸುವ ಜೈನ ಧರ್ಮವು ಪಾರಮಾರ್ಥಿಕ ವಿಷಯದಲ್ಲಿ ತರತಮ ಭಾವವನ್ನು ಸ್ಪಷ್ಟಪಡಿಸುವುದಿಲ್ಲ. ಜೈನರಿಗೆ ಅತ್ಯಂತ ಪವಿತ್ರರೂ ಪೂಜನೀಯರೂ ಆಗಿರುವವರಲ್ಲಿ ಐವರು ಪಂಚಪರಮೇಷ್ಠಿಗಳು ಇವರಲ್ಲಿ ಸಿದ್ದರು ಲೋಕದ ತುತ್ತತುದಿಯಲ್ಲಿರುವವರು. ಅವರ ನಂತರ ಅರಹಂತರು (ತೀರ್ಥಂಕರರು) ಅವರ ಕೆಳಗೆ ಪ್ರಪಂಚದ ಬಂಧನದಿಂದ ಪಾರಾಗಿ ಹೋದವರು ಸಾಧುಗಳು ಅವರ ಕೆಳಗೆ ಆಚಾರ್ಯರು ಅವರ ಕೆಳಗಿನವರು ಉಪಾಧ್ಯಾಯರು. ಅನಂತರ ಅವರ ಕೆಳಗಡೆ ಇರುವವರು ಶ್ರಾವಕರು ಎಂದರೆ ಲೌಕಿಕರು.

ಸಿದ್ಧ ಪರಮೇಷ್ಠಿಗಳು ಸರ್ವಜ್ಞತ್ವವನ್ನೂ ಜೀವನ್ಮುಕ್ತಿಯನ್ನು ಪಡೆದವರು ಅರಹಂತರು ಜೀವನ್ಮುಕ್ತಿಯನ್ನು ಸಾಧಿಸಲಿಲ್ಲ. ಮಾನವ ಶರೀರಕ್ಕೆ ಸಂಬಂಧಿಸಿದ ವ್ಯವಹಾರಗಳನ್ನು ಸಂಪೂರ್ಣವಾಗಿ ತ್ಯಜಿಸಲಿಲ್ಲ. ಆದರೂ ಅವರು ನಿರ್ವಾಣದ ದಾರಿಯನ್ನು ತೋರಿಸಬಲ್ಲ ಜ್ಞಾನಿಗಳು ಅವರು ಅಶೇರಿರಿಗಳಾಗಿರುವರು. ಆದ್ದರಿಂದ ಅವರಿಗೆ ವಂದನೆಯನ್ನು ಅರ್ಪಿಸುವಾಗ ಅವರ ಗುಣಗಳನ್ನು ಮಾತ್ರ ಬಣ್ಣಿಸಲಾಗುತ್ತದೆ. ಅವರ ನಂತರದಲ್ಲಿರುವ ಸಿದ್ಧರು ದೇಹದಾರಿಗಳಾಗಿರುವುದಿಲ್ಲ. ಸಮ್ಯಕ್ತ ಜ್ಞಾನ ದರ್ಶನಗಳೇ ಮುಂತಾದ ೮ ಗುಣಗಳನ್ನು ಧರಿಸಿದ ಸಿದ್ಧರು. ಪ್ರಶಾಂತವೂ ಸ್ಥಿರವೂ ಆದ ಸಿದ್ಧಶಿಲೆಯೆಂಬ ಸ್ಥಳದಲ್ಲಿ ವಾಸಿಸುವರು ಅವರ ಕೆಳಗಡೆ ಕರ್ಮಬಂಧನಗಳಿಂದೊಡಗೂಡಿದ ಜಗತ್ತಿನಲ್ಲಿ ಆಚಾರ್ಯರೂ, ಸಾಧುಗಳು, ಉಪಾಧ್ಯಯರೂ, ಹಲವಾರು ಅಂತಸ್ತುಗಳಲ್ಲಿ ನೆಲೆಸಿರುವರು. ಉಪವಾಸ, ಏಕಾಂತವಾದ ಶರೀರ ದಂಡನೆ, ಧ್ಯಾನ, ಅಧ್ಯಯನ ಮುಂತಾದ ೧೨ ಬಗೆಯ ತಪಸ್ಸುಗಳನ್ನು ಕ್ಷಮೆ, ಸಂಯಮ, ತಪಸ್ಸು, ಬ್ರಹ್ಮಚರ್ಯ ಮುಂತಾದ ೧೦ ಧರ್ಮಗಳನ್ನು ಸಮತಾಭಾವನೆ, ಪಂಚಪರಮೇಷ್ಠಿಗಳಿಗೆ ವಂದನೆ ಪಶ್ಚಾತ್ತಾಪಗಳೇ ಮೊದಲಾದ ೬ ಗುಣಗಳನ್ನು ಅಳವಡಿಸಿಕೊಂಡವರನ್ನು ಆಚಾರ್ಯರೆಂದು ಕರೆಯಲಾಗುವುದು. ಅವರು ಸಂಘದ ಒಡೆಯರು, ದೀಕ್ಷೆಯನ್ನು ಅವರೊಬ್ಬರೇ ಕೂಡ ಬಲ್ಲರು. ತಪ್ಪಿದವರನ್ನು ಸಂಘದಿಂದ ಹೊರಗೆ ಹಾಕುವ ಮತ್ತು ಅವರಿಗೆ ಪಶ್ಚಾತ್ತಾಪವನ್ನು ಕೊಡಬಲ್ಲ ಅಧಿಕಾರ ಆಚಾರ್ಯರಿಗೆ ಇರುತ್ತದೆ. ಒಟ್ಟಿನಲ್ಲಿ ೩೬ ಗುಣಗಳನ್ನು ಸಂಪಾದಿಸಿದ ಅವರು ಆದರಿಂದ ೧೨ ಗುಣಗಳುಳ್ಳ ಉಪಾಧ್ಯಾಯ ಮತ್ತು ಸಾಧುಗಳಿಂದ ಹೆಚ್ಚಿನ ಶ್ರೇಣಿಯಲ್ಲಿದ್ದವರು. ಹೀಗೆ

---

೩೩. ಜೈನಧರ್ಮ, ಕಮಲಾ ಹಂಪನಾ

ಆಯಾ ಹಂತದಲ್ಲಿರುವ ಈ ಐವರೂ ಗುಣಗಳ ಆಧಾರದ ಮೇಲೆ ಒಬ್ಬರಿಗಿಂತ ಇನ್ನೊಬ್ಬರು ಶ್ರೇಷ್ಠರೂ, ಉತ್ತಮರೂ ಆಗಿರುವರೆಂದು ತಿಳಿಸುತ್ತಾರೆ. ಜೈನ ಸಂಸ್ಕೃತಿಯು ಸೂಚಿಸುತ್ತದೆ. ಇವರಿಗೆ ವಂದನೆಗಳನ್ನು ಎಲ್ಲಾ ಉತ್ಸವದಲ್ಲಿ ಹಬ್ಬ, ವ್ರತಾಚರಣೆ, ಪೂಜೆಗಳಲ್ಲಿ ಸಂನ್ಯಸ್ಥ ದೀಕ್ಷೆಯ ಆರಂಭ ಮುಂತಾದವುಗಳಲ್ಲಿ ಅರ್ಪಿಸುವುದರಿಂದ ಎಲ್ಲಾ ಪಾಪಗಳ ಪರಿಹಾರವೂ ಎಲ್ಲಾ ಮಂಗಲ ಕಾರ್ಯಗಳಿಗಿಂತ ಹೆಚ್ಚಿನ ಮಂಗಲವೂ ಎಲ್ಲಾ ಮಂತ್ರಗಳಿಗಿಂತ ಹೆಚ್ಚಿನ ಶಕ್ತಿ ಪ್ರಾಪಂಚಿಕ ಫಲ ಅನಾರೋಗ್ಯ ನಿವಾರಣೆ ಕರ್ಮನಾಶ ಮುಂತಾದವುಗಳು ಲಭ್ಯವಾಗುತ್ತದೆ.[೩೪]

ಪಂಚ ಪರಮೇಷ್ಠಿಗಳಷ್ಟೇ ಅಲ್ಲ, ಲಾಕಿಕರೂ ಶ್ರೇಣಿ ಪದ್ಧತಿಯನ್ನು ಬೆಳೆಸಿಕೊಂಡು ಬಂದಿರುವರು. ಅವರ ಶ್ರೇಣಿ ರಚನೆಯು ಉತ್ತಮವಾದಕ್ಕೆ ಜಾಗ ಮಾಡಿಕೊಟ್ಟದೆ ಸೈದ್ಧಾಂತಿಕ ತತ್ವಗಳ ಬಗೆಗೆ ಶ್ವೇತಾಂಬರ ಹಾಗೂ ದಿಗಂಬರ ಗುಂಪುಗಳಲ್ಲಿ ವಿಶೇಷವಾದ ಭಿನ್ನಾಭಿಪ್ರಾಯಗಳು ಇಲ್ಲದಿದ್ದರೂ ಸಾಮಾಜಿಕ, ಧಾರ್ಮಿಕ ವಿಷಯಗಳಲ್ಲಿ ಅವರಿಬ್ಬರೂ ಗುಂಪುಗಾರಿಕೆಯನ್ನು ಸಂಘರ್ಷಣೆಯನ್ನು ಐತಿಹಾಸಿಕವಾಗಿ ಬೆಳೆಸಿಕೊಂಡು ಬಂದಿರುವರು. 'ನಮ್ಮ ಗುಂಪು ಶ್ರೇಷ್ಠವಾದುದು. ನಾವು ಮೇಲಿನ ಪಂಕ್ತಿಗೆ ಸೇರಿದವರು, ಎಂಬ ಆಹ್ವಾನಗಳನ್ನು ಸಮಕಾಲೀನ ಶ್ರಾವಕರೂ ಮುನಿಗಳೂ ಪರಸ್ಪರ ಎದುರಿಸುತ್ತಿರುವರೆಂದು ಜೈನ ಧರ್ಮದ ಅಭ್ಯಾಸಿಗಳು ತಿಳಿಸುತ್ತಾರೆ.

ನಗ್ನ್ಯ, ದೇವರ ಪೂಜೆ, ಪವಿತ್ರ ಸ್ಥಾನ ಮುಂತಾದವುಗಳ ಬಗೆಗೆ ಅವೆರಡೂ ಗುಂಪಿನಲ್ಲಿ ವಿಶೇಷ ಕಠಿಣ ಪರಿಸ್ಥಿತಿ ನೆಲೆಗೊಂಡಿದ್ದು ಅವು ಮೇಲಿಂದ ಮೇಲೆ ವ್ಯಾಜ್ಯಗಳಿಗೆ ಅವಕಾಶಗಳನ್ನುಂಟುಮಾಡಿಕೊಡುತ್ತಲಿವೆ. ದಿಗಂಬರತ್ವ ಮತ್ತು ಪವಿತ್ರ ಸ್ಥಾನಗಳ ಒಡೆತನಕ್ಕೆ ಸಂಬಂಧಿಸಿದ ಎರಡು ವಿಷಯಗಳು ಪರಸ್ಪರ ಕದನಕ್ಕೆ ಎಡೆಮಾಡಿಕೊಟ್ಟಿವೆ. ದಿಗಂಬರತ್ವವೊಂದೆ ಮೋಕ್ಷದ ಮಾರ್ಗವಾಗಿದೆಯೆಂದೂ ಇನ್ನುಳಿದ ಮಾರ್ಗಗಳು ನಿರುಪಯೋಗಿಯೆಂದೂ ಹೇಳಿದ ಮಾತನ್ನು ಸಮಕಾಲೀನ ದಿಗಂಬರು ಸಮರ್ಥಿಸಿಕೊಂಡು ಬರುತ್ತಿದ್ದಾರೆ. ನಗ್ನವು ಕೇವಲ ಬಟ್ಟೆಯನ್ನು ಕಳಚುವುದನ್ನು ಸೂಚಿಸದೆ ಅದು ದೇಹ ಮತ್ತು ಮನಸ್ಸಿನ ನಗ್ನತೆಯನ್ನು ಸೂಚಿಸುತ್ತದೆಯೆಂದು ದಿಗಂಬರರ ಅಭಿಪ್ರಾಯ. ಮಹಾವ್ರತಗಳನ್ನು ಶ್ರದ್ಧೆಯಿಂದ ಪಾಲಿಸಿಕೊಂಡು ಬಂದ ದಿಗಂಬರರಲ್ಲಿ ಆತ್ಮನ ಅರಿವೂ, ಶಕ್ತಿಯೂ ಹೆಚ್ಚಿದಂತೆ ದೇಹದ ಮೇಲಿನ ಮೋಹವೂ ಕುಂದುತ್ತದೆ. ಅದು ಮನಸ್ಸಿನ ನೈರ್ಮಲ್ಯಕ್ಕೂ ಅನುಕೂಲವಾಗುತ್ತಿದೆಯೆಂದು ದಿಗಂಬರ ಮುನಿಗಳ ಅಭಿಪ್ರಾಯವಾಗಿದೆ. ಪವಿತ್ರ ಸ್ಥಾನಗಳ ಸಾಮ್ಯತ್ವದ ಬಗೆಗೆ ಶ್ವೇತಾಂಬರರು ಮತ್ತು ದಿಗಂಬರರಲ್ಲಿ ತಲೆದೂರಿದ ಭಿನ್ನಾಭಿಪ್ರಾಯಗಳಿಗೆ ಅವಕಾಶ ಮಾಡಿಕೊಡುವ ಇನ್ನೊಂದು ವಿಷಯವಾಗಿದೆ.

ಆರ್ಥಿಕ ಬಲ ಮತ್ತು ಸಂಖ್ಯಾಬಲದಿಂದ ದುರ್ಬಲವಾಗಿರುವ ದಿಗಂಬರರು ಶ್ವೇತಾಂಬರರ ಅತಿಕ್ರಮಣದಿಂದ ಮಾನಸಿಕ ನೋವಿಗೆ ಗುರಿಯಾಗಿರುವರು. ಅದರ ಮೇಲಿಂದ ಅವರಿಬ್ಬರ ನಡುವಿನ ಸಂಬಂಧಗಳು ತುಡಿತಕ್ಕೆ ಈಡಾಗಿ ಮುರಿದುಬಿದ್ದಿವೆಯೆಂದು ತಿಳಿಯಲಿಕ್ಕಾಗದು. ರಾಗದ್ವೇಷಾದಿಗಳನ್ನು ನಿರ್ಮೂಲನೆಗೊಳಿಸಿ ನಿರ್ವಾಣವನ್ನು

೩೪. ಲಿಂಗಾಯತ, ಜೈನ ಮತ್ತು ಬ್ರಾಹ್ಮಣ ಧರ್ಮಗಳು : ಮತಗಳ ಒಂದು ತೌಲನಿಕ ಅಧ್ಯಯನ, ಹಿರೇಮಲ್ಲೂರು ಈಶ್ವರನ್. ಪು. ೨೮೦ ರಿಂದ ೨೮೫.

ಸಂಪಾದಿಸಿದ ತೀರ್ಥಂಕರರ ಉಪದೇಶ, ತಾಳ್ಮೆ, ಸಹನೆಗಳು ಅವರನ್ನು ಜಿನಧರ್ಮದ ಹಾದಿಯಲ್ಲಿ ಕರೆದೊಯ್ಯುವವೆಂದು ಅವರಲ್ಲಿ ಅನ್ಯೋನ್ಯ ಸಂಬಂಧವನ್ನು ಬೆಳೆಸಿಕೊಂಡು ಬಂದುದನ್ನು ಸೂಚಿಸುತ್ತವೆ.

ಶ್ರಾವಕರು ಮತ್ತು ಶ್ರಮಣರ ನಡುವಿನ ಅನ್ಯೋನ್ಯ ಸಂಬಂಧಗಳು ಬೆಳೆದುಕೊಂಡು ಬರುವಲ್ಲಿ ತೀರ್ಥಂಕರರ ಆದರ್ಶ ಜೀವನಗಳು, ಅವುಗಳಿಗೆ ಸಂಬಂಧಿಸಿದ ಕಥೆಗಳು ಸ್ಮರಣೀಯ ಘಟನೆಗಳೇ ಮುಂತಾದವುಗಳು ತುಂಬ ನೇರವನ್ನೀಡುತ್ತ ಬಂದಿವೆ. ಪ್ರಸ್ತುತ ಕಾಲದಲ್ಲಿಯೂ ಅರಹಂತರ ಆದರ್ಶದ ಬದುಕುಗಳು ಜೈನ ಧರ್ಮೀಯರಲ್ಲಿ ಪರಸ್ಪರ ನಿಕಟ ಸಂಬಂಧವನ್ನು ಸಂವರ್ಧಿಸಿಕೊಂಡು ಬರುವುದಕ್ಕೆ ಸಹಾಯಕವಾಗಿದೆ.

ನಿವೃತ್ತಿ ಮೌಲ್ಯಗಳ ಬುನಾದಿಯ ಮೇಲೆ ಜೈನರ ಧಾರ್ಮಿಕ ಸಂಸ್ಕೃತಿಯು ರಚಿತವಾಗಿದೆ. ಸಮಾಜಕ್ಕೆ ಬೆನ್ನು ತಿರುಗಿಸಿದ ಮುನಿಧರ್ಮವು ವ್ಯಕ್ತಿ ಗಾಮಿಯಾದುದು ಅದರ ಇನ್ನೊಂದು ಲಕ್ಷಣವಾಗಿದೆ. ಶ್ರಾವಕರೆ ಆಗಿರಲಿ ಶ್ರಮಣರೆ ಆಗಿರಲಿ ಅವರಲ್ಲಿ ಪ್ರತಿಯೊಬ್ಬನೂ ತನ್ನ ಸ್ವಂತ ಕಾಲಮೇಲೆ ನಿಂತು ಸ್ವಪ್ರಯತ್ನ ಸಂತತ ಸಾಧನೆಯ ಮೂಲಕವೆ ತನ್ನ ಬದುಕಿನ ಗುರಿಯನ್ನು ಸಾಧಿಸಬೇಕೆಂದು ಮುನಿ ಸಂಸ್ಕೃತಿಯ ಸಂದೇಶವಾಗಿದೆ. ಹೀಗೆ ನಿವರ್ತಕಮಿ ವ್ಯಕ್ತಿಗಾಮಿಯೂ ಆಗಿರುವ ಮುನಿಯ ಧಾರ್ಮಿಕ ಸಂಸ್ಕೃತಿಯು ಶ್ರಾವಕ ಸಮಾಜದ ಮೇಲೆ ನಿಶ್ಚಿತವಾದ ಪ್ರಭಾವವನ್ನು ಬೀರಿದೆ. ಗುಂಪು ಗುಂಪುಗಳಲ್ಲಿ ವಿಭಜಿತವಾದ ಸಮಾಜವನ್ನು ಒಂದುಗೂಡಿಸಿ ಅದಕ್ಕೆ ಸಮಗ್ರತೆಯನ್ನು ದೃಢತೆಯನ್ನು ತಂದುಕೊಟ್ಟ ಶ್ರೇಯ ಮುನಿಗಳಿಗೂ ಮುನಿಗಳ ಮುನಿ ಮಹಾವೀರನದಾಗಿದೆ.

ಸರ್ವ ಪ್ರಾಣಿಗಳಲ್ಲಿ ಸಮಾನಭಾವವನ್ನು ಪ್ರತಿಪಾದಿಸಿಕೊಂಡು ಬಂದಿರುವ ಜೈನ ಧರ್ಮವು ಉತ್ತಮವಾದುದನ್ನು ಪ್ರತಿಪಾದಿಸುತ್ತಿರುವುದು ಅದು ಅನುಭವಿಸುತ್ತಿರುವ ಉಭಯ ಸಂಕಟ ಸಮಸ್ಯೆಗಳಲ್ಲಿ ಒಂದಾಗಿದೆ. ಸಮಾನ ಭಾವನೆಗೆ ಪರಿಚಿತರಾಗಿರುವವರು ಜೈನ ಧರ್ಮೀಯರು. ಕಡಿಮೆ ಸಂಖ್ಯೆಗಳಲ್ಲಿದ್ದರೂ ಅವರು ವಾಸ ಮಾಡಿಕೊಂಡಿರುವ ಸಮುದಾಯದೊಂದಿಗೆ ಒಂದು ಕಡೆ ತೆರೆದ ಮನಸ್ಸಿನೊಂದಿಗೆ ಹೊಂದಿಕೊಂಡು ಇನ್ನೊಂದು ಕಡೆ ತಮ್ಮ ಧರ್ಮದ ವಿಷಯದಲ್ಲಿ ಆವೃತ್ತ ಬದುಕನ್ನು ಬೆಳೆಸಿಕೊಂಡು ಬಂದಿರುವರು. ಅಹಿಂಸೆಯು ಪರಧರ್ಮವಾಗಿದೆ. ಸತ್ಯವನ್ನು ಮಾತನಾಡು. ನಿನ್ನದಲ್ಲದನ್ನು ನಿರಾಕರಿಸು. ಸಂಯಮಿಯಾಗಿರು. ತಪ್ಪಿದ್ದನ್ನು ಒಪ್ಪಿಕೋ ಎಂಬ ವಿಚಾರಗಳನ್ನು ಜೈನ ಗೃಹಿಣಿಯು ಮನೆಯ ಮಕ್ಕಳಿಗೆ ತಿಳಿಹೇಳುವ ಮೂಲಕ ಉಳವೆಯಲ್ಲಿ ಅವರ ಚಾರಿತ್ರ್ಯದ ಪರಿಶುದ್ಧತೆಯನ್ನು ಸಾಧಿಸುವ ಪ್ರಯತ್ನಗಳ ಜೊತೆಗೆ ಹೊರಗೆ ಉಪಾಶ್ರಯದಲ್ಲಿ ಮೇಲಿಂದ ಮೇಲೆ ಹಬ್ಬ ಉತ್ಸವಗಳೇ ಮುಂತಾದ ಸಂದರ್ಭಗಳಲ್ಲಿ ಮುನಿಗಳ ಮತ್ತು ಸಾಧುಗಳ ಉಪದೇಶವು ಬೆಳೆಸುವ ಜೈನ ಶ್ರಾವಕ ಶ್ರಾವಿಕೆಯರ ಮನಸ್ಸಿನ ಮೇಲೆ ಧರ್ಮದ ವಿಷಯದಲ್ಲಿ ಅನನ್ಯತೆಯು ಚಿರಕಾಲ ನೆಲೆಸುವಂತೆ ಮಾಡಿದ ಪರಿಣಾಮಕಾರಿಯಾದ ಮಾಂತ್ರಿಕ ಶಕ್ತಿಯಾಗಿದೆ.

ತತ್ವ ಸಿದ್ಧಾಂತಗಳನ್ನು ಸಾರ್ವತ್ರಿಕವಾಗಿ ಮುಟ್ಟುವಂತೆ ಜೈನ ಧರ್ಮವು ನಡೆಸಿಕೊಂಡು ಬಂದಿದೆ. ಸಾರ್ವತ್ರಿಕವಾಗಿ ಜೈನರು ಧರ್ಮಾಚರಣೆ ಸಾಗಿ ಬರುವುದಕ್ಕೆ ಅವರ ಮುನಿವರ್ಗವೂ ಯಾವ ಮಾರ್ಪಾಡುಗಳನ್ನು ಹೊಂದದೆ ಶತಮಾನಗಳ ಪರ್ಯಂತ ಮುಂದುವರಿದು ಬಂದಿರುವ ಧರ್ಮಶಾಸ್ತ್ರವೂ ಮುಖ್ಯ ಕಾರಣವಾಗಿದೆ.

ಜೈನ ಧರ್ಮೀಯರನ್ನು ಶ್ರಾವಕ, ಶ್ರಾವಿಕೆ ಮತ್ತು ಮುನಿ, ಸಾಧ್ವಿ ಎಂದು ಎರಡು ವರ್ಗಗಳ ವಿಂಗಡಿಸಬಹುದಾದರೂ ಅವು ಒಂದೇ ರೇಖೆಯಲ್ಲಿ ಕಾಣಿಸಿಕೊಂಡ ಎರಡು ಗುಂಪುಗಳು. ಶ್ರಾವಕರಾಗಿದ್ದವ ಸೌಮ್ಯ ರೂಪದಲ್ಲಿ ಕೆಳಗಿನ ಆಚರಣೆಗಳನ್ನು ಕೈಕೊಳ್ಳಬೇಕು ಅವುಗಳೆಂದರೆ-

೧. ಐದು ಮಹಾವೃತ (ಅಹಿಂಸೆ, ಸತ್ಯ, ಅಸ್ತೇಯ, ಬ್ರಹ್ಮಚರ್ಯ ಮತ್ತು ಅಪರಿಗ್ರಹ)

೨. ಏಳು ಶೀಲ ವೃತ, (ದಿಗ್ವ್ರತ, ದೇಶವ್ರತ, ಅನರ್ಥದಂಡವ್ರತ, ಸಾಮಾಯಿಕ ಪ್ರೋಷಾದ್ಯೋಪವಾ ಉಪಭೋಗ-ಪರಿಭೋಗ-ಪರಿವಾಣ ಹಾಗೂ ಅತಿಥಿ ಸಂವಿಭಾಗ)

೩. ಹನ್ನೊಂದು ಪ್ರತಿಮಾ (ದರ್ಶನ, ವ್ರತ, ಸಾಮಾಯಿಕ, ಪ್ರೋಕ್ಷದ್ಯಾಪವಾಸ, ಸಚಿತ್ ತ್ಯಾಗ, ರಾತ್ರಿ-ಭು ತ್ಯಾಗ, ಬ್ರಹ್ಮಚರ್ಯ, ಆರಂಭತ್ಯಾಗ, ಪರಿಗ್ರಹ ತ್ಯಾಗ, ಅನುಮತಿ ತ್ಯಾಗ, ಬದ್ದಿಷ್ಠ ತ್ಯಾಗ)

೪. ಆರು ದೈನಂದಿನ ಆಚರಣೆಗಳು (ದೇವಪೂಜೆ, ಗುರೂವಾಸ್ತಿ, ಸ್ವಾದ್ಯಾಯ, ಸಂಯಮ, ತಪ ಮ ದಾನ)

ಮೇಲಿನ ವ್ರತಾಚರಣೆಗಳಲ್ಲಿ ಮೊದಲನೆಯದಾಗಿರುವ ಮಹಾವೃತಗಳ ಪಾಲನೆಯನ್ನು ಕಠೋರವ ಆಚರಿಸಿಕೊಂಡು ಹೋಗುವುದಕ್ಕೆ ಶ್ರಾವಕರಿಗೆ ಆಗುವುದಿಲ್ಲ. ಏಕೆಂದರೆ ಅವರು ಪ್ರಾಪಂಚಿಕರಾಗಿರುವುದರಿ ಅವರ ದೈನಂದಿನ ಬದುಕನ್ನು ಸಾಗಿಸಿಕೊಂಡು ಹೋಗುವುದಕ್ಕೆ ಆಗುವುದಿಲ್ಲ. ಆದ್ದರಿಂದ ಅವರು ಮಹಾವ್ರತಗಳ ಅಣುವ್ರತ (ಸಣ್ಣ ವ್ರತ)ಗಳೆಂದು ತಿಳಿದು ಆಚರಿಸಬೇಕೆಂದು ಶ್ರಾವಕ ಧರ್ಮದ ಉಪದೇಶವಾಗಿದೆ. ಶೀಲವ್ರತ ಮಹಾವ್ರತಾಚರಣೆಗೆ ನೆರವಾಗುವವಲ್ಲದೆ ಅವು ಶ್ರಾವಕರನ್ನು ಶ್ರಮಣ ಮಾರ್ಗದಲ್ಲಿ ಕರೆದೊಯ್ ಉಪಯುಕ್ತವಾಗುವವು.

ಶ್ರಾವಕ ಜೀವನವನ್ನು ಹನ್ನೊಂದು ಹಂತವಾಗಿ ವಿಭಜಿಸಿದ್ದು ಒಂದೊಂದು ಹಂತದಲ್ಲಿ ಪ್ರತಿಮಾವ್ರತವ ಆಚರಿಸುತ್ತ ಅವೆಲ್ಲವನ್ನು ಕ್ರಮೇಣವಾಗಿ ಹೆಚ್ಚು ಕಾಲ ಆಚರಿಸುತ್ತ ಬರುವ ಶ್ರಾವಕರು ಮುನಿಗಳ ದೃಷ್ಟಿಯ ಅವರ ಜೀವನ ವಿಧಾನವನ್ನು ಅಳವಡಿಸಿಕೊಳ್ಳುವ ಹಂತಕ್ಕೆ ಬಂದು ಮುಟ್ಟುವರು. ಹನ್ನೊಂದು ಪ್ರತಿಮೆಗಳ ಆಚರಿಸುವ ಶ್ರಾವಕರನ್ನು ಶ್ವೇತಾಂಬರರು ಮುನಿಗಳೆಂದೇ ಪರಿಗಣಿಸಿದರೆ, ಅವರು ಮುನಿಗಳಂತೆ ಕಾಣು ಎಂದು ದಿಗಂಬರರು ತಿಳಿಯುತ್ತಾರೆ. ಕೊನೆಯ ಎರಡೂ ವ್ರತಗಳು ಶ್ರಾವಕರ ಮನಸ್ಸನ್ನು ಹದಗೊ ಪರಿಶುದ್ಧತೆಯ ದಾರಿಯಾಗಿರುವ ಮುನಿ ಮಾರ್ಗದಲ್ಲಿ ಕೈಹಿಡಿದು ಕರೆದುಕೊಂಡೊಯ್ಯುವುದಕ್ಕೆ ಯಥೋ ಸಾಧನಗಳಾಗಿವೆ.

ಮೇಲಿನ ವ್ರತಾಚರಣೆಗಳನ್ನು ಆಚರಿಸುವ ಶ್ರಾವಕರು ಶ್ರಮಣ ದೀಕ್ಷೆಯನ್ನು ಪಡೆಯುವು ಅರ್ಹತೆಯುಳ್ಳವರಾಗಿರುತ್ತಾರೆ. ಶ್ರಾವಕರ ಹಂತದಲ್ಲಿ ಸೌಮ್ಯವೂ ಶ್ರಮಣರ ಮಟ್ಟದಲ್ಲಿ ಕಠೋರವೂ, ವಿಸ್ತೃ ಆದ ಆಚರಣೆಗಳಾಗಿರುವವು ಯಾವುದೇ ತಪ್ಪುಗಳನ್ನು ಮಾಡದೆ ಕಠೋರವಾಗಿ ಆಚರಿಸಿಕೊಂಡು ಬ

ಆಧಾರದ ಮೇಲೆ ಮುನಿಗಳ ಗುಂಪನ್ನು ಜೈನ ಧರ್ಮವು ಎರಡು ವರ್ಗವಾಗಿ ವಿಂಗಡಿಸಿದ್ದು ಅವುಗ ಮೊದಲನೆಯದನ್ನು ಶ್ರೇಷ್ಠ ಮಟ್ಟದ ಗುಂಪೆಂದು ಆ ಗುಂಪಿಗೆ ಒಳಗಾದವರನ್ನು 'ಜಿನಕಲ್ಪ' ಸಾಧುಗಳೆಂ ಎರಡನೆಯ ಗುಂಪಿನವರನ್ನು 'ಸ್ಥಾವರಕಲ್ಪಿ' ಸಾಧುಗಳೆಂದು ಕರೆಯುತ್ತಾರೆ.[೩೫] ಮುನಿಗಳನ್ನುದ್ದೇಶಿಸಿ ರಚಿತವಾಗಿ ವ್ರತಗಳ ಆಧಾರದ ಮೇಲೆ ಶ್ರೇಷ್ಠ, ಮಧ್ಯಮ ಮತ್ತು ಕೆಳಗಿನ ಮಟ್ಟದ ಮುನಿಗಳೆಂದೂ ಶ್ರೇಷ್ಠ ಮುನಿಗಳಾದವ ನಿರ್ಗಂಥಿಗಳೆಂದೂ ಮಧ್ಯಮ ಮಟ್ಟದಲ್ಲಿರುವವರನ್ನು ಐಲಕರೆಂದೂ, ಕೆಳಗಿನ ಮಟ್ಟದಲ್ಲಿರುವವರನ್ನು ಕ್ಷುಲ್ಲಕರೆಂ ದಿಗಂಬರರು ಕರೆದರೆ ಶ್ವೇತಾಂಬರರು ಅನುಕ್ರಮವಾಗಿ ಅವರನ್ನು ಆಚಾರ್ಯ, ಸಾಧು ಮತ್ತು ಯತಿಗಳೆ ಹೆಸರಿಸುತ್ತಾರೆ. ಆದರೆ ವಾಸ್ತವಿಕವಾಗಿ ಶ್ರೇಷ್ಠಮಟ್ಟದಲ್ಲಿದ್ದವರನ್ನು ಎರಡು ಗುಂಪಿನವರು ಆಚಾರ್ಯರೆಂ ಕರೆಯುವ ರೂಢಿ ಪ್ರಚಲಿತದಲ್ಲಿರುತ್ತದೆ. ಒಟ್ಟಿನಲ್ಲಿ ಇವರೆಲ್ಲರೂ ಆಚರಿಸುವ ವ್ರತಗಳು ದಿಗಂಬರ ಧ ಹೀಗಿವೆ.–

೧. ಐದು ಮಹಾವ್ರತಗಳು

೨. ಐದು ಸಮಿತಿಗಳು

೩. ಐದು ಇಂದ್ರೀಯ ನಿಗ್ರಹಗಳು

೪. ಐದು ಅವಶ್ಯಕವಾದ ಆಚರಣೆಗಳು

೫. ಕೇಶಮೋಚನ, ನಗ್ನತೆ, ಸ್ನಾನ ನಿರೂಧ, ಬಿರುಸಾದ ನೆಲದ ಮೇಲೆ ಮಲಗುವುದು, ಬಾಯಿ ತೊಳೆದುಕೊಳ್ಳದೆ ಇರುವುದು ಎದ್ದು ನಿಂತುಕೊಂಡು ಆಹಾರ ದಾನ ಸ್ವೀಕರಿಸುವುದು ಮತ್ತು ದಿನಕೆ ಮಾತ್ರ ಊಟ ಮಾಡುವುದು.

ಒಂದು ವರ್ಗದಿಂದ ಇನ್ನೊಂದು ವರ್ಗಕ್ಕೆ ಸಹಜವಾಗಿ ಸಂಚರಿಸಿಕೊಂಡು ಹೋಗುವಲ್ಲಿ ನೆರವಾ ಧರ್ಮವಾಗಿದ್ದು ಅದನ್ನು ಒಂದು ದೃಷ್ಟಿಯಿಂದ 'ಮುನಿಧರ್ಮ' ಇಲ್ಲವೆ 'ಶ್ರಮಣ ಧರ್ಮ'ವಾಗಿದೆಯೆಂದು ಕರೆಯಬಹುದಾ ಈ ಧರ್ಮದಲ್ಲಿ ಗುಣ ಹಾಗೂ ಶೀಲಕ್ಕೆ ಹೆಚ್ಚು ಪ್ರಾಶಸ್ತ್ಯವನ್ನಿತ್ತಿರುವುದು ಸ್ಪಷ್ಟವಾಗಿ ವ್ಯಕ್ತವಾಗಿದೆ. ಅದು ಡಂಭಾಚ ಪೊಳ್ಳ ಪ್ರದರ್ಶನಕ್ಕೆ ಹುಸಿ ನಡತೆಗೆ ಅವಕಾಶವನ್ನು ಆಚರಿಸಿಕೊಂಡು ಬರುವಲ್ಲಿ ಯಾರೂ ಲೋಪದೋಷಗ ತೋರುತ್ತಾರೋ ವಂಚಕರು ಮತ್ತು ಆಷಾಢಭೂತಿಗಳು ಆಗಿರುತ್ತಾರೊ ಅಂತಹವರನ್ನು ನಿಂ ಪಾಲನೆಯ ಆಧಾರದ ಅಳತೆಗೋಲಿನಿಂದ ಶ್ರಾವಕ ಮತ್ತು ಶ್ರಮಣರಿಂದೊಡಗೂಡಿದ 'ಚತುಸ್ಸಂಘ'ವು ಗುರ ನಿಯಂತ್ರಿಸುತ್ತದೆ.[೩೬]

ಗುಣ ಸಂಪಾದನೆ ಮತ್ತು ಆಚರಣೆಗಳ ಮೇಲೆ ಭದ್ರವಾಗಿರುವ ಜೈನರ ನೈತಿಕ ನಡತೆ ಹಾಗೂ ಶೀಲ ಒಟ್ಟು ಸಮುದಾಯದ ಮೇಲೆ ಅವರ ದೃಷ್ಟಿ ಮೌಲ್ಯಗಳ ಮೇಲೆ ನಿಚ್ಚಳವಾದ ಪ್ರಭಾವವನ್ನು ಮೂಡಿಸುತ್ತ

---

೩೫. ಅದೇ ಕೃತಿಯ ೩೨೦ ಪುಟದಲ್ಲಿ ಉಲ್ಲೇಖವಿದೆ.

೩೬. ಜೈನ ಸಂಸ್ಕೃತಿ ಮತ್ತು ಸಿದ್ಧಾಂತಗಳು, ಡಾ. ಪಿ. ಕೆ. ಖಂಡೋಬಾ, ಪು. ೬೮.

ಕಾರ್ಯದಲ್ಲಿ ಜೈನ ಮುನಿ ಸಂಸ್ಕೃತಿ ತನ್ನ ನಿಚ್ಚಳವಾದ ಪ್ರಭಾವವನ್ನು ಐತಿಹಾಸಿಕವಾಗಿ ಮೂಡಿಸಿಕೊಂಡು ಬಂದಂತೆ ರಕ್ಷಿಸುತ್ತಲೂ ಬಂದಿದೆ.

ಬಾಹ್ಯ ಗುರುತುಗಳು ಗುಣಸಾಧನೆ ಗುಣಗಳ ಆಚರಣೆಗೆ ಹೆಚ್ಚು ಮಹತ್ವವನ್ನು ಕೊಟ್ಟವರು ದಿಗಂಬರರು ಎಲ್ಲಾ ಬಾಹ್ಯ ಗುಣಗಳಲ್ಲಿ ಮಹತ್ವದ್ದಾಗಿರುವ ನಗ್ನತೆಯು ಜೈನಧರ್ಮದ ಮೂಲ ಲಕ್ಷಣವಾಗಿದೆಯೆಂದು ಅವರ ಖಚಿತ ನಂಬುಗೆಯಾಗಿದೆ.

ನಗ್ನತೆಯ ವಿಷಯದಲ್ಲೂ ಅವರು ವಿಶೇಷ ಪ್ರಾಶಸ್ತ್ಯವನ್ನು ಕೊಟ್ಟಿದ್ದು ಬಾಹ್ಯದ ಪ್ರದರ್ಶನಕ್ಕಾಗಿರದೆ ದೇಹದ ಮೋಹವನ್ನು ಕಳಚಿ ಹೃದಯವನ್ನು ಬರಿದು ಮಾಡಿ ಪರಿಶುದ್ಧ ದಾರಿಯಲ್ಲಿ ಸಂಚಾರ ಕೈಕೊಂಡ ಅವರ ಆಂತರಿಕ ನೈರ್ಮಲ್ಯವನ್ನು ಸಾಂಕೇತಿಕವಾಗಿ ಸೂಚಿಸುತ್ತದೆ. ನಗ್ನವು ಸೂಚಿಸುತ್ತಿರುವ ಮೌಲ್ಯಕ್ಕೆ ಅವರಿಗೆ ನೆರವಾಗಿ ಬಂದ ಇನ್ನೆರಡು ಬಾಹ್ಯದ ಗುರುತುಗಳಲ್ಲಿ ಪಿಂಛ ಮತ್ತು ಕಮಂಡಲಗಳಿಗೆ ಪ್ರಾಧಾನ್ಯವಿರುವುದು. ಪಿಂಛವು ಅಹಿಂಸಾವ್ರತಕ್ಕೆ ಅನುಕೂಲವಾದ ಉಪಕರಣವಾಗಿದೆ. ಹುಳುಹುಪ್ಪಡಿಗಳಿಗೆ ಆಗಬಹುದಾದ ಜೀವಹಾನಿ ನೋವು ಹಿಂಸೆಗಳನ್ನು ತಡೆಗಟ್ಟುವುದಕ್ಕೆ ಅವರು ಪಿಂಛವನ್ನು ಬಳಸುವರು ಕೂಡುವ ಸ್ಥಳದಲ್ಲಿ ಪಿಂಛದಿಂದ ಮೆಲ್ಲನೆ ಹಸನು ಮಾಡಿ ಕುಳಿತುಕೊಳ್ಳುವರು.

ಕಮಂಡಲವನ್ನು ದೇಹದ ಪರಿವಾರ್ಜನೆಗೆಂದೂ, ಶೌಚದ ಉದ್ಧೇಶಕ್ಕೆಂದೂ ಅವರು ಉಪಯೋಗಿಸಿಕೊಳ್ಳುವುದುಂಟು. ಹೀಗೆ ಪಿಂಛ ಮತ್ತು ಕಮಂಡಲಗಳೆರಡೂ ನಿಷ್ಪರಿಗ್ರಹದ ಚಿಹ್ನೆಗಳಾಗಿವೆ. ಹನ್ನೊಂದು ಪ್ರತಿಮಾಗಳಲ್ಲಿ ಕೊನೆಯದಾಗಿರುವ ವ್ರತವು ಅವೆರಡೂ ಉಪಯೋಗಗಳನ್ನು ಗೌರವದಿಂದ ರಕ್ಷಿಸಬೇಕೆಂದು ಆದೇಶಿಸುವ ಆಚರಣೆಯಾಗಿದೆ. ಅವುಗಳನ್ನು ತಮ್ಮ ಬಳಿ ಇಟ್ಟುಕೊಂಡವರು ಅವುಗಳಿಗಿರುವ ಗೌರವ ಸ್ಥಾನವನ್ನು ಅಲಕ್ಷದಿಂದ ಕಾಣುತ್ತಾರೋ ಸಾಂಕೇತಿಕವಾಗಿರುವ ಆ ಉಪಕರಣಗಳನ್ನು ದುರುಪಯೋಗ ಪಡಿಸಿಕೊಳ್ಳುತ್ತಾರೋ ಅವರು ಪಾಪಕ್ಕೆ ಗುರಿಯಾಗುತ್ತಾರೆಂದು ಜಿನಶಾಸನವು ಹೇಳುತ್ತದೆ.

ನಗ್ನ್ಯ ಪಿಂಛ ಮತ್ತು ಕಮಂಡಲಗಳೊಂದಿದ್ದವರನ್ನು ದಿಗಂಬರ ಮುನಿಗಳೆಂದು ಜೈನ ಸಾಧುಗಳಲ್ಲಿ ಕೆಲವರನ್ನು ಅವರು ಉಪಯೋಗಿಸುವ ಬಟ್ಟೆಯಿಂದ ಗುರುತು ಹಿಡಿಯಲು ಬರುತ್ತದೆ. ಮೂರ್ತಿ ಪೂಜಕರಾದ ಶ್ವೇತಾಂಬರದಲ್ಲಿ ಮಂದಿರಮಾರ್ಗಿಗಳು, ಹುಳು ಹುಪ್ಪಡಿಗಳು ಉಸಿರಾಡಿಸುವಾಗ ಶ್ವಾಸಕೋಶವನ್ನು ಸೇರಿ ಹಿಂಸೆಗೆ ಈಡಾಗದಂತೆ ಮುಖವನ್ನು ವಸ್ತ್ರದ ತುಂಡನ್ನು ಕಟ್ಟಿಕೊಳ್ಳುವರಲ್ಲದೆ ಹಳದಿಯ ಬಟ್ಟೆಯನ್ನು ಧರಿಸುವರು, ಸಾಧ್ವಿಯರು ಆರ್ಯಿಕೆಯರು ಸಾಮಾನ್ಯವಾಗಿ ಬಿಳಿಯ ಸೀರೆಯನ್ನುಟ್ಟುಕೊಳ್ಳುವರು.

ಒಟ್ಟಿನಲ್ಲಿ ಜಿನಧರ್ಮದ ದ್ಯೋತಕವಾಗಿರುವ ಬಾಹ್ಯ ಗುರುತುಗಳು ಕಡಮೆಯಿದ್ದರೂ ಅವು ಮುನಿಗಳನ್ನು ಸಾಧ್ವಿಯರನ್ನು ಗುರುತಿಸುವಲ್ಲಿ ಜೈನರಿಗೆ ಮಾತ್ರವಲ್ಲ. ಜೈನರಲ್ಲದವರಿಗೂ ಉಪಯುಕ್ತವಾಗಿವೆ. ಅವರನ್ನು ಗುರುತಿಸುವುದಕ್ಕಷ್ಟೇ ಅಲ್ಲ ಅವರೊಂದಿಗೆ ಗೌರವ ಮರ್ಯಾದೆಯ ಸಂಬಂಧವನ್ನು ಅನನ್ಯತ್ವವನ್ನು ಹೆಚ್ಚಿಸಿಕೊಳ್ಳುವುದಕ್ಕೂ

ಅವರ ಜೀವನ ಪದ್ಧತಿ ಮತ್ತು ಮೌಲ್ಯಗಳನ್ನು ಅರ್ಥಮಾಡಿಕೊಳ್ಳುವಲ್ಲಿ ಅವು ಸಹಾಯಕಾರಿಯಾಗಬಲ್ಲ ಸಾಂಕೇತಿಕ ಉಪಕರಣಗಳಾಗಿವೆ.[೩೭]

ಜೈನ ಧರ್ಮದ ಸಾಮಾಜಿಕ ಮತ್ತು ಸಾಂಸ್ಥಿಕ ಪರಿಮಾಣಗಳು ಅದರ ಅನುಯಾಯಿಗಳು ರಚಿಸಿದ ತೀರ್ಥಂಕರರ ದೇವಾಲಯಗಳು, ಚೈತ್ಯಾಲಯ ಮತ್ತು ಗುಹೆಗಳು ಅವರು ನಿರ್ಮಾಣ ಮಾಡಿದ ಶಿಲ್ಪ–ಚಿತ್ರಕಲೆ ಮುಂತಾದವುಗಳಲ್ಲಿ ದೇಶಾದ್ಯಂತ ಕಾಣಿಸಿಕೊಂಡಿವೆ. ತೀರ್ಥಂಕರರು ಸಮಾಧಿಯನ್ನು ಹೊಂದಿದ ಸ್ಥಳಗಳು ಅವರು ಹುಟ್ಟಿದ ತಪಗೈದ ಸ್ಥಳಗಳು ಜೈನರಿಗೆ ಪವಿತ್ರವಾದವುಗಳಾಗಿವೆ. ತಾನು ಜೀವಿಸಿದ್ದ ಕಾಲದಲ್ಲಿ ತಾನೊಬ್ಬನೆ ಅಲ್ಲ ತನ್ನ ತಂದೆ–ತಾಯಿಯರು, ಹೆಂಡತಿ ಮಕ್ಕಳು ಪ್ರತಿಯೊಬ್ಬರು ಆ ಪವಿತ್ರ ಸ್ಥಳಗಳನ್ನು ಸಂಪರ್ಕಿಸಿ ಜೈನ ಧರ್ಮದಲ್ಲಿ ಪುಣ್ಯ ಭಾಗಿಗಳಾಗಬೇಕೆಂಬ ಅಪೇಕ್ಷೆಯನ್ನು ಪ್ರತಿಯೊಬ್ಬ ಜೈನನೂ ಅಪೇಕ್ಷಿಸುವನು. ಐತಿಹಾಸಿಕ ಕಾಲದಿಂದಲೂ ಮುನಿ ಧರ್ಮದ ದಾರಿಯಲ್ಲಿ ನಡೆದು ಬಂದವರಲ್ಲಿ ಪ್ರತಿಯೊಬ್ಬನೂ ಏನಿಲ್ಲೆಂದರೂ ಸಮ್ಮೇದ ಶಿಖರವನ್ನು ಸಂಪರ್ಕಿಸಿ ಅಲ್ಲಿನ ತೀರ್ಥಂಕರರ ಸಮಾಧಿಗಳಿಗೆ ವಂದನೆಯನ್ನು ಅರ್ಪಿಸಿ ಬಂದಿರುವರು. ಬಿಹಾರ ರಾಜ್ಯದಲ್ಲಿರುವ ಸಮ್ಮೇದ ಶಿಖರದಲ್ಲಿರುವ ಪಾರ್ಶ್ವನಾಥ ಬೆಟ್ಟದ ಮೇಲೆ ೨೦ ಜನ ತೀರ್ಥಂಕರರು ನಿರ್ವಾಣವನ್ನು ಪಡೆದ ಭೂಮಿಯು ಜೈನ ಸಮಾಜಕ್ಕೆಲ್ಲ ಅತ್ಯಂತ ಪವಿತ್ರದ ಕ್ಷೇತ್ರವಾಗಿದೆ.

ಒಟ್ಟಿನಲ್ಲಿ ಜೈನ ದೇವಾಲಯಗಳು ಶಿಲ್ಪದಲ್ಲಿ ಕಂಡರಿಸಿದ ತೀರ್ಥಂಕರರ ಮೂರ್ತಿಗಳು ಬಂಡೆಗಲ್ಲಿನಲ್ಲಿ ಕೆತ್ತಿದ ಗುಹೆಗಳು ಅವುಗಳಲ್ಲಿ ಚಿತ್ರಿತವಾದ ಬಣ್ಣ ಬಣ್ಣದ ಚಿತ್ರಗಳು ಜೈನರ ಧಾರ್ಮಿಕ ಇತಿಹಾಸ ಜೀವಂತವಾಗಿ ಚಿತ್ರಿಸುವ ಕೌಶಲಕ್ಕೂ ಅವರಲ್ಲಿ ಧರ್ಮಾನುರಾಗವನ್ನು ಹೆಚ್ಚಿಸುವುದಕ್ಕೂ ನೆರವಾಗಿವೆ. ಅವುಗಳಲ್ಲಿ ಮೂಡಿಬಂದಿರುವ ಮುನಿ ಸಂಸ್ಕೃತಿ ಧಾರ್ಮಿಕ ಇತಿಹಾಸ ತತ್ವದರ್ಶನ ಕಲಾಸೌಂದರ್ಯಗಳು ಜಿನಧರ್ಮದ ಸಾತತ್ಯಕ್ಕೂ ನೆರವಾಗಿವೆ.

ಮುನಿಯ ಸ್ಥಾನವು ಆವೃತ್ತವಾಗಿದ್ದು ಅದು ಉತ್ತಮರಿಗೆ ಮಾತ್ರ ತನ್ನ ಬಾಗಲನ್ನು ತೆರೆದಿದೆ. ಮುನಿಯಾಗುವುದಕ್ಕೆ ಎಲ್ಲಾರಿಗೂ ಬರುವುದಿಲ್ಲವೆಂದೂ ಶ್ವೇತಾಂಬರರು ಹೇಳಿದರೆ ದಿಗಂಬರರು ಹೀನ ಜಾತಿಯವರಿಗೆ ಮುನಿ ದೀಕ್ಷೆಯನ್ನು ಕೊಡಲಿಕ್ಕೆ ಬರುವುದಿಲ್ಲವೆಂದು ಶಾಕ್ತಾಯನನು ಸ್ತ್ರೀ ನಿರ್ವಾಣ ಪ್ರಕರಣದಲ್ಲಿ ಹೇಳಿರುವನು.

ಒಡಲ ದಂಡನೆಯನ್ನು ಬೋಧಿಸುವ ಬದುಕಿನ ಅಸ್ತಿತ್ವಕ್ಕೆ ನೆರವಾಗಬಲ್ಲ ಪ್ರಾಥಮಿಕ ಸೌಕರ್ಯಗಳನ್ನು ನಿರಾಕರಿಸುವ ಮುನಿಯ ಸ್ಥಾನವನ್ನು ಜೈನರು ಯಾಕೆ ಹುಡುಕಿಕೊಂಡು ಹೋಗುತ್ತಾರೆಂಬ ಪ್ರಶ್ನೆಯ ಜೊತೆಗೆ ಮುನಿಯು ಹುಟ್ಟಿನಿಂದ ಆಗುತ್ತಾನೆಯೆ ಅಥವಾ ಇತರ ಒಲುವು ಆಸರೆಗಳಿಂದ ಪ್ರಚೋದಿತವಾಗುತ್ತಾನೆಯೇ ಎನ್ನುವುದನ್ನು ಚರ್ಚಿಸುವುದು ಅಗತ್ಯವಿದೆ. ಮುನಿಗಳ ವಾಸ್ತವಿಕ ಅನುಭವದಲ್ಲೆ ಕುಟುಂಬ ಮತ್ತು ಸಂಸಾರಗಳೆರಡೂ ಮುನಿತ್ವದ ಹುಟ್ಟಿಗೆ ಮುಖ್ಯ ಕಾರಣವಾಗಿವೆ. ಸಂನ್ಯಾಸ್ಥದ ಸ್ವೀಕಾರಕ್ಕೆ ಪುರುಷನಿಗೆ ದೊರೆಯುವ ಪುರಸ್ಕಾರವನ್ನು

೩೭. ಅದೇ ಕೃತಿಯ ಪುಟ ೭೧ರಲ್ಲಿ ಉಲ್ಲೇಖವಿದೆ.

ಮಹಿಳೆಗೆ ಜೈನ ಕುಟುಂಬಗಳು ಸಹಜವಾಗಿ ಕೊಡುವುದಿಲ್ಲ. ಈ ದೃಷ್ಟಿಯಲ್ಲಿ ಅದು ಪುರುಷ ಪ್ರಧಾನವಾಗಿದೆ. ಯಾವ ಕುಟುಂಬಗಳಲ್ಲಿ ತಾಯಿ, ದೊಡ್ಡವ್ವ, ಅಕ್ಕ ಮುಂತಾದ ಹತ್ತಿರದ ಬಂಧುಗಳು ಸನ್ಯಾಸಿಯಾಗಿರುತ್ತಾರೋ ಅವುಗಳಲ್ಲಿ ಪುರುಷರು ವಿಶೇಷವಾಗಿ ಮಹಿಳೆಯರು ಸಂನ್ಯಾಸ್ಥವನ್ನು ಹುಡುಕಿಕೊಂಡು ಹೋಗುವ ಅವಕಾಶಗಳು ಇರುತ್ತವೆ.

ಮುನಿಧರ್ಮದತ್ತ ಒಲಿಯುವ ಪ್ರವೃತ್ತಿಯ ಸಂಖ್ಯೆಗಳು ಬಾಲ್ಯದ ಮೊದಲ ೧೨ ವರುಷಗಳಲ್ಲಿ ಕಂಡು ಬರುತ್ತದೆ. ಅಷ್ಟೋತ್ತಿಗೆ ವಿಶೇಷವಾಗಿ ತಂದೆ-ತಾಯಿ ಬಂಧು ಮತ್ತು ಸಂಚಾರಿ ಮುನಿಗಳ ಪ್ರಭಾವವು ಮುನಿತ್ವವನ್ನಪೇಕ್ಷಿಸಿದ ಅಭ್ಯರ್ಥಿಯ ಮೇಲೆ ನಿಚ್ಚಳವಾಗಿ ಪ್ರಭಾವವನ್ನುಂಟು ಮಾಡುತ್ತದೆ. ಬಂಧು ಮತ್ತು ಮುನಿಗಳು ಇಬ್ಬರೂ ಒದಗಿಸಿದ ಆದರ್ಶದ ಮಾದರಿಯ ಚೌಕಟ್ಟಿನಲ್ಲಿ ಸೇರಿಕೊಂಡಿರುವ ಅಭ್ಯರ್ಥಿಗೆ ಪ್ರಭಾವ ಬೀರುತ್ತವೆ.

ಕುಟುಂಬ ಮುಖ್ಯವಾಗಿ ತಂದೆ-ತಾಯಿಯರು ಮುನಿ, ಸಂಘ ಮುಂತಾದ ಸಾಮಾಜಿಕ ಗುಂಪುಗಳು ಸಂನ್ಯಾಸ್ಥದ ಆದರ್ಶ ಮತ್ತು ಆಪೇಕ್ಷೆಗಳಿಗೆ ಮುಖ್ಯ ಕಾರಣವಾಗಿವೆ ಎನ್ನುವುದನ್ನು ಸಮರ್ಥಿಸುತ್ತವೆ. ಸಂನ್ಯಾಸ್ಥದ ಹುಟ್ಟಿಗೆ ಅಭ್ಯುದಯಕ್ಕೆ ತಕ್ಕ ಪರಿಸರವನ್ನು ಸಂಸ್ಕಾರವನ್ನು ಒದಗಿಸಿಕೊಡುವಲ್ಲಿ ಅವು ಪ್ರಬಲ ಶಕ್ತಿಗಳಾಗಿವೆ. ಅವುಗಳೊಂದಿಗೆ ಸೇರಿಕೊಂಡ ಇನ್ನೊಂದು ಪ್ರಬಲ ಕಾರಣವನ್ನು ಮುನಿಗಳು ಕೊಡುತ್ತಾರೆ. ಅದೆಂದರೆ ಪೂರ್ವಜನ್ಮದ ಸಂಸ್ಕಾರ ಹಿಂದಿನ ಜನ್ಮದಲ್ಲಿ ತಾನು ಮಾಡಿದ ಸತ್ಕಾರ್ಯವು ಈ ಜನ್ಮದಲ್ಲಿ ಮುನಿಯಾಗುವುದಕ್ಕೆ ಕಾರಣವಾಗಿದೆಯೆನ್ನುವುದು ಎಲ್ಲಾ ಮುನಿಗಳ ಅಭಿಪ್ರಾಯವಾಗಿದೆ. ಮುನಿ ಸಂಪ್ರದಾಯವಾದದ ಅಸ್ತಿತ್ವ ಮತ್ತು ಬೆಳವಣಿಗೆಯು ನೈಸರ್ಗಿಕವೂ, ವ್ಯಕ್ತ್ಯಾತೀತವೂ ಆದ ನಿಯಮದಿಂದ ನಿರ್ಧರಿತವಾಗಿರುತ್ತದೆ. ಈ ನಿಯಮವು ಪ್ರಕೃತಿ ತತ್ವಕ್ಕಿಂತ ಭಿನ್ನವಾಗಿದ್ದು ಅದು ಪ್ರಕೃತಿಯಲ್ಲಿ ಕಾರಣಾತ್ಮಕವಾದಕ್ಕನುಗುಣವಾಗಿ ತನ್ನ ಕೆಲಸವನ್ನು ಮಾಡುತ್ತದೆ. ಆ ನಿಯಮವೇ ತಮ್ಮನ್ನು ಮುನಿ ಧರ್ಮದತ್ತ ಕರೆದು ತಂದಿತೆಂದೂ ಅದಕ್ಕೆ ಪ್ರಾಸಂಗಿಕವೆಂಬಂತೆ ಸರಿಯಾದ ಕೌಟುಂಬಿಕ ಪರಿಸರವು ನೆರವಾಗಿ ಬಂದಿತೆಂದೂ ಮುನಿಗಳ ವಿಚಾರವಾಗಿದೆ. ನಾನು ಕಂಡ ಜೈನ ಮುನಿಗಳಲ್ಲಿ ಜೀವನದಲ್ಲಿ ಜಿಗುಪ್ಸೆ, ಹಾನಿ, ದುಃಖ, ದ್ವೇಷಗಳೇ ಮುಂತಾದ ಭಾವನೆಗಳಲ್ಲಿ ಯಾವುದೊಂದೂ ತನ್ನ ಸಂನ್ಯಾಸ್ಥಕ್ಕೆ ಕಾರಣವಾಯಿತೆಂದೂ ತಿಳಿಸಲಿಲ್ಲ.

ಎಲ್ಲ ಧರ್ಮಗಳಲ್ಲಿಯೂ ಸಂನ್ಯಾಸತ್ವದ ಜೀವನವನ್ನು ವಹಿಸಿಕೊಳ್ಳುವ ಪೂರ್ವದಲ್ಲಿ ಸ್ನಾತಕನಾದವನು ತನ್ನ ಭವಿಷತ್ ಜೀವನದ ದೃಷ್ಟಿಕೋನ, ಮೌಲ್ಯಗಳನ್ನು ರೂಪಿಸಿಕೊಳ್ಳುವಲ್ಲಿ ತರಬೇತಿಯನ್ನು ಹೊಂದಬೇಕಾಗುತ್ತಿದೆಯಲ್ಲದೆ. ಸಮಾಜದೊಂದಿಗಿನ ತನ್ನ ಸಂಬಂಧಗಳನ್ನು ಕ್ರಮಪಡಿಸಿಕೊಳ್ಳುವುದನ್ನೂ ಕಲಿಯಬೇಕಾಗುತ್ತದೆ. ಈ ತರಬೇತಿ ಶಿಕ್ಷಣಗಳ ಅವಶ್ಯಕತೆಯನ್ನು ತಂದುಕೊಡುವುದಕ್ಕೆ ಅವು ನೇಮ ಕಟ್ಟಳೆಗಳನ್ನು ರಚಿಸಿಕೊಂಡಿದ್ದು ಕಂಡು ಬರುತ್ತವೆ. ಈ ಕಟ್ಟಳೆಗಳು ಮುನಿಗಳ ವಸ್ತ್ರ, ಆಹಾರ, ಸಂಚಾರ ವಾಸಸ್ಥಾನ, ಭಿಕ್ಷೆ ಮತ್ತು ಧಾರ್ಮಿಕ ಸಾಮಾಜಿಕ

ಆಚಾರಗಳನ್ನುದ್ದೇಶಿಸಿ ರಚಿತವಾಗಿದ್ದು ಅವು ಪಂಗಡ, ಉಪಪಂಗಡಗಳ ವ್ಯತ್ಯಾಸವನ್ನು ತಳೆದಿರುತ್ತವೆ.[೩೮] ಮುನಿದೀಕ್ಷೆಗೆ ಅರ್ಹವಾಗುವ ವ್ಯಕ್ತಿಯು ನಿಧಾನವೂ, ನಿಶ್ಚಿತವೂ ಆದ ಪ್ರಗತಿಯನ್ನು ಸಾಧಿಸಬೇಕಾಗುತ್ತದೆ. ಗ್ರಹಸ್ಥ ಹಾಗೂ ಶ್ರಮಣರು ಅಹಿಂಸಾ ಸತ್ಯ ಅಸ್ತೇಯ ಬ್ರಹ್ಮಚರ್ಯ ಮತ್ತು ಅಪರಿಗ್ರಹಗಳೆಂಬ ವ್ರತಗಳನ್ನು ಪಾಲಿಸಬೇಕಾಗುತ್ತದೆ. ದೈನಂದಿನ ವ್ಯವಹಾರದಿಂದಾಗಿ ಗೃಹಸ್ಥರಿಗೆ ಅವುಗಳನ್ನು ಸೌಮ್ಯರೂಪದಲ್ಲಿ ಮುನಿಯೋಗ ಬಯಸುವವರು ಉಗ್ರವಾಗಿ ಆಚರಿಸಬೇಕೆಂಬ ಆದೇಶವಿದೆ. ಸಾಮ್ಯರೂಪದಲ್ಲಿ ಆಚರಿಸುವವರನ್ನು ಅಣುವ್ರತಗಳೆಂದೂ ಕಠೋರ ರೂಪದಲ್ಲಿ ಆಚರಿಸುವವರನ್ನು ಮಹಾವ್ರತಿಗಳೆಂದೂ ಕರೆಯಲಾಗುವುದು. ಆರು ವ್ರತಗಳನ್ನು ನಿಷ್ಠೆಯಿಂದ ನಡೆಸಿಕೊಂಡು ಬಂದ ಶ್ರಾವಕನು ಶ್ರಮಣನಾಗುವ ಅರ್ಹತೆಯನ್ನು ಪಡೆಯುವನು. ಕ್ಷುಲ್ಲಕ ಮತ್ತು ಐಲಕ ದೀಕ್ಷೆಗಳೆಂಬ ಎರಡು ಬಗೆಯ ದೀಕ್ಷೆಗಳನ್ನು ಹಂತ ಹಂತವಾಗಿ ಪಡೆಯಬೇಕಾಗುವುದು. ದಿಗಂಬರ ಪಂಗಡದಲ್ಲಿ ಒಂದರ ಮೇಲೊಂದಾಗಿ ಇರುವ ಮೂರು ಹಂತಗಳಿಗೆ ಅನುಕ್ರಮವಾಗಿ ಕ್ಷುಲ್ಲಕ, ಐಲಕ ಮತ್ತು ನಿರ್ಗ್ರಂಥಗಳೆಂದೂ ಶ್ವೇತಾಂಬರದಲ್ಲಿರುವ ಹಂತಗಳನ್ನು ಆಕ್ರಮಿಸಿದವರಿಗೆ ಯತಿ, ಸಾಧು ಮತ್ತು ಆಚಾರ್ಯರೆಂದೂ ಕರೆಯಲಾಗುತ್ತದೆ. ಈ ಹಂತಗಳನ್ನು ಒಂದೊಂದಾಗಿ ಪಾಲಿಸಬೇಕೆಂಬ ನಿಯಮವಿದ್ದರೂ ಅವುಗಳಲ್ಲಿ ಒಂದನ್ನು ಎರಡನ್ನು ತಪ್ಪಿಸಿಕೊಳ್ಳಬಹುದಾಗಿದೆ.

ಮುನಿ ದೀಕ್ಷೆಯನ್ನು ಕೊಡುವ ಅಧಿಕಾರವು ನಿರ್ಗ್ರಂಥಿಗೂ ಆಚಾರ್ಯರಿಗೂ ಮಾತ್ರ ಇರುತ್ತದೆ. ಸಂನ್ಯಸ್ಥದ ಅಪೇಕ್ಷೆಯು ಬಲವತ್ತಾದಾಗ ಅದು ದೊರೆಯದೆ ಇದ್ದರೆ. ಅಭ್ಯರ್ಥಿಯು ತೀರ್ಥಂಕರರ ಮೂರ್ತಿಯನ್ನು ಚತುಸ್ಸಂಘವನ್ನು ಹುಡುಕಿಕೊಂಡು ಹೋಗುವನು. ಆದರೆ ಮುನಿ ದೀಕ್ಷೆಗೆ ಸಿದ್ಧನಾದವನು ಮುನಿಯಲ್ಲಿರಬೇಕಾದ ಗುಣಗಳನ್ನು ಸಂಪಾದಿಸಬೇಕಾಗುತ್ತದೆ. ದೀಕ್ಷಾ ಗುಣವು ಸಾಮಾನ್ಯವಾಗಿ ಅಭ್ಯರ್ಥಿಯಲ್ಲಿರುವ ಅರಿವು, ಅಜ್ಞಾನಗಳ ಪ್ರಜ್ಞೆಯನ್ನು, ಪದ ಸದ್ವಿವೇಚನೆಯನ್ನು ಪರೀಕ್ಷಿಸಿ ದೀಕ್ಷೆಗೆ ಸಮ್ಮತಿಸುವುದುಂಟು. ಚತುಸ್ಸಂಘವನ್ನು ಸಾಕ್ಷಿಯಾಗಿ ಮಾಡಿಕೊಂಡು ಮುನಿದೀಕ್ಷೆಯನ್ನು ಪಡೆಯುವವನಲ್ಲಿ ಆತ್ಮಸಾಕ್ಷಿಯು ಸತ್ಯವೂ, ಶುದ್ಧನೂ ಆಗಿರಬೇಕಾಗುತ್ತದೆ. ಅಂತಹ ಪ್ರಜ್ಞೆಯು ಮುನಿಗಳ ಒಡನಾಟದಿಂದ ಉಪದೇಶದಿಂದ ತೀರ್ಥಯಾತ್ರೆಯಿಂದ ಜ್ಞಾನ ಸಂಪಾದನೆಯಿಂದ ಸಾಧ್ಯವಾಗುತ್ತದೆ. ಕ್ಷುಲ್ಲಕ, ಐಲಕ ದೀಕ್ಷೆಗಳಿಗೂ ಅವುಗಳೊಂದಿಗೆ ಬಂದ ಉಮೇದುವಾರಿಕೆ ನೇಮ, ನಿಯಂತ್ರಗಳಿಗೂ ಮುನಿದೀಕ್ಷೆಗೆ ಪೂರಕವಾಗಿ ಬಂದ ಅವಶ್ಯಕಗಳಾಗಿವೆ. ಆ ದೀಕ್ಷೆಗಳನ್ನು ಕೊಡುವ ಅಧಿಕಾರವು ಮುನಿಯಾದವರಿಗೆ ಮಾತ್ರ ಸೇರಿದ್ದು. ಒಂದು ವೇಳೆ ಆತನು ದೊರೆಯದಿದ್ದರೆ ತೀರ್ಥಂಕರ ಮೂರ್ತಿಗೆ ಆತನ ಸ್ಥಾನವು ದೊರೆಯುತ್ತದೆ. ಮಹಾವ್ರತಗಳನ್ನು ಕೈಕೊಂಡ ಕ್ಷುಲ್ಲಕ ಮತ್ತು ಐಲಕರು ಮುನಿಗೆ ವಿಧೇಯವಾಗಿ ನಡೆದುಕೊಳ್ಳುವರು ಕ್ರಮೇಣವಾಗಿ ಅವರಿಬ್ಬರೂ ಸಾಧಿಸಬೇಕಾದ ಆರು ಕ್ರೀಯೆಗಳು ಹೀಗಿವೆ.[೩೯]

೧. ನೆಲದ ಮೇಲೆ ಮಲಗುವುದು.

೨. ಸ್ನಾನ ಮಾಡದೆ ಇರುವುದು.

---

೩೮. ಜೈನ ಸಂಸ್ಕೃತಿ ಮತ್ತು ಸಿದ್ಧಾಂತಗಳು, ಡಾ. ಪಿ. ಕೆ. ಖಂಡೋಬಾ, ಪು. ೮೧.

೩೯. ಜೈನ ಸಂಸ್ಕೃತಿ ಮತ್ತು ಸಿದ್ಧಾಂತಗಳು, ಡಾ. ಪಿ. ಕೆ. ಖಂಡೋಬಾ, ಪು. ೯೯.

೩. ಹಲ್ಲು ತಿಕ್ಕಲಾಗದು.

೪. ನಿಂತು ಊಟ ಮಾಡುವುದು

೫. ಒಂದೇ ಹೊತ್ತು ಆಹಾರ ಸ್ವೀಕರಿಸುವುದು.

೬. ಕೇಶಲೋಚನ ಮಾಡುವುದು.

ದಿಗಂಬರ ಮುನಿ ದಿಕ್ಷಾಂಕ್ಷಿಯು ಮಾತ್ರ ನಗ್ನವಾಗಿರುವುದನ್ನು ಕಲಿಯಬೇಕಾಗುತ್ತದೆ. ಶ್ವೇತಾಂಬರರಿಗೆ ಈ ಅಭ್ಯಾಸವು ಅನ್ವಯಿಸುವುದಿಲ್ಲ. ಕ್ಷುಲ್ಲಕ ವ್ರತಧಾರಿಯು ಲಂಗೋಟಿಯನ್ನು ಧರಿಸಬಹುದು ವಾಹನಗಳಲ್ಲಿ ಸಂಚರಿಸಬಹುದು. ಹಲ್ಲುಗಳನ್ನು ಕೈಬೆರಳುನಿಂದ ಮಾತ್ರ ಉಜ್ಜಿಕೊಳ್ಳಬಹುದು. ಒಂದು ಇಲ್ಲವೆ ಎರಡು ಕಮಂಡಲ ತುಂಬುವಷ್ಟು ತಣ್ಣೀರಿನ ಸ್ನಾನ, ತುಂಡು ಬಟ್ಟೆಯನ್ನು ಸ್ವಚ್ಛ ಮಾಡಿಕೊಳ್ಳಬಹುದು. ಐಲಕ ಧಾರಿಯು ಲಂಗೋಟಿಯನ್ನು ಮಾತ್ರ ಧರಿಸಬಹುದಾಗಿದೆ. ಉಳಿದ ಎಲ್ಲಾ ಕ್ರೀಯಗಳನ್ನು ಆತನು ಆಚರಿಸಬೇಕಾಗುವುದು. ಈ ಸ್ಥಿತಿಯಲ್ಲಿ ಅವರಿಬ್ಬರೂ ಸಂಯಮ, ಸಮಭಾವ, ನಿರ್ವಿಕಾರ ಭಾವಗಳನ್ನು ಬೆಳೆಸಿಕೊಂಡು ಬರುವ ಸಿದ್ಧತೆಯಲ್ಲಿ ನಿರತರಾಗಿರುವರು. ಸಾಧನೆಯ ಮಾರ್ಗದಲ್ಲಿ ಪ್ರವಾಸಿಗರಾದ ಅವರಿಂದ ಏನಾದರೂ ಪ್ರಮಾಧಗಳುಂಟಾದರೆ ಅವರು ಗುರುಗಳಲ್ಲಿ ಪ್ರಾಯಶ್ಚಿತ್ತವನ್ನು ಪಡೆಯುವರು.

ಆಹಾರ ಭಿಕ್ಷೆಯ ವಿಷಯದಲ್ಲಿ ಅನುಸರಿಸಬೇಕಾಗುವ ನಿಯಮಗಳು ಹೀಗಿವೆ.

೧. ತನಗೆ ಬೇಕಾಗುವುದಕ್ಕಿಂತಲೂ ಕಡಿಮೆ ಆಹಾರ ಸ್ವೀಕರಿಸಬೇಕು.

೨. ಊಟದ ಸಮಯದಲ್ಲಿ ಶ್ರಾವಕರ ಮನೆಯ ಮುಂದೆ ತಲೆ ತಗ್ಗಿಸಿಕೊಂಡು ಹೋಗಬೇಕು.

೩. ಹೊಸ್ತಿಲಲ್ಲಿ ನಿಂತು ಶ್ರಾವಕ, ಶ್ರಾವಿಕೆಯರಿಬ್ಬರೂ ನಿಂತು ಮುನಿಯನ್ನು ಭಿನ್ನಾಯಕ್ಕೆ ಕರೆದರೆ ಅಲ್ಲಿ ನಿಲ್ಲಬೇಕು. ಮನೆಯ ಒಳಗೆ ಹೋಗಿ ಎರಡು ಕೈಗಳನ್ನು ತೊಳೆದುಕೊಂಡು, ಶ್ರಾವಕರು ನೀಡುವ ಆಹಾರವನ್ನು ತನ್ನ ಅಂಗೈ ಪಾತ್ರೆಯಲ್ಲಿ ಸ್ವೀಕರಿಸುವನು. ಕುಳಿತು ಊಟ ಮಾಡಿದರೆ ಹೆಚ್ಚು ಊಟ ಮಾಡುವ ಸಾಧ್ಯತೆಯಿದೆ. ಆದ್ದರಿಂದ ನಿಂತುಕೊಂಡೆ ಊಟ ಮಾಡಬೇಕೆಂಬ ನಿಯಮವಿದೆ.

೪. ಆಹಾರದಲ್ಲಿ ಕೂದಲು ಕ್ರಿಮಿಗಳು ಕಾಣಿಸಿಕೊಂಡರೆ ಅಲ್ಲಿಗೆ ಊಟವನ್ನು ನಿಲ್ಲಿಸುವನು.

೫. ಯಾರ ಮನೆಯಲ್ಲಿ ದನಕರುಗಳು, ಗರ್ಭಿಣಿಯರು, ತಪ್ಪಿತಸ್ಥರು ಇರುತ್ತಾರೋ ಅಂತಹವರಿಂದ ಆತನು ಆಹಾರವನ್ನು ಸ್ವೀಕರಿಸುವುದಿಲ್ಲ.

೬. ಊಟ ಮುಗಿಯುವವರೆಗೆ ಆತನು ಮೌನವ್ರತ ಧಾರಿಯಾಗಿರುತ್ತಾನೆ.

ಕುಳಿತುಕೊಳ್ಳುವಾಗ, ಮಲಗುವಾಗ ಆ ಸ್ಥಳವನ್ನು ಪಿಂಛಿಯಿಂದ ಆತನು ಹಸನು ಮಾಡಬೇಕು. ಮಲಗಲು ಆತನು ಉಪಾಶ್ರಯವನ್ನು ಅದು ಇಲ್ಲದಿದ್ದರೆ ದೇವಸ್ಥಾನವನ್ನು ಹುಡುಕಿಕೊಂಡು ಹೋಗಬೇಕೆಂಬ ಕಟ್ಟಳೆಯಿದೆ. ಶ್ರಾವಕ, ಶ್ರಾವಿಕೆಯರ ಮನೆಯಲ್ಲಿ ಆತನು ವಾಸವಾಗಿರಕೂಡದು, ಅವರ ಮುಖವನ್ನು ದಿಟ್ಟಿಸಿ ನೋಡಬಾರದು.

ಸ್ತ್ರೀಯರನ್ನು ನೋಡಕೂಡದು, ಮುಟ್ಟಕೂಡದು, ಸಂಚಾರದಲ್ಲಿದ್ದಾಗ ಸ್ವಾಧ್ವಿಯರೊಂದಿಗೂ ಅವನು ನಡೆಯಲಾಗದು, ಒಬ್ಬನೆ ಸಂಚರಿಸಕೂಡದು, ಯಾವಾಗಲೂ ಮುನಿಗಳೊಂದಿಗೆ ಸಂಚಾರಿಯಾಗಿರಬೇಕು, ವಾಸವಾಗಿರಬೇಕು.

ಮುನಿ ದೀಕ್ಷಾಭ್ಯರ್ಥಿಗಳು ಸಂಚಾರದಲ್ಲಿ ಇರಲಿ, ಮಠದಲ್ಲಿಯೆ ಇರಲಿ ಅವರ ದೈನಂದಿನ ಕಾರ್ಯಕ್ರಮಗಳು ಏಕಪ್ರಕಾರವಾಗಿ ನಡೆಯುತ್ತವೆ. ಅವರ ದಿನನಿತ್ಯದ ಚಟುವಟಿಕೆಗಳ ಮೇಲಿಂದ ಅವರ ದಿನಚರಿಯನ್ನು ಕೆಳಗಿನಂತೆ ಚಿತ್ರಿಸಬಹುದಾಗಿದೆ.[೪೦]

೦೫–೦೬ – ಏಳುವುದು, ಸಾಮಾಯಿಕ

೦೬–೦೭ – ದೇವರ ದರ್ಶನ, ಸ್ವಾದ್ಯಾಯ, ಪ್ರತಿಕ್ರಮಣ

೦೭–೦೮ – ಭಾವಪೂಜೆ

೦೮–೧೦ – ಮೈ ಸ್ವಚ್ಛ ಮಾಡುವುದು, ಸ್ವಾಧ್ಯಾಯ.

೧೦–೧೧ – ಶ್ರಾವಕರ ಸಂದರ್ಶನ.

೧೧–೧೨ – ಭಿಕ್ಷೆ

೧೨–೦೧ – ಸಾಮಾಯಿಕ

೦೧–೦೨ – ವಿಶ್ರಾಂತಿ

೦೨–೦೪ – ಪ್ರವಚನ

೦೪–೦೫ – ಸಾಮಾಯಿಕ

೦೫–೦೬ – ಪ್ರತಿಕ್ರಮಣ, ದೇವದರ್ಶನ

೦೬–೦೭ – ಮೌನ, ಧ್ಯಾನ

೦೭–೧೧ – ಆತ್ಮಚಿಂತನ, ನಿದ್ರೆ ಹೋಗುವುದು.

ಮೇಲಿನ ದಿನಚರಿಯಲ್ಲಿ ಸ್ವಾಧ್ಯಾಯ, ತಪಸ್ಸು, ಆತ್ಮಚಿಂತನೆಗಳು ಮುಖ್ಯವಾಗಿದ್ದು ಇವು ಶ್ವೇತಾಂಬರ ಹಾಗೂ ದಿಗಂಬರ ಸಂಪ್ರದಾಯದಲ್ಲಿ ಒತ್ತುಕೊಟ್ಟು ಹೇಳಿದ ಸಾಧನಗಳಾಗಿವೆ. ಇವುಗಳ ಆಚರಣೆಯು ಧ್ಯೇಯ ಸಿದ್ಧಿಯಾಗುವವರೆಗೂ ನಡೆಯುತ್ತವೆ. ಮುನಿದೀಕ್ಷೆಯನ್ನು ಕೈಕೊಳ್ಳುವ ಹೊತ್ತಿಗೆ ಎರಡು ದೀಕ್ಷೆಗಳ ಮೂಲಕ ಅವುಗಳನ್ನು ಸ್ವಂತ ಪರಿಶ್ರಮದಿಂದ ಆಚರಿಸಬಲ್ಲ ಪರಿಣಿತಿಯನ್ನು ಅವರು ಪಡೆದವರಾಗಿರುವರು.

ಮುನಿದೀಕ್ಷೆಯು ದೊಡ್ಡ ದೀಕ್ಷೆಯೆಂದೂ, ಕ್ಷುಲ್ಲಕ ಮತ್ತು ಐಲಕ ದೀಕ್ಷೆಗಳು ಸಣ್ಣ ದೀಕ್ಷೆಯೆಂದೂ ಪರಿಚಿತವಾಗಿವೆ. ಸಣ್ಣ ದೀಕ್ಷೆಗಳಲ್ಲಿ ಮೊದಲನೆಯದು ಹಳ್ಳಿಯ ಮಟ್ಟದಲ್ಲೂ ಎರಡನೆಯದು ವಿಸ್ತೃತ ಸಮುದಾಯದ ಮಟ್ಟದಲ್ಲೂ ದೊಡ್ಡ ದೀಕ್ಷೆಯೂ ಪ್ರಾದೇಶಿಕ ಮಟ್ಟದಲ್ಲಿಯೂ ಆಚರಿಸಲ್ಪಡುತ್ತದೆ. ಈ ಎಲ್ಲಾ ದೀಕ್ಷೆಗಳು ದೀಕ್ಷಾ ಗುರುವಿನ

---

೪೦. ಲಿಂಗಾಯತ, ಜೈನ ಮತ್ತು ಬ್ರಾಹ್ಮಣ ಧರ್ಮಗಳು : ಮಠಗಳ ಒಂದು ತೌಲನಿಕ ಅಧ್ಯಯನ. ಹಿರೇಮಲ್ಲೂರು ಈಶ್ವರನ್. ಪು. ೩೫೮.

ನೇತೃತ್ವದಲ್ಲಿ ನಡೆಯುತ್ತಿವೆಯಲ್ಲದೆ ಅವುಗಳಿಗೆ ಉತ್ಸವದ, ಹಬ್ಬಗಳ ಕಳೆ ಬಂದಿರುತ್ತದೆ. ಸಂಗೀತ ಭಜನೆ ದೇವಸ್ಥಾನದ ಅಲಂಕಾರ ಮತ್ತು ಮುನಿಗಳ ಸಾನಿಧ್ಯದಿಂದ ಪವಿತ್ರ ಭಾವನೆಯಿಂದ ತುಂಬಿರುತ್ತದೆ. ಉಪಾಶ್ರಯಕ್ಕೆ ಸೇರಿದ ದೇವಸ್ಥಾನಕ್ಕೆ ದೀಕ್ಷಾರ್ಥಿಯನ್ನು ತರಲಾಗುವುದು. ಸಮಾರಂಭವು ಧರ್ಮದ ಬಗೆಗೆ ಅನನ್ಯತ್ವವನ್ನು ಆದರಾಭಿಮಾನಗಳನ್ನು ಉಂಟು ಮಾಡುವುದರ ಜೊತೆಗೆ ಜೈನರನ್ನು ಒಂದುಗೂಡಿಸುವುದಲ್ಲದೆ ಇತರ ಮತೀಯರಲ್ಲಿ ಪ್ರೀತ್ಯಾದರಗಳನ್ನು ಹೆಚ್ಚಿಸುವುದು.

ಮುನಿದೀಕ್ಷೆಯು ಮುನಿ ಸಮುದಾಯದಲ್ಲಿ ಪ್ರವೇಶಿಸುವ ಮತ್ತು ಸ್ವಾಗತಿಸುವ ಸಂಕೇತವೂ ಧರ್ಮ ಪ್ರಸಾರಕ್ಕೆಂದು ಪ್ರಾದೇಶಿಕ ಜೀವನವು ನೀಡಿದ ಕೊಡುಗೆಯಲ್ಲಿ ವ್ಯಕ್ತಿಯ ಜೀವನದಲ್ಲುಂಟಾದ ಸ್ಥಿತ್ಯಂತರವನ್ನು ಸೂಚಿಸುವ ಕಾಲಚಕ್ರ ಕ್ರಿಯೆಯೂ (Life cyclerite) ಆಗಿದೆ. ಮುನಿದೀಕ್ಷಾ ಸಮಾರಂಭವು ಅಭ್ಯರ್ಥಿಗೆ ಎಷ್ಟು ಮಹತ್ವದ್ದಾಗಿರುತ್ತದೊ ಸಮಾಜದ ಪಾಲಿಗೂ ಅಷ್ಟೇ ಮಹತ್ವದ್ದಾಗಿರುತ್ತದೆ. ಸ್ವಂತ ಸಾಧನೆಯಿಂದ ಮುನಿ ಸ್ಥಾನಕ್ಕೆ ಮುಟ್ಟಿದವನು ತನ್ನ ಊರಿನಲ್ಲಾಗಲಿ, ಪ್ರದೇಶದಲ್ಲಾಗಲಿ ದೀಕ್ಷೆಯನ್ನು ತೆಗೆದುಕೊಳ್ಳದೆ ಇನ್ನೊಂದು ಕಡೆ ಪಡೆದರೂ ಊರಿಗೆ ಬಂದಾಗ ಅಷ್ಟೇ ಅಭಿಮಾನದಿಂದ ಆತನನ್ನು ಗೌರವ ಪೂರ್ಣವಾಗಿ ಸತ್ಕರಿಸುವ ಅಭ್ಯಾಸವು ಜೈನ ಸಮುದಾಯದಲ್ಲಿ ಬೆಳೆಸಿಕೊಂಡು ಬಂದಿದೆ. ಮುನಿದೀಕ್ಷಾ ಸಮಾರಂಭವು ಮೂರು ದಿನಗಳವರೆಗೂ ನಡೆಯುವುದುಂಟು. ಮೂರನೆಯ ದಿನವು ಶ್ರಾವಕರಿಗೆ ರೋಮಾಂಚನವನ್ನುಂಟು ಮಾಡುವಂತಹದು. ವಾದ್ಯ, ಭಜನೆಗಳ ಮಧ್ಯ ನಸುಕಿನಲ್ಲಿ ಎದ್ದು ಧ್ಯಾನ, ಸ್ವಂತ ಕೈಯಿಂದ ತಲೆಕೂದಲನ್ನು ಕಿತ್ತುಕೊಳ್ಳುವ ವಿಧಿ ಭಾವಪೂಜೆಗಳನ್ನು ಖಾಸಗಿಯಾಗಿ ಮುಗಿಸಿಕೊಂಡು ಉಪಾಶ್ರಯದಿಂದ ದೇವಾಲಯಕ್ಕೆ ಬಂದು ದೀಕ್ಷಾ ಗುರುವಿನ ಬಳಿ ಕುಳಿತು, ಆತನ ಪಾದಗಳ ಮೇಲೆ ತಲೆ ಇರಸಿ ಅನನ್ಯ ಭಕ್ತಿಯಿಂದ, 'ದೀಕ್ಷಾರ್ಥಿಯಾಗಿ ಬಂದಿದ್ದೇನೆ. ದೀಕ್ಷೆ ಕೊಟ್ಟು ಸಂಸಾರ ಬಂಧನದಿಂದ ಪಾರು ಮಾಡಿರಿ' ಎಂದು ಪ್ರಾರ್ಥಿಸುವ ದೃಶ್ಯ ಭಾವಾವೇಶದಿಂದ ತುಂಬಿರುತ್ತದೆ. ದೀಕ್ಷೆ ಮುಗಿದ ನಂತರ ಪಂಡಿತರ ಉಪನ್ಯಾಸ ಶ್ರಾವಕರಿಂದ ಕಾಣಿಕೆಗಳನ್ನು ಅರ್ಪಿಸಲಾಗುತ್ತದೆ. ಆ ಕಾಲದಲ್ಲಿ ಶ್ವೇತಾಂಬರ ಮತ್ತು ದಿಗಂಬರ ಮುನಿಗಳು ಸ್ವೀಕರಿಸುವ ಎರಡು ಮಹತ್ವದ ಕಾಣಿಕೆಗಳಲ್ಲಿ ಪಿಂಛ ಮತ್ತು ಕಮಂಡಲುಗಳು ಆಗಿವೆ. ಪಿಂಛವನ್ನು ಜೀವರಕ್ಷಣೆಗಾಗಿಯೂ, ಕಮಂಡಲವನ್ನು ದೇಹವನ್ನು ಸ್ವಚ್ಛ ಮಾಡಿಕೊಳ್ಳುವುದಕ್ಕಾಗಿಯೂ ನೀಡಿದ ಉಪಕರಣಗಳಾಗಿವೆ. ಪಿಂಛ ಕಮಂಡಲುಗಳ ಸಾಂಕೇತಿಕ ಕಾಣಿಕೆಗಳಿಂದ ಮುಕ್ತಾಯವಾಗುವ ಮುನಿದೀಕ್ಷೆಯಿಂದ ಮುನಿಪರಂಪರೆಯ ನಿರಂತರವೂ ಮುನಿಜೀವನದ ಆರಂಭವೂ ಆಗುತ್ತದೆ.[೪೧]

ಮಹಾವೀರನು ಹೇಳಿದ ಧರ್ಮ ಬೋಧನೆಗಳಲ್ಲಿ ಮತ್ತು ಆತನ ಜೀವನ ವೃತ್ತಾಂತಗಳಲ್ಲಿ ಜೈನ ಧರ್ಮದ ರಹಸ್ಯವೂ ಮುನಿಜೀವನದ ಆದರ್ಶ ನಡತೆಯೂ ವ್ಯಕ್ತವಾಗಿವೆ. ಈ ರಹಸ್ಯವನ್ನು ನಡತೆಯನ್ನು ಆಚಾರಾಂಗ ಸೂತ್ರಕ್ಕೆ ಸೇರಿದ ೮ನೆಯ ಪ್ರಕರಣದಲ್ಲಿ ಕಾಣುತ್ತವೆ. ಮಹಾವೀರನು ಹೇಳಿದ ಉಪದೇಶವನ್ನೆ ನಂತರದಲ್ಲಿ ರಚಿತವಾಗಿರುವ ಶ್ವೇತಾಂಬರ ಧರ್ಮಗ್ರಂಥವಾಗಿರುವ ಅವಶ್ಯಕ ಸೂತ್ರವು ಹೇಳುತ್ತದೆ. ಅದರಲ್ಲಿ ಮುನಿಯು ಪಾಲಿಸಬೇಕಾದ

---

೪೧. ಅದೇ ಕೃತಿಯ ೩೬೨ನೇ ಪುಟದಲ್ಲಿ ಉಲ್ಲೇಖವಿದೆ.

ಮಹತ್ವದ ಆರು ಕಾರ್ಯಭಾಗಗಳನ್ನು (Obligatory actions) ಸೂಚಿಸಿದ್ದು ಅವು ಹೀಗಿವೆ.[೪೨]

೧. ಸಾಮಾಯಿಕ

೨. ತೀರ್ಥಂಕರರಲ್ಲಿ ಭಕ್ತಿ

೩. ಗುರುವಿಗೆ ವಂದನೆ

೪. ಪ್ರತಿಕ್ರಮಣ (ಪ್ರಾಯಶ್ಚಿತ್ತ)

೫. ಕಾಯೋತ್ಸರ್ಗ

೬. ಪ್ರತ್ಯಾಖ್ಯಾನ (ತ್ಯಾಜ್ಯ ಭಾವನೆ)

ಗುರುವನ್ನು ಉದ್ದೇಶಿಸಿ ಆತನು ಮಾಡುವ ಈ ಮುಂದಿನ ಪ್ರಾರ್ಥನೆಯು ಆ ಕಾರ್ಯಭಾರಗಳ ಮತಿತಾರ್ಥವನ್ನೊಳಗೊಂಡಿದೆ. "ಗುರುವೆ ನಾನು ಸಾಮಾಯಿಕ ಮಾಡುತ್ತೇನೆ. ಎಲ್ಲಾ ದುಷ್ಟ ಕೆಲಸಗಳನ್ನು ಮೂದೆರನಾಗಿ ನಾನು ತ್ಯಜಿಸುತ್ತೇನೆ. ಕಾಯಾ, ವಾಚಾ, ಮನಸಾ ನಾನು ಕೆಟ್ಟದ್ದನ್ನು ತೊರೆಯುತ್ತೇನೆ. ಕೆಟ್ಟದ್ದನ್ನು ನಾನು ಮಾಡುವುದಿಲ್ಲ, ಇತರರು ಮಾಡುವುದಕ್ಕೆ ನಾನು ಕಾರಣನೂ ಆಗುವುದಿಲ್ಲ ಮತ್ತು ಅವರ ದುಷ್ಟಕೃತ್ಯಗಳನ್ನು ಸಮ್ಮತಿಸುವುದಿಲ್ಲ, ಗುರುವೆ ನಾನು ಅಹಿತವನ್ನು ಮಾಡಿದರೆ ಪ್ರಾಯಶ್ಚಿತ್ತ ಬೇಡುತ್ತೇನೆ. ಮಾಡಿದವರನ್ನು ಖಂಡಿಸುತ್ತೇನೆ, ನಿರಾಕರಿಸುತ್ತೇನೆ, ಮತ್ತು ನನ್ನನ್ನೇ ನಾನು ನಿರಾಕರಿಸುತ್ತೇನೆ" ಅವಶ್ಯಕ ಸೂತ್ರವೂ ಹೇಳುವ ಮುಖ್ಯ ಕಾರಭಾರಗಳು ಆತ್ಮಚಿಂತನೆ ದೇವರ ಸ್ಮರಣೆ, ಆಧ್ಯಾತ್ಮಿಕ ಶ್ರೇಯವನ್ನು ಸುತ್ತುವರೆದು ನಿಂತಿವೆ. ಶ್ರಮಣ ಧರ್ಮದ ಪರಂಪರೆಗೆ ಕೊರತೆ ಬರದೆ ಇರಲಿ ಎಂದು ಅಪೇಕ್ಷಿಸಿದ ಮಹಾವೀರನು ಅದು ಅವಶ್ಯಕಗಳನ್ನು ಮುನಿಗಳು ಪಾಲಿಸಬೇಕೆಂದು ಅಂದು ಹೇಳಿದ್ದನ್ನು ಇಂದಿಗೂ ನಡೆಸಿಕೊಂಡು ಬಂದಿರುವುದನ್ನು ನಮಗೆ ನೋಡಲು ಸಿಗುತ್ತದೆ.

"ನಮ್ಮದು ಬದಲಾಗುತ್ತಿರುವ ಕಾಲ ಎಲ್ಲ ಶ್ರಾವಕರೂ ಸಾಮಾಯಿಕ ಮಾಡುವುದಿಲ್ಲ. ಧರ್ಮನಿಷ್ಠರಾದ ಶ್ರಾವಕರು ಅದನ್ನು ನಡೆಸಿಕೊಂಡು ಬರುತ್ತಿದ್ದಾರೆ. ಉಳಿದವರಿಗೆ ನಾನು ಹೋದಲ್ಲೆಲ್ಲ ಸಾಮಾಯಿಕ ಮಾಡಬೇಕೆಂದು ಹೇಳುತ್ತೇನೆ. ಪರ್ಯಷಣ ಉತ್ಸವದಲ್ಲಿ ನನ್ನ ಉಪದೇಶದ ಕಾಲದಲ್ಲಿ ನಾನು ಅವರೊಂದಿಗೆ ಸಾಮುದಾಯಿಕವಾಗಿ ಪ್ರತಿಕ್ರಮಣ ಕೈಕೊಳ್ಳುತ್ತೇನೆ" ಎಂದು ಆಚಾರ್ಯರೊಬ್ಬರು ನನಗೆ ಸಂದರ್ಶನ ಸಮಯದಲ್ಲಿ ತಿಳಿಸಿದರು.

ಪಾರಮಾರ್ಥಿಕ ಗುರಿಯನ್ನು ಸಾಧಿಸುವಲ್ಲಿ ಮುನಿಯಾದವನು ಯಾರ ಮೇಲೆಯೂ ಅವಲಂಬನೆ ಮಾಡಿಕೊಂಡಿರಬಾರದೆಂದೂ, ಸ್ವಂತ ಪರಿಶ್ರಮ ನಿರಂತರ ಸಾಧನೆಗಳ ಮೂಲಕವೆ ಅವನು ಸಂಸಾರದ ಇನ್ನೊಂದ ದಂಡೆಗೆ ಹೋಗಿ ಮುಟ್ಟಬಲ್ಲನೆಂದೂ ಜೈನ ಧರ್ಮದ ಉಪದೇಶವಾಗಿದೆ. ಪರಸ್ಪರ ವಿರೋಧಕ ಭಾವಗಳಿಂದ ತುಂಬಿವೆಯೆಂದು ಹೇಳುವ ಜೈನ ಧರ್ಮವು ಕರ್ಮಸಿದ್ಧಾಂತದ, ಅನಾಸ್ತಿಕವಾದ (Theism) ಸಿದ್ಧಾಂತವನ್ನು ಬೆಳೆಸಿಕೊಂಡು ಬಂದಿರುವುದಕ್ಕೆ ಕಾರಣವಾಗಿದೆ.

***

೪೨. ಅದೇ ಕೃತಿಯ ೩೭೨ನೇ ಪುಟದಲ್ಲಿ ಉಲ್ಲೇಖವಿದೆ.

# ಅಧ್ಯಾಯ – ೪

# ಗದಗ ಪರಿಸರ ಮತ್ತು ಜೈನ ಅರಸುಮನೆತನಗಳು

ಅಧ್ಯಾಯ ೪

# ಗದಗ ಪರಿಸರ ಮತ್ತು ಜೈನ ಅರಸು ಮನೆತನಗಳು

**ಪೀಠಿಕೆ :**

ಭವ್ಯ ರಾಜಕೀಯ ಇತಿಹಾಸವನ್ನು ಹೊಂದಿರುವ ಗದಗ ಪರಿಸರದಲ್ಲಿ ಅನೇಕ ಅರಸು ಮನೆತನಗಳು ಆಳ್ವಿಕೆ ನಡೆಸಿವೆ. ಗದಗ ತಾಲೂಕಿನ ಬೆನಕನಕೊಪ್ಪ ಮಲಪ್ರಭಾ ಕೊಳ್ಳದ ದಂಡೆಯಲ್ಲಿದ್ದು ನೂತನ ಶಿಲಾಯುಗದ ಪ್ರಮುಕ ನೆಲೆಯಾಗಿದ್ದು. ಕೊಲ್ಲುರು ಗ್ರಾಮವು ಇತಿಹಾಸ ಆರಂಭಯುಗದ ಪ್ರಮುಖ ನೆಲೆಯಾಗಿದ್ದು ಇಲ್ಲಿ ಕೆಂಪುಲೇಪನದಡಿಯ ಬಿಳಿವರ್ಣದ ಚಿತ್ರಿತ ಮಡಕೆಯ ಭಾಗ ದೊರೆತಿದೆ. ಶಾಸನಗಳ ಆಧಾರದ ಮೇಲೆ ಗದಗ ಪರಿಸರದ ಇತಿಹಾಸವನ್ನು ಮೌರ್ಯರ ಕಾಲದಿಂದಲೇ ಈ ಪ್ರದೇಶ ಆಳ್ವಿಕೆಗೆ ಒಳಪಟ್ಟಿತ್ತು. ಎಂಬುದನ್ನು ಕೊಪ್ಪಳದಲ್ಲಿ ದೊರೆತ ಅಶೋಕನ ಶಾಸನದಿಂದ ತಿಳಿಯಬಹುದು.

ನರಗುಂದ ತಾಲೂಕಿನ ವಾಸದಲ್ಲಿ ದೊರೆತ ಶಾಸನವು ಶಾತವಾಹನರ ವಶಿಷ್ಟಪುತ್ರ ಪುಳಮಾಯಿ (ಕ್ರಿ.ಶ. ೨ನೇ ಶತಮಾನ) ಕಾಲದ ಬ್ರಾಹ್ಮೀಲಿಪಿಯ ಪ್ರಾಕೃತ ಭಾಷೆಯ ಶಾಸನವು ಗದಗ ಭಾಗವು ಶಾತವಾಹನರ ಆಳ್ವಿಕೆಯಲ್ಲಿತ್ತೆಂದು ತಿಳಿಯಪಡಿಸುತ್ತದೆ. ಬದಾಮಿ ಚಾಲುಕ್ಯರ ಉದಯದವರೆಗೂ ಗದಗ ಹಾಗೂ ಅದರ ಸುತ್ತಮುತ್ತಲಿನ ಪ್ರದೇಶಗಳು ಬನವಾಸಿ ಕದಂಬರ ಮೇರೆಗಳಾಗಿದ್ದವು. ಬದಾಮಿ ಚಾಲುಕ್ಯರ ಕಾಲದಿಂದ ವಿಜಯನಗರದವರೆಗೆ ಗದಗ ಅಂದಿನ ಪ್ರಮುಖ ಆಡಳಿತ ಕೇಂದ್ರವಾಗಿದ್ದು "ಬೆಳವೊಲ-೩೦೦"ದ ಪ್ರಮುಖ ಭಾಗವಾಗಿತ್ತೆಂದು ಹೇಳಬಹುದು. ಗದಗ ಪರಿಸರವು ಬೆಳವೊಲ-೩೦೦ ಹಾಗೂ ಇದರ ಉಪವಿಭಾಗಗಳಾದ ಪುಲಿಗೆರೆ-೩೦೦, ಮಾಸವಾಡಿ-೧೪೦, ಮುಳಗುಂದನಾಡು-೧೨, ನರೇಗಲ್-೧೨, ಚಿಂಚಲಿ-೩೦, ಬೆಳ್ವಣಿಕೆ-

೧೨, ಕುಕನೂರು-೩೦, ಬೆಣ್ಣೆದಡಿ-೭೦, ನವಲಗುಂದ-೪೦, ಕೂಳನೂರ-೩೦ ಇವುಗಳಲ್ಲಿ ಈಗೀನ ಗದಗ ಜಿಲ್ಲೆ ಸಮಾವೇಶಗೊಳ್ಳುವುದರಿಂದ ಇವುಗಳಲ್ಲಿ ಆಳ್ವಿಕೆ ನಡೆಸಿದ ಚಕ್ರವರ್ತಿಗಳು ಅರಸರು, ಸಾಮಂತ ಅರಸರು, ಮಾಂಡಲಿಕರು, ದಂಡಾಧಿಕಾರಿಗಳು ಮಹಾಪ್ರಭುಗಳು, ಪ್ರಭುಗಾವುಂಡರು, ನೀಡಿದ ಸಾಂಸ್ಕೃತಿಕ ಕೊಡುಗೆಗಳನ್ನು ಕುರಿತು ಬೆಳಕನ್ನು ಚೆಲ್ಲುವುದು ಹಾಗೂ ಜೈನ ಧರ್ಮಕ್ಕೆ ನೀಡಿದ ಆದ್ಯತೆಯನ್ನು ವಿಶ್ಲೇಷಣೆ ಮಾಡುವುದು ಈ ಅಧ್ಯಾಯದ ಪ್ರಮುಖ ಅಂಶವಾಗಿದೆ.

## ೪.೧. ಜೈನ ಆಶ್ರಿತ ಅರಸುಮನೆತನಗಳು :

ಗದಗ ಪರಿಸರದಲ್ಲಿ ಆಳ್ವಿಕೆ ನಡೆಸಿದ ಪ್ರಮುಖ ಅರಸು ಮನೆತನಗಳು ಗಂಗರು, ವಾನಸತ್ತಿ ಅರಸರು, ಬದಾಮಿ ಚಾಲುಕ್ಯರು, ರಾಷ್ಟ್ರಕೂಟರು, ಕಲ್ಯಾಣದ ಚಾಲುಕ್ಯರು, ಕಲಚೂರಿಗಳು, ಹೊಯ್ಸಳರು ವಿಜಯನಗರದ ಅರಸರು, ಯಾದವರು, ಸೇಂದ್ರಕ ವಂಶದವರು ಹಾಗೂ ರಟ್ಟರು, ಪ್ರಮುಖ ಅರಸರು ಮಾಂಡಳಿಕರು, ದಂಡಾಧಿಕಾರಿಗಳು, ಮಹಾಪ್ರಭುಗಳು, ಗಾವುಂಡರು ನಡೆಸಿದ ಆಳ್ವಿಕೆಯನ್ನು ಅವರು ನೀಡಿದ ದಾನದತ್ತಿ ಹಾಗೂ ಸಾಮಾಜಿಕ ಸಾಂಸ್ಕೃತಿಕ ಕೊಡುಗೆಗಳನ್ನು ಕುರಿತು ಸಮಗ್ರವಾಗಿ ಅಧ್ಯಯನಕ್ಕೆ ಒಳಪಡಿಸಿ ವಿಶ್ಲೇಷಣೆ ಮಾಡಲಾಗಿದೆ.

'ರಾಜಾ ಕಾಲಸ್ಯ ಕಾರಣಂ' 'ಯಥಾರಾಜಾ ತಥಾ ಪ್ರಜಾ' ಎಂಬ ನಾಣ್ನುಡಿ ಎಷ್ಟೇ ಪ್ರಾಚೀನವಾದರೂ ಅದು ಎಲ್ಲಾ ಕಾಲಕ್ಕೂ ಸತ್ಯ. ೧೬ನೆಯ ಶತಮಾನದಲ್ಲಿದ್ದ ಜೈನ ಕವಿ ರತ್ನಕರವರ್ಣಿ ತನ್ನ ಶತಕವೊಂದರಲ್ಲಿ ರಾಜರು ಮತ್ತು ರಾಜಪ್ರಭುತ್ವವನ್ನು ಕುರಿತು ಹೀಗೆ ಹೇಳುತ್ತಾನೆ. "ದೊರೆಯಂತೆ ಧರೆ, ರಾಜ ಮೆಚ್ಚಿದ್ದನ್ನು ಪ್ರಜೆಗಳು ಮೆಚ್ಚುವರು. ಅವನು ದುರ್ಮಾರ್ಗಿಯಾದೆಂದು ತಾನು ಹಾಳಾಗಿ, ಪ್ರಜಾ ಪರಿವಾರವನ್ನು ಹಾಳು ಮಾಡುವನು. ಹಾಗಲ್ಲದೆ ಒಂದು ನಾಡಿನ ದೊರೆ ದೈವಭಕ್ತನಾದಂದು ತಾನು ಉದ್ಧಾರವಾಗಿ ಪ್ರಜಾಕೋಟಿಯನ್ನು ಉದ್ಧರಿಸುವನು"[೧] ಎಂದು ಅರಸರ ಅಭಿರುಚಿಗನುಗುಣವಾಗಿ ಜೈನ ಮತದಲ್ಲಿ ಏರಿಳಿತವಾದುದನ್ನು ರತ್ನಕರ ಮನಸ್ಸಿನಲ್ಲಿಟ್ಟುಕೊಂಡು ಈ ಮಾತನ್ನು ಹೇಳಿದಂತಿದೆ. ಹೀಗೆ ಪ್ರಜಾಪಾಲನೆಯೇ ರಾಜರ ಮುಖ್ಯ ಗುರಿಯಾಗಬೇಕು. ಆಯಾ ದೇಶ ಕಾಲಘಟ್ಟಗಳಲ್ಲಿ ಆಳಿದ ಅರಸರ ಗುಣಾವಳಿಗಳ ಅನ್ವಯ ದೇಶದ ಆಡಳಿತ ನಡೆಯುತ್ತದೆ.

ಕೊಪ್ಪಳದಲ್ಲಿ ದೊರೆತ ಅಶೋಕನ ಶಾಸನದಿಂದ ಗದಗ ಪರಿಸರವು ಮೌರ್ಯರ ಆಡಳಿತಕ್ಕೆ ಒಳಪಟ್ಟಿತ್ತು ಎಂಬುದು ತಿಳಿದು ಬರುತ್ತದೆ.

ಶಾತವಾಹನರ ಪ್ರಸಿದ್ಧ ಅರಸನಾದ ವಶಿಷ್ಠಪುತ್ರ ಪುಳಮಾಯಿ ಆಳ್ವಿಕೆಯಲ್ಲಿ ರಚನೆಗೊಂಡ ಶಾಸನವು ಒಂದು ಇಂದಿನ ಗದಗ ಜಿಲ್ಲೆಯ ನರಗುಂದ ತಾಲೂಕಿನ ವಾಸನ ಗ್ರಾಮದಲ್ಲಿ ದೊರೆತಿರುವುದರಿಂದ ಈ ಪ್ರದೇಶವು ಶಾತವಾಹನರ ಆಳ್ವಿಕೆಗೆ ಒಳಪಟ್ಟಿತ್ತು ಎಂಬುದು ತಿಳಿದು ಬರುತ್ತದೆ. ಶಾಸನದ ವಿಷಯ ವಾಸನ

---

೧. ಎಂ. ಚಿದಾನಂದಮೂರ್ತಿ, ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಪು. ೧೧೩

ಗ್ರಾಮದಲ್ಲಿ ಮಹಾದೇವ ಚಂಡಶೀವ ದೇವತಾಯನ ನಿರ್ಮಾಣವನ್ನು ತಿಳಿಸುತ್ತದೆ. ಶಾತಕರ್ಣಿಯ ನಾಣ್ಯಗಳು, ಗೋಧಾವರಿ ತೀರದ ನಾಣ್ಯಗಳು ಲಕ್ಕುಂಡಿಯಲ್ಲಿ ದೊರೆತಿರುವುದರಿಂದ ಇದು ಶಾತವಾಹನ ಅರಸರ ಆಳ್ವಿಕೆಗೆ ಒಳಪಟ್ಟಿತ್ತು ಎಂಬುದು ತಿಳಿದು ಬರುತ್ತದೆ.

ಕದಂಬ ಅರಸರು ನೇರವಾಗಿ ಗದಗ ಪರಿಸರದಲ್ಲಿ ಆಡಳಿತ ನಡೆಸಿದ ಬಗ್ಗೆ ಶಾಸನದಲ್ಲಿ ಸಾಹಿತ್ಯ ಕೃತಿಗಳಲ್ಲಿ ಹೇಳಿಲಿಲ್ಲವಾದರೂ ಮಾಂಡಲಿಕನೊಬ್ಬನು ಅಧಿಕಾರದಲ್ಲಿದ್ದನು ಎಂಬುದು ಕ್ರಿ.ಶ. ೬ನೆಯ ಶತಮಾನದ ಸಿರುಗುಪ್ಪ ಶಾಸನವು ಉಲ್ಲೇಖಿಸುತ್ತದೆ. ನೇರವಾಗಿ ಆಡಳಿತ ನಡೆಸದಿದ್ದರು ಮಾಂಡಳಿಕರು ಅಂದರೆ ಕದಂಬ ಅರಸರ ಅಧೀನದಲ್ಲಿದ್ದ ಸಾಮಂತ ಅರಸರ ಆಳ್ವಿಕೆಗೆ ಹಾಗೂ ಗಡಿ ಮೇರೆಯ ನಿಯಂತ್ರಣವನ್ನು ಹೊಂದಿದ್ದರು. ಬನವಾಸಿ ಕದಂಬರು ಎಂಬುದನ್ನು ಮಾತ್ರ ಹೇಳಬಹುದು.

ಬೆಳ್ವೊಳ-೩೦೦ರ ಉಪವಿಭಾಗ ಮುಳಗುಂದ ನಾಡನ್ನು ಕ್ರಿ.ಶ. ೬ನೆಯ ಶತಮಾನದಲ್ಲಿ ನೇರವಾಗಿ ಆಳ್ವಿಕೆ ನಡೆಸಿದವರು. ವಾನಸತ್ತಿ ಅರಸರು ನಂತರ ಬದಾಮಿ ಚಾಲುಕ್ಯರು ಚಕ್ರವರ್ತಿಗಳಾಗಿದ್ದಾಗ ಮುಳಗುಂದ ನಾಡಿನ ಪಶ್ಚಿಮ ಗಡಿಯಲ್ಲಿರುವ ಸಿರಗುಪ್ಪಿಯನ್ನು ವಾನಸತ್ತಿ ಅರಸ ಆಳುತ್ತಿದ್ದನೆಂದು "ಮುಳಗುಂದ ನಾಡು-ಒಂದು ಅಧ್ಯಯನ"[೨] ಸಂಶೋಧನಾ ಕೃತಿಯಿಂದ ತಿಳಿದು ಬರುತ್ತದೆ.

ಬದಾಮಿ ಪ್ರದೇಶದಿಂದ ಆಳ್ವಿಕೆ ನಡೆಸಿದ ಅರಸರು ಚಕ್ರವರ್ತಿಗಳಾಗಿದ್ದರು. ಬೆಳ್ವೊಲ-೩೦೦ರ ವಿಭಾಗವು ಬದಾಮಿ ಚಾಲುಕ್ಯರ ಆಡಳಿತಕ್ಕೆ ಅದರ ಉಪವಿಭಾಗಗಳು ಒಳಪಟ್ಟಿದ್ದವು. ಪುಲಿಗೆರೆ-೩೦೦[೩] ಪ್ರಾಂತವಾಗಿದ್ದಿತೆಂಬುದು ಸ್ಪಷ್ಟ ಆದರೆ ಪ್ರಾಂತದ ಹೆಸರು ಅರಸರು ಆ ಕಾಲದ ಶಾಸನಗಳಲ್ಲಿ ಬಂದಿಲ್ಲ.[೪]

ಬದಾಮಿಯಲ್ಲಿ ಆಳಿದ ಚಾಲುಕ್ಯ ವಂಶದ ಅರಸರ ಕಾಲದಿಂದಲೂ ಪುಲಿಗೆರೆ ಕರ್ನಾಟಕದ ಮುಖ್ಯಭಾಗವಾಗಿತ್ತು. ರಾಜಕೀಯದಲ್ಲಷ್ಟೇ ಅಲ್ಲದೆ ಧಾರ್ಮಿಕವಾಗಿಯೂ ಜೈನರಿಗೂ, ಶೈವರಿಗೂ ಇದೊಂದು ಯಾತ್ರಾ ಸ್ಥಳವಾಗಿತ್ತು. ಪುಲಿಗೆರೆಯಲ್ಲಿ ದೊರೆತಿರುವ ಅತಿ ಪ್ರಾಚೀನ ಶಾಸನ ಇಮ್ಮಡಿ ಪುಲಕೇಶಿಯದು. ಇದರಲ್ಲಿ ಪುಲಕೇಶಿಯನ್ನು ಎರೆಯಮ್ಮ ಸತ್ಯಾಶ್ರಯನೆಂದೂ, ರಣ ಪರಾಕ್ರಮಾಜ್ಯ ಮಹಾರಾಜನ ಮಗನೆಂದೂ ಕರೆಯಲಾಗಿದೆ. ಈ ಪುಲಿಕೇಶಿಯ ತಂದೆಯಾದ ಕೀರ್ತಿವರ್ಮನಿಗೆ ರಣಪರಾಕ್ರಮನೆಂಬ ಬಿರುದಿದ್ದಿತು. ಸತ್ಯಾಶ್ರಯ ಎಂಬುದು ಚಾಲುಕ್ಯ ಅರಸರು ಸಾಮಾನ್ಯವಾಗಿ ಹೊಂದಿದ್ದ ಬಿರುದುಗಳಲ್ಲಿ ಒಂದು ಆದ್ದರಿಂದ ಶಾಸನದಲ್ಲಿ ಉಕ್ತವಾದ ಎರೆಯಮ್ಮನು ಇಮ್ಮಡಿ ಪುಲಕೇಶಿ ಎಂಬುದರಲ್ಲಿ ಸಂದೇಹವಿಲ್ಲ. ಈ ಶಾಸನದಲ್ಲಿ ಸೇಂದ್ರಕ ವಂಶದ ದುರ್ಗಾಶಕ್ತಿಯು ಶಂಖ ಜಿನಾಲಯಕ್ಕೆ ಮಾಡಿದ ಭೂಮಿದಾನದ ಉಲ್ಲೇಖವಿದೆ.

---

೨. ಡಾ. ಧನವಂತ ಹಾಜವಗೋಳ, ಮುಳಗುಂದ ನಾಡು-ಒಂದು ಅಧ್ಯಯನ

೩. 'ಪುಲಿಗೆರೆ ಮುನ್ನೂರು. ಬೆಳ್ವಲ ಮುನ್ನೂರರ ಅಂತೆರಡುನೂರುಂ' ಎಂಬ ಉಲ್ಲೇಖಗಳು ಹಲವಾರು ಶಾಸನಗಳಲ್ಲಿ ದೊರೆಯುತ್ತವೆ.

೪. ಕನಾಟಕ ವಿಶ್ವವಿದ್ಯಾಲಯದ ಕನಾಟಕ ಭಾರತಿ ಸಂಪುಟ ೧, ಸಂಚಿಕೆ ೧, ಪು. ೮೦-೮೬.

ಇದೆ ಇಮ್ಮಡಿ ಪುಲಿಕೇಶಿಯ ಆಡಳಿತ ಕಾಲದಲ್ಲಿ ಡಂಬಳವು ನೆಗಳ್ತ ಪಡೆದಿತ್ತೆಂಬುದನ್ನು ಜನಪದ ಗೀತೆಗಳು ಸಾರುತ್ತಿವೆ.[೫]

“ಪುಲಿಕೇಶಿ ದೊರೆಯಾಳಿ ಕಲಕೆಲ್ಲ ತಿಳಿಯಾಗಿ
ಬಲಕಾಣ ಕೇಳೊಡೆ ಬಸವ । ಡಂಬಳದ
ಕಳಸದ ತೇರ ಎಳೆದಾಂವ ।”

“ಕರೆ ಬತ್ತಿ ಡಂಬಳದ ಮೋರೆ ಕೇಳಿ ಬದಾಮಿ
ಪುಲಕೇಶಿ ಮರಗ್ಯಾನ ಕರುಣಿ । ಸಾರ್‍ಯಾನ
ತೆರಿಗಿ ಜನದಾಗ ಕಡತಾವ್ರೂ ॥”

ಎಂದು ಡಂಬಳವು ಮಾಸವಾಡಿ-೧೪೦[೬] ಉಪವಿಭಾಗದ ರಾಜಧಾನಿಯಾಗಿದ್ದೂ ಅದು ಅಂದು ಅನುಭವಿಸಿದ ಸಂಕಷ್ಟಕ್ಕೆ ಬದಾಮಿ ಚಾಲುಕ್ಯರ ಅರಸ ಇಮ್ಮಡಿ ಪುಲಿಕೇಶಿ ಸಹಾಯ ಹಸ್ತ ನೀಡಿದ್ದರ ಉಲ್ಲೇಖವನ್ನು ಇಂದಿಗೂ ಈ ಪ್ರದೇಶದ ಜನಪದ ಗೀತೆಗಳಲ್ಲಿ ಕಾಣಬಹುದು.

ಬದಾಮಿ ಚಾಲುಕ್ಯರ ದೊರೆ ವಿಜಯಾದಿತ್ಯನ ತಂಗಿ ‘ಕುಂಕುಮ ಮಹಾದೇವಿ’ ಪುಲಿಗೆರೆಯಲ್ಲಿ ಆನೆ ಸೆಜ್ಜೆ ಬಸದಿಯನ್ನು ಕಟ್ಟಿಸಿದ್ದಳೆಂದು ಶಾಸನದಿಂದ ತಿಳಿದು ಬರುತ್ತದೆ.

ಮುಳಗುಂದ-೧೨ರ ಗ್ರಾಮಗಳಲ್ಲೊಂದಾದ ಕುರ್ತಕೋಟೆಯನ್ನು ಚಾಲುಕ್ಯರು ವಿಜಯಾದಿತ್ಯನ ಕಾಲದಲ್ಲಿ ‘ಲೋಕಟ ನಿಮ್ಮಡಿಗ’ನು ಆಳುತ್ತಿದ್ದ ಉಲ್ಲೇಖ ಕ್ರಿ.ಶ. ೭೩೪ರ ಕುರ್ತಕೋಟಿ ಶಾಸನದಲ್ಲಿ ಉಲ್ಲೇಖವಿದೆ. ಬದಾಮಿ ಚಾಲುಕ್ಯರ ಲಾಂಛನವಾದ ‘ವರಾಹಾ’ ದೇವಾಲಯವೊಂದು ಮುಳಗುಂದದ ತಿಗಡಿಕೇರಿ ಓಣಿಯಲ್ಲಿದೆ. ಇದ್ದರಿಂದ ಬದಾಮಿ ಚಾಲುಕ್ಯರ ಕಾಲದಲ್ಲಿ ಈ ಪ್ರದೇಶ ಬೇರೆ ಬೇರೆ ಮಾಂಡಲೀಕರ ಆಡಳಿತಕ್ಕೆ ಒಳಪಟ್ಟಿತ್ತೆಂದು ಸ್ಪಷ್ಟವಾಗುತ್ತದೆ.

---

೫. ಡಾ. ಹನುಮಾಕ್ಷಿ ಗೋಗಿ, ಡಾ. ಪಿ. ಕೆ. ರಾಠೋಡ, ಡಂಬಳ : ಸಾಂಸ್ಕೃತಿಕ ಅಧ್ಯಯನ ಜನಪದದಲ್ಲಿ ಡಂಬಳ-ಡಂಬಳ ಮಲ್ಲವ್ವನ ಹಾಡು, ಪದ್ಯ-೩, ೧೧.

೬. SII Vol. XI, i page 101- ಕ್ರಿ.ಶ. ೧೦೬೮ರ ಆಲೂರ ಶಾಸನ, ಮುಂಡರಗಿ
SII Vol. XII, ii page 165- ಕ್ರಿ.ಶ. ೧೧೧೩ರ ಕಕ್ಕೂರು ಶಾಸನ, ಮುಂಡರಗಿ
SII Vol. XII, i page 86- ಕ್ರಿ.ಶ. ೧೦೫೦ರ ಕೊರ್ಲಹಳ್ಳಿ ಶಾಸನ, ಮುಂಡರಗಿ
SII Vol. XI, i page 30- ಕ್ರಿ.ಶ. ಸು. ೧೨ನೇ ಶತಮಾನ ಮೇವುಂಡಿ ಶಾಸನ, ಮುಂಡರಗಿ
SII Vol. XI, i page 75- ಕ್ರಿ.ಶ. ೧೧೪೨ರ ಶಿರೂರ ಶಾಸನ, ಮುಂಡರಗಿ
SII Vol. XI, i page 175- ಕ್ರಿ.ಶ. ೧೧೨೪ರ ಡಂಬಳ ಶಾಸನ, ಮುಂಡರಗಿ
SII Vol. XI, ii page 136-ಕ್ರಿ.ಶ. ೧೯೧ರ ಆಲೂರು ಶಾಸನ, ಮುಂಡರಗಿ.
ಈ ಎಲ್ಲಾ ಶಾಸನಗಳಲ್ಲಿ ಡಂಬಳ ಗ್ರಾಮದ ಉಲ್ಲೇಖಗಳು ವಿವಿಧ ನಾಮದಡಿಯಲ್ಲಿ ಬಂದಿವೆ.

ಹೀಗೆ ಬದಾಮಿ ಚಾಲುಕ್ಯರು ಬೆಳ್ವೊಳ-೩೦೦ರ ಉಪವಿಭಾಗಗಳಾದ ಮುಳಗುಂದ-೧೨, ನರೇಗಲ್ಲ-೧೨, ಬೆಳವಣಿಕೆ-೧೨, ಪುಲಿಗೆರೆ-೩೦೦ ಮಾಸವಾಡಿ-೧೪೦ರ ಪ್ರದೇಶಗಳು ಈ ಅರಸರ ಆಡಳಿತಕ್ಕೆ ಒಳಪಟ್ಟಿದ್ದವು ಎಂಬುದನ್ನು ಶಾಸನಗಳ ಆಧಾರದಿಂದ ಕಂಡುಕೊಳ್ಳಲಾಗಿದೆ.

ಕ್ರಿ.ಶ. ೯೭೩ರಲ್ಲಿ ರಾಷ್ಟ್ರಕೂಟರನ್ನು ಬದಿಗೊತ್ತಿ ಕಲ್ಯಾಣದ ಚಾಲುಕ್ಯರು ಪ್ರಬಲರಾದರು. ಕಲ್ಯಾಣ ಚಾಲುಕ್ಯ ಚಕ್ರವರ್ತಿಗಳು ಕರ್ನಾಟಕವನ್ನು ಬಹುಕಾಲ ಆಳಿದ ರಾಜವಂಶದವರಾಗಿದ್ದು ಕಲ್ಯಾಣ ಎಂದರೆ ಇಂದಿನ ಬೀದರ ಜಿಲ್ಲೆಯ ಬಸವ ಕಲ್ಯಾಣವನ್ನು ರಾಜಧಾನಿಯನ್ನಾಗಿ ಮಾಡಿಕೊಂಡು ಇನ್ನೂರು ವರ್ಷಗಳವರೆಗೆ ಆಳಿದರು.

ಕಲ್ಯಾಣದ ಚಾಲುಕ್ಯರು ಬೆಳ್ವೊಳ-೩೦೦ರ ಉಪವಿಭಾಗಗಳಾದ ಮಾಸವಾಡಿ-೧೪೦, ಮುಳಗುಂದ-೧೨, ಪುಲಿಗೇರಿ-೩೦೦ ಹಾಗೂ ಗದಗ, ಲಕ್ಕುಂಡಿ ಪರಿಸರದಲ್ಲಿ ಆಡಳಿತ ನಡೆಸಿ ಜೈನ ಪರಂಪರೆಗೆ ಹಾಗೂ ಇನ್ನಿತರ ಧರ್ಮಗಳಿಗೆ ಪ್ರೋತ್ಸಾಹ ನೀಡಿದ್ದಾರೆ.

ರಾಷ್ಟ್ರಕೂಟರ ನಂತರ ಪುನಃ ಚಾಲುಕ್ಯ ರಾಜ್ಯ ಪ್ರತಿಷ್ಠಾಪನೆಯಾದಾಗ ಪುಲಿಗೆರೆ ನಾಡಿನ ಮಂಡಲಾಧಿಕಾರಿಗಳಲ್ಲಿ ಬದಲಾವಣೆಯಾಯಿತು. ಕ್ರಿ.ಶ. ೯೭೫ರಿಂದ ಪುಲಿಗೆರೆ ಪ್ರಾಂತವನ್ನು ಕ್ರಮವಾಗಿ ಕನ್ನಪ ಶೋಭನರಸ, ಕೇಶವರಸ ಮತ್ತು ವಾಪಣರಸರು ಆಳಿದರು. ಕನ್ನಪ ಮತ್ತು ಶೋಭನರಸರು ಸಹೋದರರು ಕೇಶವರಸನು ವಾವಣರಸನ ತಂದೆ.

ಕ್ರಿ.ಶ.೯೭೫ರ ನಂತರ ಕನ್ನಪನು ಪುಲಿಗೆರೆಯ ಪ್ರಾಂತಾಧಿಕಾರಿಯಾಗಿದ್ದನು. ಕುರಹಟ್ಟಿ ಗ್ರಾಮದ ಶಾಸನ[2]ದಿಂದ ಶೋಭನರಸನು ೯೮೦-೮೧ರಲ್ಲಿ ಪುಲಿಗೆರೆಯನ್ನಾಳುತ್ತಿದ್ದನೆಂದು ತಿಳಿದು ಬರುತ್ತದೆ. ೧೦೦೨-೦೫ರವರೆಗೆ ಇವನು ಅದೇ ಅಧಿಕಾರದಲ್ಲಿ ಇದ್ದನೆಂದು ಹೇಳಿದೆ. ೧೦೧೨ರಲ್ಲಿ ಕೇಶವರಸನು ಈ ಪ್ರಾಂತದ ಅಧಿಪತಿಯಾಗಿದ್ದನು. ಚಾಲುಕ್ಯ ಇರುವ ಬೆಡಂಗ ಸತ್ಯಪ್ರಯನು ಕ್ರಿ.ಶ. ೧೦೦೨-೦೩ರಲ್ಲಿ ಚೋಳರೊಡನೆ ಕಾದಾಡಿದಾಗ ಕೇಶವರಸನು ಸತ್ಯಾಶ್ರಯನಿಗೆ ಬೆಂಬಲವಾಗಿ ನಿಂತು ಹೋರಾಡಿದನು. ಆ ಕದನದಲ್ಲಿ ಅವನು ಶತ್ರುಗಳ ಕೈವಶವಾದಂತೆಯೂ, ಅಂದರೆ ಸ್ವಲ್ಪಕಾಲದಲ್ಲಿಯೇ ಬಂಧಮುಕ್ತನಾದನೆಂದೂ ಊಹಿಸಲು ಆಧಾರಗಳಿವೆ. ಈ ಕೇಶವರಸನೇ ಗದಾಯುದ್ಧ ಹಸ್ತ ಪ್ರತಿಯನ್ನು ಪರಿಶೀಲಿಸುವಲ್ಲಿ ರನ್ನನಿಗೆ ನೇರೆವಾದ ದಂಡ ನಾಯಕ ಕೇಶಿ ಕೇಶವರಸನ ಮಗ ೧೦೨೮ರಲ್ಲಿ ವಾವಣರಸನು ಪುಲಿಗೆರೆ ಬೆಳ್ವೊಲ ನಾಡುಗಳನ್ನಾಡುತ್ತಿದ್ದನು. ವಾವಣರಸನ ಪತ್ನಿರೇವಕಬ್ಬರಸಿ, ಈಕೆ ಪೊಸವೂರ ಗ್ರಾಮದ ಆಧಾಯವನ್ನು ಅನುಭವಿಸುತ್ತಿದ್ದಳು. ಈಕೆಯ ಆ ದೇಶಾನುಸಾರವಾಗಿ ಸಿಂದಕುನ್ನಾಲ ವಂಶದ ಕೊರಲಗುಂದನ ಮಗ ಸಿಂದರಸನು ಆ ಗ್ರಾಮದ ಮೊಳ್ಳಿಯನ್ನು ನೋಡಿಕೊಳ್ಳುತ್ತಿದ್ದನು. ವಾವಣರಸನ ತಮ್ಮ ಶ್ರೀಪಾದರಸ ಸುಮಾರು ೧೦೩೫ರವರೆಗೂ ಪುಲಿಗೆರೆ ವಾವಣರಸನ ವಂಶಸ್ಥರ ಆಳ್ವಿಕೆಗಳ ಒಳಪಟ್ಟಿತ್ತೆನ್ನಬಹುದು.

---

2. ಕ್ರಿ.ಶ. ೯೭೫ರ ಕುರಹಟ್ಟಿ ಶಾಸನ.




ಡಂಬಳದಲ್ಲಿ ಕಲ್ಯಾಣ ಚಾಲುಕ್ಯ ಅರಸ ತ್ರೈಲೋಕ್ಯಮಲ್ಲ ೧ನೆಯ ಸೋಮೇಶ್ವರನ ಶಾಸನವೊಂದು ದೊರೆತಿದ್ದು ಕಲ್ಯಾಣ ಚಕ್ರವರ್ತಿಗಳಿಗೆ ಇರುವ 'ಸಮಸ್ತ ಭುವನಾಶ್ರಯಂ ಶ್ರೀ ಪೃಥ್ವವಲ್ಲಭಂ ಮಹಾರಾಜಾಧಿರಾಜಂ ಪರಮೇಶ್ವರಂ ಪರಮ ಭಟ್ಟಾರಕಂ ಸತ್ಯಾಶ್ರಯ ಕುಳತಿಳಕಂ ಚಾಳುಕ್ಯಭರಣಂ ಶ್ರೀ ಮತ್ರೈಲೋಕ್ಯಮಲ್ಲದೇವರ ವಿಜಯ ರಾಜ್ಯ ಮುತ್ತರೂತ್ತರಾಭಿವೃದ್ಧಿ ಪ್ರವರ್ದ್ಧಾಮಾನ ಮಾತಂದ್ರಾರ್ಕ್ಕತಾರಂಬರಂ ಸಲುತ್ತಿಮಿರೆ"[೮] ಎನ್ನುವ ಸಕಲ ಬಿರುದುಗಳೊಂದಿಗೆ ವರ್ಣಿತಗೊಂಡಿದ್ದಾನೆ.

ಕಲ್ಯಾಣ ಚಾಲುಕ್ಯ ಚಕ್ರವರ್ತಿ 'ತ್ರಿಭುವನಮಲ್ಲ'ನೆಂದು ಬಿರುದಾಂಕಿತನಾದ ೬ನೇ ವಿಕ್ರಮಾದಿತ್ಯ ಕಲ್ಯಾಣ ಚಾಲುಕ್ಯ ಮನೆತನದ ಸುಪ್ರಸಿದ್ಧ ದೊರೆ ೧ನೇ ಸೋಮೇಶ್ವರನ ದ್ವಿತಿಯ ಪುತ್ರ ಈ 'ನಿತ್ಯ ಮಿದಾನಲೋಲ' ಎಂದು ಕರೆಯಿಸಿಕೊಂಡಿದ್ದಾನೆ. ಸುದೀರ್ಘ ೫೦ ವರ್ಷಗಳ ಕಾಲ ಆಳಿದ ಚಕ್ರವರ್ತಿ, ಪಟ್ಟಕ್ಕೆ ಬರುವ ಮುಂಚೆ ಹತ್ತಾರು ವರ್ಷಗಳ ಕಾಲ ಸಿಂಧ್ ಪ್ರಾಂತ ಮತ್ತು ಬನವಾಸಿ ಪನ್ನಿರ್ಚ್ಛಾಸಿರವನ್ನು ಮಹಾಮಂಡಲೇಶ್ವರನಾಗಿ ಆಳಿದ ಅರಸ ಮಾಸವಾಡಿ ೧೪೦ರ ಪ್ರಸಿದ್ಧ ಪಟ್ಟಣವಾದ ಡಂಬಳದಲ್ಲಿ (ಧರ್ಮಪುರ) ಈತನನ್ನು ಉಲ್ಲೇಖಿಸುವ ೩ ಶಾಸನಗಳು (ದಾನ) ದೊರೆತಿವೆ.[೯]

ಕಲ್ಯಾಣ ಚಾಲುಕ್ಯ ಮನೆತನದ ಪಟ್ಟಾಭಿಷಕ್ತ ಕೊನೆಯ ಚಾಲುಕ್ಯ ಚಕ್ರವರ್ತಿ ತ್ರಿಭುವನಮಲ್ಲ ೪ನೆಯ ಸೋಮೇಶ್ವರ ಈತನನ್ನು ಉಲ್ಲೇಖಿಸುವ ೨ ಶಾಸನಗಳು ಡಂಬಳದಲ್ಲಿ ದೊರೆತಿದ್ದು ೪ನೆಯ ಸೋಮೇಶ್ವರನ ಬಹುದೀರ್ಘ ವರ್ಣನೆಯನ್ನು ಇವು ನೀಡುತ್ತವೆ.

ಕ್ರಿ.ಶ. ೧೦೯೫ರ ಶಾಸನದಲ್ಲಿ ೬ನೆಯ ವಿಕ್ರಮಾದಿತ್ಯನ ಪಿರಿಯರಸಿ ಲಕ್ಷ್ಮೀದೇವಿಯನ್ನು ಉಲ್ಲೇಖಿಸುತ್ತ ಆಕೆ ೧೮ ಅಗ್ರಹಾರಗಳನ್ನು ದರ್ಮ್ಮಾಪುರವನ್ನು ಆಳುತ್ತಿದ್ದಳೆಂದು ಸೂಚಿಸುತ್ತದೆ. ಲಕ್ಕುಂಡಿಯ ಅತ್ತಿಮಬ್ಬೆಯ ಬಿರುದಾದ ದಾನಚಿಂತಾಮಣಿ ಎಂಬುದನ್ನು ಇವಳಿಗೂ ಆರೋಪಿಸುತ್ತದೆ.[೧೦]

---

೮. SPL IP. 224, TVM-AASI, I.P.18.

೯. ಡಾ. ಜಿ. ಎಮ್. ನಾಗಯ್ಯ–ಆರನೇಯ ವಿಕ್ರಮಾದಿತ್ಯನ ಶಾಸನಗಳು–ಒಂದು ಅಧ್ಯಯನ, ಪು. ೭೮.

೧೦. ಕ್ರಿ.ಶ. ೧೦೯೫ರ ಡಂಬಳ ಶಾಸನ.

ಗದುಗಿನ ಹೊರವಲಯದಲ್ಲಿ ಕಂಡು ಬಂದಿರುವ ೧೦೭೨ರ ಶಾಸನವು ಮುಳಗುಂದದಲ್ಲಿ ಕಲ್ಯಾಣದ ಚಾಲುಕ್ಯ ಅರಸ ೨ನೇ ಸೋಮೇಶ್ವರನ ರಾಣಿ ಕಾಂಚಲದೇವಿ ಆಡಳಿತ ನಿರ್ವಹಣೆ ಮಾಡುತ್ತಿದ್ದಳೆಂದು ತಿಳಿಸುತ್ತದೆ.[೧೧]

ಚಾಲುಕ್ಯ ೨ನೆಯ ಸೋಮೇಶ್ವರನ ಕಾಲದಲ್ಲಿ ಮಹಾಮಂಡಲೇಶ್ವರ ಲಕ್ಷ್ಮರಸನು ಅರಸನ ಪ್ರಧಾನ ಮಂತ್ರಿಯಾಗಿದ್ದನು. ಪುಲಿಗೆರೆ ಬೆಳ್ವೊಲಗಳು ೧೦೭೧ರಲ್ಲಿ ಈತನ ಆಳ್ವಿಕೆಗೊಳಪಟ್ಟವು. ೧೦೭೪ನೆಯ ವರ್ಷದ ಶಾಸನವು ಇದನ್ನೇ ಸೂಚಿಸುತ್ತದೆ.[೧೨]

ಸೋಮೇಶ್ವರನ ಸೋದರನಾದ ೬ನೆಯ ವಿಕ್ರಮಾದಿತ್ಯನು ಪಟ್ಟಕ್ಕೆ ಬಂದ ಕೆಲ ವರ್ಷಗಳ ಕಾಲ ಅವನ ಇನ್ನೊಬ್ಬ ಸೋದರನಾದ ಯುವರಾಜ ಜಯಸಿಂಹ ಅಣ್ಣನಿಂದ ವಿಶೇಷ ಮಾನ್ಯತೆಯನ್ನು ಪಡೆದು ಬನವಾಸಿ ಪನ್ನಿರ್ಚ್ಛಾಸಿರ, ನೊಳಂಬವಾಡಿ ಮುಂತಾದ ಪ್ರಾಂತಗಳನ್ನಾಳತೊಡಗಿದನು. ಹಾಗೆ ಅವನ ಆಳ್ವಿಕೆಗೊಳಪಟ್ಟ ಪ್ರಾಂತಗಳಲ್ಲಿ ಪುಲಿಗೆರೆಯನ್ನಾಳುತ್ತಿದ್ದನು. ಇವನ ಕೈಕೆಳಗೆ ಸಗರ ಕುಲದ ಇಮ್ಮಡಿ ಜಯಕೇಶಿಯು ಪುಲಿಗೇರಿಯ 'ಮನ್ನೆಯ'ರ ಅಧಿಪತಿಯಾಗಿದ್ದನು. ಯುವರಾಜ ಜಯಸಿಂಹನು ಅಣ್ಣನ ವಿರುದ್ಧ ದಂಗೆಯೆದ್ದು ಅದರ ಪರಿಣಾಮವಾಗಿ ಬಹುಶಃ ತನ್ನ ಪ್ರಾಣವನ್ನು ಕಳೆದುಕೊಂಡನು. ನಂತರ ದಂತನಾಯಕ ಅನಂತಪಾಲನು ವಿಕ್ರಮಾದಿತ್ಯನ ಬಲಭುಜದಂತಿದ್ದು ಅವನ ಮಹಾ ಪ್ರಧಾನನಾಗಿದ್ದನು. ೧೦೯೯ರ ಶಾಸನದಲ್ಲಿ ಈತನು ಪುಲಿಗೆರೆಯನ್ನು ಆಳುತ್ತಿದ್ದುದರ ಉಲ್ಲೇಖವಿದೆ. ಸುಮಾರು ೧೧೧೦ರವರೆಗೂ ಪುಲಿಗೆರೆ ಇವನ ಆಳ್ವಿಕೆಗೊಳಪಟ್ಟಿತ್ತು.

ಕ್ರಿ.ಶ. ೧೧೧೨ ಮತ್ತು ೧೧೧೩ನೆಯ ವರ್ಷಗಳ ಶಾಸನಗಳಲ್ಲಿ ಮಹಾಪ್ರಧಾನ ದಂಡನಾಯಕ ಶ್ರೀಪತಿಯರಸನು ಬನವಾಸಿ ಪನ್ನಿರ್ಚ್ಛಾಸಿರ ಮತ್ತು ಪುಲಿಗೆರೆ-೩೦೦ನ್ನು ಆಳುತ್ತಿದ್ದನೆಂದಿದೆ.[೧೩] ಅನಂತಪಾಲನು ಈತನ ಮಯ್ದುನನೆಂದು ಒಂದು ಶಾಸನದಲ್ಲಿ ಹೇಳಿದೆ. ಶ್ರೀಪತಿಗೆ ಈಶ್ವರ ಮತ್ತು ಸೋಮದೇವ ಎಂಬಿಬ್ಬರು ಸೋದರರು ಇದ್ದರು. ೧೧೧೮ರ ಶಾಸನದಲ್ಲಿ ಮಹಾಪ್ರಧಾನ ನಾಗವರ್ಮಯ್ಯ ನಾಯಕನು ಪುಲಿಗೆರೆ, ಬೆಳ್ವೊಲ ಹಾಗೂ ಬನವಾಸಿ ನಾಡುಗಳನ್ನು ಮನೆ ವರ್ಗ್ಗಡೆ, ಮಹಾಪ್ರಧಾನ, ದಂಡನಾಯಕ, ಸೇನಾಧಿಪತಿ ನಾಯಿಪಯ್ಯನ ಆದೇಶದಂತೆ ಪಾಲಿಸುತ್ತಿದ್ದನು. ೧೧೨೩ನೆಯ ಶಾಸನದಲ್ಲಿ ಈತನನ್ನು ಸೂವಿದೇವ ದಂಡಾಧೀಶನೆಂದು ಕರೆಯಲಾಗಿದೆ. ಸಾಯಿಪಯ್ಯ ಸೂವಿದೇವನು ಶ್ರೀಪತಿಯರಸನ ಸೋದರನಾದ ಸೂವಿದೇವನೆಂದೇ ತೋರುತ್ತದೆ. ೧೧೨೩ರ ಶಾಸನದಲ್ಲಿ ಪ್ರಧಾನ ದಂಡನಾಯಕ ಈಶ್ವರಯ್ಯನು ಪುಲಿಗೆರೆಯ ಮಂಡಲೇಶ್ವರನಾಗಿದ್ದನೆಂದು ಹೇಳಿದೆ. ಇವನು ಇನ್ನೂ ಶ್ರೀಪತಿಯ ಸೋದರನೆಂದು ಊಹಿಸಬಹುದು.

ಕಲ್ಯಾಣ ಚಾಲುಕ್ಯ ೬ನೆಯ ವಿಕ್ರಮಾದಿತ್ಯನ ಆಳ್ವಿಕೆಗೆ ಒಳಪಟ್ಟ ಕುಂತಳ ದೇಶದಲ್ಲಿದ್ದ ಮಾಸವಾಡಿ-೧೪೦ ಪ್ರಾಂತವನ್ನು ಪೇರ್ಮಭೂಪಾಲಕ ಆಳುತ್ತಿದ್ದನೆಂದು ಶಾಸನ ತಿಳಿಸುತ್ತದೆ.[೧೪] ಈ ಶಾಸನದಲ್ಲಿ ಈತನನ್ನು

೧೧. ಕ್ರಿ.ಶ. ೧೦೭೨ರ ಗದಗ ಶಾಸನ.

೧೨. ಕ್ರಿ.ಶ. ೧೦೭೪ರ ಲಕ್ಷ್ಮೇಶ್ವರ ಶಾಸನ.

೧೩. ಡಾ. ಜಿ. ಎಮ್. ನಾಗಯ್ಯ-ಆರನೇಯ ವಿಕ್ರಮಾದಿತ್ಯನ ಶಾಸನಗಳು-ಒಂದು ಅಧ್ಯಯನ

೧೪. SII Vol. XI, ii page 165-ಕ್ರಿ.ಶ. ೧೧೧೩ರ ಕಕ್ಕೂರು ಶಾಸನ

ಪೆರ್ಮಾ೯ಭೂಪಾಲಕ, ಪೆರ್ಮಾ೯ಭೂಭುಜ ಪೆರ್ಮಾ೯ನೃಪ: ಎಂದು ವರ್ಣಿಸಿರುವುದಲ್ಲದೆ ಈತ ಮಹಾಮಂಡಳೇಶ್ವರನಾಗಿದ್ದನೆಂದು ಉಲ್ಲೇಖವಾಗಿದೆ.

೬ನೆಯ ವಿಕ್ರಮಾದಿತ್ಯನ ಕಾಲದಲ್ಲಿ ಧರ್ಮವೂಳಲಿನಲ್ಲಿ ಆಳುತ್ತಿದ್ದ ರೆಬ್ಬರಸನನ್ನು ಶಾಸನ ಹೀಗೆ ಉಲ್ಲೇಖಿಸುತ್ತದೆ. ರೆಬ್ಬರಸ ವಿನಯದ ಕಣಿಯು. ದಯೆಗೆ ನೆಲೆಯು ಇಷ್ಟಾರ್ಥವನ್ನು ಕೊರುವವರಿಗೆ ಕಲ್ಪವೃಕ್ಷದಂತೆಯೂ ಬಾಳಿ ಮನುಚರಿತ್ರೆಗೆ ಸಾಕ್ಷಿಯಂತಿದ್ದವನು. ಸಜ್ಜನನಾದ ಈತ ಪಾಪದಿಂದ ದೂರನಾಗಿ ಆಳುತ್ತಿದ್ದನಂತೆ ಆತನ ಕುಲವಧು ಭುವನ ಖ್ಯಾತಿಯನ್ನು ಹೊಂದಿದ 'ಭಾವಿಕಬ್ಬೆ' ಇವರ ಮಗ ಅಜ್ಜಯ್ಯನೆಂಬುವನು ಎಂದು ಈ ಶಾಸನದಲ್ಲಿ ಉಲ್ಲೇಖಿಸಲಾಗಿದೆ.[೧೫]

೬ನೆಯ ವಿಕ್ರಮಾದಿತ್ಯನ ದಂಡನಾಯಕನಾಗಿ ಆಳಿದ ರೆಬ್ಬರಸ ದಂಡಾಧಿಪತಿ ಮತ್ತು ಭಾವಿಕಬ್ಬೆಯರ ಮಗನೇ ಅಜ್ಜಯ್ಯ ನಾಯಕ. ಈತನ ಕುರಿತು ಡಂಬಳ ಶಾಸನ ಹೀಗೆ ವರ್ಣಿಸುತ್ತದೆ. "ಅಜ್ಜಯ್ಯನಾಯಕ ದಂಡಾಧಿಪತಿಯು ಮಹಿಮಾಶಾಲಿಯಾಗಿದ್ದು, ಮಹಾತ್ಮ "ಅಜ್ಜಯ್ಯ ನಾಯಕ ದಂಡಾಧಿಪತಿಯು ಮಹಿಮಾ ಶಾಲಿಯಾಗಿದ್ದು, ಮಹಾತ್ಮನಂತೆ ಶಿವನನ್ನು ಕನಸಿನೊಳಗೆ ಕಂಡು ನಮಃಶಿವಾಯ' ಎಂಬ ಪಂಚಾಕ್ಷರಿಮಂತ್ರ ಜಪಿಸುತ್ತಿದ್ದುದ್ದು "ಕೇಳುಗರಿಗೆ ಅಚ್ಚರಿ ಮೂಡಿಸುತ್ತಿತ್ತಂತೆ. ತಾನು ಆಳುವ ಧರ್ಮವೂಳಲಿನ ಭೂಮಿಯನ್ನು ತನ್ನ ಶಕ್ತಿ ಸಾಮರ್ಥ್ಯಗಳಿಂದ ನ್ಯಾಯಯುತವಾಗಿ ಬಂದ ಧನಕನಕಾದಿಗಳಿಂದ ಪವಿತ್ರವೆಂಬಂತೆ ಧರ್ಮವೂಳಲಿನ ಈಶಾನ್ಯದಿಕ್ಕಿಗೆ ಪೊಳಲಿಗೆ ಕಳಸದಂತೆ ಕಂಗೊಳಿಸುವ ಅಜ್ಜಿಮೇಶ್ವರ ಭವನವನ್ನು ಕಟ್ಟಿಸಿದನು. ಧರ್ಮವೊಳಲಿನ ಪದಿನರುವರು ಸೆಟ್ಟಿಯರು ಮಹಾನಕರಂಗಳ ಪಾದ ಪೂಜೆ ಮಾಡಿ ಊರಿನ ಪೂರ್ವ ದಿಕ್ಕಿನಲ್ಲಿ ಒಂದು ಮತ್ತರ ತೂಟವನ್ನು ದೇವರಿಗೆ ದತ್ತಿಯಾಗಿ ನೀಡಿದುದನ್ನು ಈ ಶಾಸನ ತಿಳಿಸುತ್ತದೆ.[೧೬]

ಈತನನ್ನು ಡಂಬಳದ ಶಾಸನವು ಬರಮ್ಮಿದಂಡೇಶ್ವರ ಬಂಮಣ ದಂಡನಾಥ ಬಂಮರಸ ಎಂದು ಕರೆದಿದೆ. ಈತನು ದೇವತೆಗಳ ಕೋದಂಡವೆನಿಸಿದ ಅಗಸ್ತ್ಯಮುನಿ ಗೋತ್ರದಲ್ಲಿ ಜನಿಸಿದವನು. ಡಂಬಳದ ಅಜ್ಜಿಮೇಶ್ವರ ದೇವಾಲಯ (ದೊಡ್ಡಬಸಪ್ಪ ದೇವಾಲಯ)ದ ಮುಂದೆ ನಿಂತಿರುವ ಕರಿಕಲ್ಲಿನ ೮೭ ಸಾಲುಗಳ ಶಾಸನವು ಹೀಗೆ ವರ್ಣಿಸುತ್ತದೆ.[೧೭] "ವಿಷ್ಣುವಿಗೆ ಲಕ್ಷ್ಮೀಯಂತೆ, ರುದ್ರನಿಗೆ ಪಾರ್ವತಿಯಿರುವಂತೆ, ಬ್ರಹ್ಮನಿಗೆ ಸರಸ್ವತಿಯಿದ್ದಂತೆ ವಿಪ್ರವಂಶ ತಿಲಕನಾದ ಬಂಮ್ಮಿದೇವನಿಗೆ ಸತಿಯಾದವಳು ಜಕ್ಕಿಯಬ್ಬೆ. ಈ ಇಬ್ಬರ ಮಗನೇ ಕಾಮತಮೂಪತಿ, ಕಾಮ ಚಪೂಪತಿಯ ಹೆಂಡತಿ ಕಾಳಲದೇವಿ ಇವರಿಬ್ಬರ ಮಗನೆ ಬಂಮಣ ದಂಡನಾಥ. ಈತನ ಮಗ ಕೇಶವದಂಡನಾಥ ಎಂದು ತಿಳಿಸುತ್ತದೆ. ಈ ವಂಶಾವಳಿಯನ್ನು ಹೀಗೆ ಕಟ್ಟಬಹುದಾಗಿದೆ.

---

೧೫. ಧಾರವಾಡ ಜಿಲ್ಲಾ ಶಾಸನ ಸೂಚಿ, ಡಾ. ಎಂ. ಎಂ. ಕಲಬುರ್ಗಿ.

೧೬. SII Vol. XI, ii page 165-ಕ್ರಿ.ಶ. ೧೧೧೩ರ ಶಾಸನ.

೧೭. SII Vol. XI, ii page 175-ಕ್ರಿ.ಶ. ೧೧೨೪ರ ಡಂಬಳ ಶಾಸನ.

ಬಂಮ್ಮಿದೇವ + ಜಕ್ಕಿಯಬ್ಬೆ

|

ಕಾಮಚಮೂಪತಿ + ಕಾಳಲದೇವಿ

|

ಬಂಮಣ ದಂಡನಾಥ

|

ಕೇಶವ ದಂಡನಾಥ

ಕೇಶವದಂಡನಾಥ ಎದುರಾಗುವ ಸೈನ್ಯಬಲಕ್ಕೆ ಶೌರ್ಯವನ್ನು ತೋರಿದ, ದಾನಗುಣವನ್ನು ಪಡೆದ, ಹಸಿವಿನಿಂದ ಬಂದವರಿಗೆ ಅನ್ನದಾನವನ್ನು ನೀಡಿದ, ಹೆದರಿ ಬಂದ ಅರಸರಿಗೆ ಆಶ್ರಯ ನೀಡಿದ, ಜಗತ್ತಿನ ಜನವೆಲ್ಲ ಹೊಗಳುವ ಈ ಎಲ್ಲ ಗುಣಗಳನ್ನು ಹೊಂದಿದನು. ಸಾಹಸ, ಧೀರತ್ವಗಳಿಗೆ ನೆಲೆಯಾದ ಉತ್ತಮ ವಿದ್ವಾಂಸನು ಅರಿಸೈನ್ಯಕ್ಕೆ ಮುರಾರಿಯಂತಿರುವವನು ಕೇಶವದಂಡನಾಥ. ನೀಡುವ ಕಾಯುವ ತೇಜಸ್ವಿಯಾದ ನಿರಾತಂಕನಾದ ಸನಾತನದೊಂದಿಗೆ ಕೇಶವ ಶಾಶ್ವತವಾಗಿ ನೆಲೆನಿಂತನು ಎಂದು ಶಾಸನ ವರ್ಣಿಸುತ್ತದೆ.[೧೮]

ನರಸಿಂಹ ವೀರನಾಗಿ ಚಕ್ರವರ್ತಿಯ ಸಾಮ್ರಾಜ್ಯವನ್ನು ವಿಸ್ತರಿಸಿದನು. ಪರಸ್ತ್ರೀಯರಿಂದ ಹೊರ ಇದ್ದವನೆಂದು ಅವುಗಳ ಕುಲ ಸಂಹಾರಕನೆಂದು ಶರಣಾಗತರನ್ನು ರಕ್ಷಿಸುವವನೆಂದು ಗಂಭೀರ ಧೀರನೆಂದು ಶಾಸನ ತಿಳಿಸುತ್ತದೆ.[೧೯] ಹೀಗೆ ಕಲ್ಯಾಣದ ಚಾಲುಕ್ಯರ ಆಳ್ವಿಕೆಯಲ್ಲಿ ದಂಡಾಧಿಕಾರಿಗಳಾಗಿ ರಾಮದೇವ ದಂಡನಾಥ, ಸೋಮ, ತೇಜಮಯ್ಯ ದಂಡನಾಯಕ, ಬಾಕಣ್ಣ ದಂಡನಾಥ ರೇವಣ ದಂಡನಾಥರು ಆಳ್ವಿಕೆ ನಡೆಸಿದರು. ಅದೇ ರೀತಿ ಈ ಪರಿಸರದಲ್ಲಿ ಮಹಾಪ್ರಧಾನರಾಗಿ, ಸೇನಾಧಿಪತಿಗಳಾಗಿ ಹೆಗ್ಗಡೆ ಕಾಳಿಮರಸ, ಅತಿಸೇವ್ಯ ಕುಪ್ಪ ಭೂಪತಿಯರು ಪ್ರಸಿದ್ಧರಾಗಿದ್ದರು ಎಂಬುದು ಶಾಸನಗಳಿಂದ ತಿಳಿದು ಬರುತ್ತದೆ.[೨೦]

೨ನೇ ತೈಲಪನ ಆಳ್ವಿಕೆಯಲ್ಲಿ ಬೆಳ್ವೊಲ-೩೦೦ರ ಸಾಮಂತರಾಗಿ ಶೋಭರಸ ಆಳುತ್ತಿದ್ದನು. ಇವನ ಕಾಲದಲ್ಲಿ ಮುಳಗುಂದ-೧೨ರ 'ಮನ್ನೆ'ರಾಗಿ ಆಳಿದವರು. 'ಮುಳಗುಂದದ ಸಿಂಧರು' ಇವರ ಮೂಲ ಪುರುಷ ಜಾತರಸ. ಇವನು ೨ನೆಯ ತೈಲಪನ ಸಾಮಂತರಾಗಿ ಕದಂಬಳಿಗೆ-೧೦೦೦ವನ್ನು ಆಳುತ್ತಿದ್ದನು. ಈತನ ನಂತರ ಸಿಂದ ಮನೆತನದ ಕೂರಲಗುಂದ ಮುಳಗುಂದ-೧೨ನ್ನು ಮನ್ನಿಯನ್ನಾಗಿ ಆಳಿದನೆಂದು ಹೊಸೂರು ಶಾಸನ ಹೇಳುತ್ತದೆ.[೨೧] ಕೂರಲಗುಂದನು ಒಳ್ಳೆಯ ಪರಾಕ್ರಮಿಯಾಗಿದ್ದನು. ಈತನನ್ನು ಮುಳಗುಂದ ವಿದ್ಯಾಧರನೆಂದು ಹೊಸೂರಿನ

---

೧೮. SII Vol. XI, i page 30-ಕ್ರಿ.ಶ. ೧೨ನೇ ಶತಮಾನದ ಮೇವುಂಡಿ ಶಾಸನ.

೧೯. ಅದೇ.

೨೦. ಅದೇ.

೨೧. ಕ್ರಿ.ಶ. ೧೧೦೩ರ ಹೊಸೂರು ಶಾಸನ. SII ನಂ. ೧೫, ಪು.೪೩.

ನಾಡಗಾವುಂಡನ ಅಧಿಕಾರವೂ ಈತನದಾಗಿತ್ತು. ಇವನ ಕಾಲದಲ್ಲಿ ಅಯ್ದುಗಾವುಂಡನು ಮುಳಗುಂದ-೧೨ರ ಹೊಸೂರು ಗ್ರಾಮದ ವಾರಾಡಳಿತ ನೋಡಿಕೊಳ್ಳುವ ಪ್ರಭುಗಾವುಂಡನಾಗಿದ್ದನು. ನಂತರ ಭಿಮರಸ, ಸಿಂದ್ದರಸ ಕಂಚರಸನು ಮುಳಗುಂದದ ಮನ್ನೆಯರಾಗಿ ಆಳ್ವಿಕೆ ನಡೆಸಿದರು.

೨ನೇ ಜಗದೇಕಮಲ್ಲನ ಕಾಲದಲ್ಲಿ ಸಿಂಧ ಬೊಪ್ಪರಸದೇವನು ಮಹಾಸಾಮಂತನಾಗಿ ಮುಳಗುಂದ-೧೨ನ್ನು ಆಳಿದನು ನಂತರ ಹೊಲ್ಲರಸ ಈತನ ನಂತರ ರಾಜಕೀಯ ವಿಪ್ಲವಕ್ಕೆ ತುತ್ತಾಗಿ ಮುಳಗುಂದದಲ್ಲಿ ಸಿಂಧ ಮನೆತನವು ಕಣ್ಮರೆಯಾಯಿತು. ಈ ವಂಶದ ಚಿತ್ರ ಹೀಗಿದೆ.

ಜಾತರಸ
|
ಕೊರಲಗುಂದ
|
ಸಿಂಧರಸ
|
ಕಿಂಚರಸ
|
ಭೀಮರಸ
|
ಬೆಪ್ಪರಸ
|
ಹೊಲ್ಲರಸ

ಕಲ್ಯಾಣದ ಚಾಲುಕ್ಯರ ೨ನೆಯ ತೈಲಪ ೧೪ವರ್ಷಗಳ ಆಳ್ವಿಕೆ ಮಾಡಿದನು ಇವನ ಆಳ್ವಿಕೆಯಲ್ಲಿ ಲಕ್ಕುಂಡಿ ಮುಖ್ಯ ಕೇಂದ್ರವಾಗಿತ್ತು. ಈತನ ಮಹಾಮಂತ್ರಿ ದಲ್ಲಪನು ಲಕ್ಕುಂಡಿಯ ಆಡಳಿತವನ್ನು ನೋಡಿಕೊಳ್ಳುತ್ತಿದ್ದನು. ಸತ್ಯಾಶ್ರಯನ ಕಾಲದಲ್ಲಿ (೯೯೭-೧೦೦೮) ಲಕ್ಕುಂಡಿಯನ್ನು ಕಲ್ಯಾಣಿ ಚಾಲುಕ್ಯರ ಚರ್ಕವರ್ತಿ ಅಹವಮಲ್ಲ ತೈಲಪನ ಮಗ ಇರಿವಬೆಡಂಗ ಲಕ್ಕುಂಡಿಯ ಉಸ್ತುವಾರಿ ನೋಡಿಕೊಳ್ಳುತ್ತಿದ್ದನು. ಈ ಚಾಲುಕ್ಯ ಚರ್ಕವರ್ತಿಯ ಮಹಾಮಂತ್ರಿ ನಾಗದೇವನಿಗೆ ಆಂಧ್ರಪ್ರದೇಶದ ವೆಂಗಿಮಂಡಳದ ಈರ್ವರು ಕನ್ಯೆಯರನ್ನು ಧಾರೆಯೆರೆದು ವಿವಾಹ ಮಾಡಿಕೊಡಲಾಗುತ್ತದೆ. ಕೆಲವರ್ಷಗಳ ನಂತರ ಯುದ್ಧದಲ್ಲಿ ನಾಗದೇವನು ವೀರ ಮರಣ ಹೊಂದುತ್ತಾನೆ. ಇವನ ಹೆಂಡಂದಿರೆ ಅತ್ತಿಮಬ್ಬೆ ಹಾಗೂ ಇವಳ ಸಹೋದರಿ ಗುಂಡುಮಬ್ಬೆ. ಅತ್ತಿಮಬ್ಬೆ ಲಕ್ಕುಂಡಿಯನ್ನು

ಸುವರ್ಣಾಕ್ಷರಗಳಲ್ಲಿ ಬರೆದಿಡುವಂತಹ ಕಾರ್ಯಗಳನ್ನು ಮಾಡಿದಳು. ಇವಳ ನಂತರ ದಶವರ್ಮನ ಮಗನಾದ ೨ನೆಯ ಜಯಸಿಂಹನು (೧೦೧೫-೪೯) ರವರೆಗೆ ಲಕ್ಕುಂಡಿಯಲ್ಲಿ ಆಡಳಿತ ಮಾಡಿದನು. ಈತನ ನಂತರ ಸಾಮಂತನಾದ ದಾಸರಸನ ಕಾಲಕ್ಕೆ ಇತನ ಪ್ರಾಂತ್ಯಕ್ಕೆ ಲಕ್ಕುಂಡಿ ಸೇರಿತ್ತು. ೧೦೬೮ರಿಂದ ೭೫ರವರೆಗೆ ಆಳ್ವಿಕೆ ಮಾಡಿದ ಈತನ ಆಳ್ವಿಕೆಯಲ್ಲಿ ಸಾಮಂತನಾಗಿದ್ದ ಮರುಳಮಯ್ಯ ಲಕ್ಕುಂಡಿಯನ್ನು ನೋಡಿಕೊಳ್ಳುತ್ತಿದ್ದನು. ನಂತರ ೬ನೆಯ ವಿಕ್ರಮಾದಿತ್ಯನ ಆಡಳಿತ ೫೦ ವರ್ಷ ಕಾಲ (೧೦೭೬-೧೧೨೬)ದಲ್ಲಿ ಲಕ್ಕುಂಡಿಯ ಸೋಮೇಶ್ವರ ದೇವಾಲಯ ನಿರ್ಮಾಣವಾಯಿತು. ಅಲ್ಲದೇ ಲಕ್ಕುಂಡಿಯಲ್ಲಿ ಬಂಗಾರದ ಟಂಕಶಾಲೆಯು ಸ್ಥಾಪಿಸಲ್ಪಟ್ಟಿತ್ತು. ಈತನ ಕಾಲದಲ್ಲಿಯೇ ಚೋಳರ ದಾಳಿಗೆ ಸಿಕ್ಕು ಹಾಳಾಗಿದ್ದ ಕಾಶಿ ವಿಶ್ವನಾಥ ದೇವಾಲಯದ (೧೦೮೨ರಲ್ಲಿ) ಜೀರ್ಣೋದ್ಧಾರ ಕಾರ್ಯ ನಡೆಯಿತು. ನಂತರ ಅಧಿಕಾರಕ್ಕೆ ಬಂದ ೩ನೇ ಸೋಮೇಶ್ವರನ ಕಾಲದಲ್ಲಿ ಸಾಮಂತನಾದ ಹೊಯ್ಸಳರ ವಿಷ್ಣುವರ್ಧನ ಲಕ್ಕುಂಡಿಯಲ್ಲಿ ಕೆಲಕಾಲ ಆಳ್ವಿಕೆ ಮಾಡಿದನು. ನಂತರ ಬಂದ ೩ನೆಯ ತೈಲಪ (೧೧೫೦-೫೬)ಲಕ್ಕುಂಡಿಯಲ್ಲಿ ರಾಜ್ಯಭಾರ ಮಾಡಿದ ಬಗ್ಗೆ ಲಕ್ಕುಂಡಿಯ ಶಾಸನಗಳು ಉಲ್ಲೇಖಿಸುತ್ತವೆ. ೪ನೇ ಸೋಮೇಶ್ವರ ೧೧೮೪ ರಿಂದ ೧೧೯೭ರವರೆಗೆ ಲಕ್ಕುಂಡಿಯಲ್ಲಿ ರಾಜ್ಯಭಾರ ಮಾಡಿದ ಬಗ್ಗೆ ಲಕ್ಕುಂಡಿಯ ಶಾಸನಗಳು ಉಲ್ಲೇಖಿಸುತ್ತವೆ.[೨೨] ಇವನ ಸಾಮಂತರಾದ ದೇವಗಿರಿಯ ಯಾದವರ ಬಿಲ್ಲಮನು ಕೆಲಕಾಲ ಆಡಳಿತ ನಡೆಸಿದನು. ಅನಂತರ ಈತನ ಪುತ್ರ ಜೈತುಗಿ ಆಡಳಿತ ಮುಂದುವರಿಸಿದ್ದರ ಬಗ್ಗೆ ಕಂಡು ಬರುತ್ತದೆ.

ಈ ರೀತಿಯಾಗಿ ಕಲ್ಯಾಣದ ಚಾಲುಕ್ಯರು ಗದಗ ಪರಿಸರದಲ್ಲಿ ಆಡಳಿತ ಮಾಡಿ ೧೦ನೆಯ ಶತಮಾನದ ಉತ್ತರಾರ್ಧಕ್ಕೆ ರಾಷ್ಟ್ರಕೂಟರ ಪ್ರಭಾವ ಕಡಿಮೆಯಾಗುತ್ತಿದ್ದಂತೆ ಕಲ್ಯಾಣದ ಚಾಲುಕ್ಯರು ತಲೆಯೆತ್ತಿದರು. ಜೈನ ಮತವನ್ನು ಪೋಷಿಸುವ ಹೊಣೆ ಈಗ ಚಾಲುಕ್ಯರು ಹಿಂದೂ ಧರ್ಮದವರು ಶೈವ ಪಕ್ಷಪಾತಿಗಳೂ ಆಗಿದ್ದರಿಂದ ಮೊದಲಿನಂತೆ ಪ್ರೋತ್ಸಾಹ ಆಶ್ರಯ ಜೈನ ಧರ್ಮಕ್ಕೆ ದೊರೆಯದೆ ಹೋಯಿತು. ಆದರೂ ಕೆಲವು ರಾಣಿಯರು ಸಾಮಂತ ಅರಸರು ದಂಢಾಧಿಕಾರಿಗಳು ಮಾಂಡಲಿಕರು ಜೈನ ಧರ್ಮಕ್ಕೆ ಪ್ರೋತ್ಸಾಹ ನೀಡಿದರು.

ತಿರುಳುಗನ್ನಡ ನಾಡಿನ ಮಧ್ಯವರ್ತಿ ನಾಡಾದ ಮಾಸವಾಡಿ ನಾಡಿನ ಕೇಂದ್ರ ಸ್ಥಳವಾದ ಡಂಬಳದಲ್ಲಿ ದೊರೆಯುವ ೧೦೫೯ರ ಶಾಸನವು ಜೈನಧರ್ಮದ ಉಲ್ಲೇಖವನ್ನೊಳಗೊಂಡ ಪ್ರಥಮ ಶಾಸನವಾಗಿದ್ದು ಕಲ್ಯಾಣ ಚಾಲುಕ್ಯರ ಅರಸ ಭುವನೈಕ್ಯ ಮಲ್ಲದೇವ ಆಳುತ್ತಿದ್ದಾಗ ಚತುಸ್ಸಮಯ ಸಮುದ್ದಾರಣರೆನಿಸಿದ ಹದಿನಾರು ಮಹಾಜನಗಳ ಸಮ್ಮುಖದಲ್ಲಿ ಬೀರಯ್ಯ ಶೆಟ್ಟಿಯು ನಗರ ಜಿನಾಲಯಕ್ಕೆ ನೀಡಿದ ಸುವರ್ಣ ದಾನವನ್ನು ತಿಳಿಸುತ್ತದೆ. ಹಾಗೆಯೇ ಈ ದಾನವನ್ನು ಇವರ ಸಮೂಹದವರು ಕಾಲಾಂತರದಲ್ಲಿ ನಡೆಸಿಕೊಂಡು ಬರುತ್ತಾರೆ ಎಂದು ಸೂಚಿಸುತ್ತದೆ.

ಇನ್ನೊಂದು ಶಾಸನದಲ್ಲಿ ಎಕ್ಕಟಗರಕಲ್ಲಿ ಸೆಟ್ಟಿಯವರ ಮೊಮ್ಮಗಳೂ ಮಹದೇವಶೆಟ್ಟಿಯರ ಮಗಳೂ ಆದ ಮಲ್ಲಿಯಕ್ಕ ಎನ್ನುವವಳು ಬಸದಿಯೊಂದನ್ನು ಕಟ್ಟಿಸಿ ಅಲ್ಲಿ ಪಾರ್ಶ್ವನಾಥನ ಪ್ರತಿಮೆ ಪ್ರತಿಷ್ಠಾಪಿಸಿದ್ದನ್ನು

---

೨೨. ಕ್ರಿ.ಶ. ೧೧೯೨ ರ ಲಕ್ಕುಂಡಿ ಶಾಸನ.

ಪ್ರಸ್ತಾಪಿಸಲಾಗಿದೆ. ಹೀಗೆ ಡಂಬಳದಲ್ಲಿ ನಗರ ದೇವಾಲಯ, ಮಲ್ಲಿಯಕ್ಕನ ಬಸದಿ ಮತ್ತು ದಾಳಿಸೆಟ್ಟಿಯ ಬಸದಿ ಎಂಬ ಮೂರು ಜೈನ ಬಸದಿಗಳ ಉಲ್ಲೇಖ ಶಾಸನಗಳಲ್ಲಿದ್ದರೂ ಈಗ ಯಾವುದೇ ಬಸದಿಯ ಕುರುಹುಗಳು ದೊರೆತಿಲ್ಲ ಆದರೆ ಮಲ್ಲಿಯಕ್ಕನ ಬಸದಿಯ ಪಾರ್ಶ್ವನಾಥನ ಪ್ರತಿಮೆ ಗದಗ ಮ್ಯೂಸಿಯಂನಲ್ಲಿದೆ.

ಅದೇ ರೀತಿ ದಾನಚಿಂತಾಮಣಿ ಅತ್ತಿಮಬ್ಬೆ ಲಕ್ಕುಂಡಿಯಲ್ಲಿ ಜೈನಧರ್ಮ ಪರಂಪರೆಯನ್ನು ಬೆಳೆಸಿದ್ದಾಳೆ. ಲಕ್ಕುಂಡಿಯಲ್ಲಿ ಬ್ರಹ್ಮ ಜಿನಾಲಯವನ್ನು ಸ್ಥಾಪಿಸಿ[೨೩] ಜೈನ ಪರಂಪರೆಗೆ ಜೀವ ತುಂಬಿದ್ದಾಳೆ ಈ ಕಾಲದಲ್ಲಿ.

ಕಲ್ಯಾಣದ ಚಾಲುಕ್ಯರ ಪರಧರ್ಮಸಹಿಷ್ಣುತೆ ಜೈನ ಧರ್ಮಕ್ಕೆ ಅನುಕೂಲಕರವಾಗಿ ೨ನೇ ತೈಲಪ ಮತ್ತು ಅವನ ಮಗ ಇರಿವ ಬೇಡಂಗ ಅನೇಕ ಜೈನ ಮಂತ್ರಿಗಳನ್ನು ದಂಡಾಧೀಶರನ್ನು ನೇಮಿಸಿಕೊಂಡಿದ್ದನು. ೧ನೆಯ ಸೋಮೇಶ್ವರನ ಆಳ್ವಿಕೆ ಕಾಲದಲ್ಲಿ ಜೈನ ಮಹಾಕವಿ ಮಲ್ಲಿಸೇನ ಸಾಹಿತ್ಯಕೃಷಿ ಮಾಡಿದನು. ಇವನ ಪತ್ನಿಯಾದ ಮೂಲತಃ ಜಿನಭಕ್ತಳಾದ ಬಾಚಿಲಾದೇವಿ ದಂಪತಿಗಳ ಮಗನಾದ ೬ನೆಯ ವಿಕ್ರಮಾದಿತ್ಯನು ಸಹ ಜೈನ ಧರ್ಮದ ಅಭಿಮಾನ ರಕ್ತಗತವಾಗಿ ಬಂದಿತ್ತು. ಈತನ ಕಾಲದಲ್ಲಿ ಜೈನ ಮುನಿಗಳ ಚಟುವಟಿಕೆಗಳಿಗೆ ಬೆಂಬಲ ದೊರಕಿತು. ಬಸದಿಗಳ ನಿರ್ಮಾಣದ ಕಾರ್ಯವು ನಿರಂತರವಾಗಿ ನಡೆಯಿತು. ಚಾಲುಕ್ಯ ಸಾಮ್ರಾಜ್ಯವು ಜೈನಧರ್ಮದ ಕೇಂದ್ರವಾಗಿ ರೂಪುಗೊಂಡಿತು.

ಕಲ್ಯಾಣದ ಚಾಲುಕ್ಯರ ೫ನೆಯ ವಿಕ್ರಮಾದಿತ್ಯನ ತಂಗಿ ಇಮ್ಮಡಿ ಜಯಸಿಂಹನ ಅಕ್ಕ 'ರಣಭೈರವಿ' ಎಂಬ ಬಿರುದನ್ನು ಹೊಂದಿದ ಅಕ್ಕಾದೇವಿ ಕ್ರಿ.ಶ. ೧೦೫೦ರಲ್ಲಿ ಮಾಸವಾಡಿ ಪ್ರದೇಶದಲ್ಲಿ ಆಳ್ವಿಕೆ ನಡೆಸಿದ್ದರ. ಉಲ್ಲೇಖ ಶಾಸನಗಳಲ್ಲಿದೆ.[೨೪] ಇವಳ ಕಾಲದಲ್ಲಿಯೇ ಸೂಡಿಯ ಅಚಲೇಶ್ವರ ದೇವಸ್ಥಾನವನ್ನು ನಿರ್ಮಿಸಲಾಯಿತೆಂಬುದು ತಿಳಿದು ಬರುತ್ತದೆ.

ಹೀಗೆ ಕಲ್ಯಾಣದ ಚಾಲುಕ್ಯರು ಗದಗ ಪರಿಸರದಲ್ಲಿ ಆಳ್ವಿಕೆ ನಡೆಸಿ ಜೈನ ಹಾಗೂ ಶೈವ ಧರ್ಮಕ್ಕೆ ಪ್ರೋತ್ಸಾಹ ನೀಡಿ ಪ್ರಬಲ ಅರಸು ಮನೆತನವಾಗಿ ಕಂಡು ಬರುತ್ತದೆ.

ಕಲ್ಯಾಣದ ಚಾಲುಕ್ಯರ ಸಾಮಂತರು ಹಾಗೂ ಸಂಬಂಧಿಗಳಾದ ಕಳಚೂರಿಗಳು ಕಲ್ಯಾಣಿ ಚಾಲುಕ್ಯರನ್ನು ಪದಚ್ಯುತಿಗೊಳಿಸಿ ರಾಜ್ಯಭಾರ ಪ್ರಾರಂಭಿಸಿದ್ದರಿಂದ ಬೆಳ್ವೊಲ-೩೦೦ರ ಪ್ರದೇಶದ ಪ್ರಮುಖ ಭಾಗವಾಗಿದ್ದ ಲಕ್ಕುಂಡಿ, ಪುಲಿಗೇರಿ-೩೦೦, ಮಾಸವಾಡಿ-೧೪೦, ಮುಳಗುಂದ-೧೨, ನರೆಗಲ್ಲು-೧೨ ಪ್ರದೇಶಗಳು ಇವರ ಅಧೀನಕ್ಕೆ ಬರುವ ಮೂಲಕ ೩೦ ವರ್ಷಗಳ ಆಡಳಿತ ನಡೆಸಿದರು.

ಲಕ್ಷ್ಮೇಶ್ವರದಲ್ಲಿಯೇ ಕಲಚೂರಿ ವಂಶದ ಬಿಜ್ಜಳನ ಮೂರು ಶಾಸನಗಳೂ, ಸಂಕಮನ ಒಂದು ಶಾಸನವೂ ದೊರೆತಿವೆ. ಕ್ರಿ.ಶ. ೧೧೬೧ರ ಶಾಸನವು ಪುಲಿಗೆರೆ-೩೦೦ನ್ನು ವಸುವದಣ್ಣ ನಾಯಕನು ಆಳುತ್ತಿದ್ದನು.[೨೫] ಆರು

---

೨೩. SII 11-1 ಸಂಖ್ಯೆ ೫೨/೫೩, ಕ್ರಿ.ಶ. ೧೦೦೭ ರ ಲಕ್ಕುಂಡಿ ಶಾಸನ ಪು. ೩೯-೪೩.

೨೪. SII Vol. XI, i page 86-ಕ್ರಿ.ಶ. ೧೦೫೦ರ ಕೊರ್ಲಹಳ್ಳಿ ಶಾಸನ.

೨೫. SII Vol. XX, No. 144, 47, 03.

ವರ್ಷಗಳ ಬಳಿಕ ೧೧೬೭ರಲ್ಲಿ ಈ ವಿಭಾಗ ಶ್ರೀಧರ ದಂಡನಾಥನ ಆಳ್ವಿಕೆಗೊಳಪಟ್ಟಿತು. ಶಾಸನದಲ್ಲಿ ಈತನು ಅಗಸ್ತ್ಯಗೋತ್ರದವನೆಂದು ಸೂಚಿಸಿ ಇವನ ವಂಶಾವಳಿಯನ್ನು ಹೀಗೆ ಕೊಡಲಾಗಿದೆ.




ಲಕ್ಷ್ಮೇಶ್ವರದಲ್ಲಿ ದೊರೆತ ಬಿಜ್ಜಳನ ಇನ್ನೊಂದು ಶಾಸನ ತ್ರುಟಿತವಾಗಿದೆ. ಇದರ ಕಾಲ ತಿಳಿಯದು. ಇದರಲ್ಲಿ ರಾಮದೇವ ದಂಡನಾಥನ ಉಲ್ಲೇಖವಿದ್ದು ಅವನ ವಂಶಾವಳಿಯನ್ನು ಕೊಡಲಾಗಿದೆ. ಬಿಜ್ಜಳ ಸುಮಾರು ೧೧೫೨ರಿಂದ ೧೧೬೮ರವರೆಗೂ ಆಳಿದನೆಂದೂ ಹೇಳಬಹುದು. ಆದ್ದರಿಂದ ಈ ಶಾಸನ ಬಹುಶಃ ಕ್ರಿ.ಶ. ೧೧೬೧ಕ್ಕೆ ಮೊದಲಿನದಿರಬಹುದು. ೧೧೬೧ರಲ್ಲಿ ವಸುವದಣ್ಣ ನಾಯಕನು ನಂತರದ ಒಂದೆರೆಡು ವರ್ಷಗಳ ಬಳಿಕ ಶ್ರೀಧರನೂ ಪುಲಿಗೆರೆಯ ಅಧಿಕಾರಿಗಳಾಗಿದ್ದರೆಂದು ಹೇಳಬಹುದು. ತಾನು ಸ್ವತಂತ್ರನಾಗಿ ಆಳತೊಡಗಿದಾಗ ಬಿಜ್ಜಳನು ರಾಮದೇವನನ್ನು ಪುಲಿಗೇರಿಯ ಅಧಿಕಾರಿಯಾಗಿ ನಿಯಮಿಸಿರಬಹುದು.[೨೬]

ಕಳಚೂರಿಗಳ ಕಾಲದಲ್ಲಿ ಮಹಾಪ್ರಧಾನ ಕೇಶವಯ್ಯ ಎಂಬುವವನು ನರೆಯಂಗತ-೧೨ (ನರೇಗಲ್) ಗದಗ ಭಾಗಗಳನ್ನು ಆಳುತ್ತಿದ್ದನೆಂದು ಶಾಸನಗಳು ಉಲ್ಲೇಖಿಸುತ್ತವೆ.

ಹೀಗೆ ಕಲ್ಯಾಣದ ಚಾಲುಕ್ಯರ ನಂತರ ೩೦ ವರ್ಷಗಳ ಆಳ್ವಿಕೆ ನಡೆಸಿದ ಕಲಚೂರಿ ಮನೆತನದ ಅರಸರು ಹಿಂದಿನ ರಾಜರಂತೆಯೇ ಪ್ರೋತ್ಸಾಹ ನೀಡಿದರು. ಇತಿಹಾಸದ ಮಟ್ಟದಲ್ಲಿ ಚಿರಸ್ಮರಣೀಯರಾಗಿದ್ದಾರೆ. ಬಿಜ್ಜಳನ ಆಳ್ವಿಕೆಯ ನಂತರ ಇವನಂತೆ ಬಲಿಷ್ಠ ಅರಸರು ಬರದ ಕಾರಣ ಕಲಚೂರಿ ಮನೆತನದ ಆಡಳಿತ ನಾಶವಾಗಿ ಕರ್ನಾಟಕವು ಹೊಯ್ಸಳರು ಹಾಗೂ ಯಾದವರ ಆಡಳಿತಕ್ಕೆ ಒಳಪಟ್ಟಿತು. ಕಲಚೂರಿಗಳು ಸಹ ಸರ್ವಧರ್ಮ ಸಮನ್ವಯತೆಯನ್ನು ಪಾಲಿಸಿಕೊಂಡು ಬಂದಿದ್ದಾರೆ. ಆದರೆ ಇವರ ಸಾಮ್ರಾಜ್ಯ ನಾಶಕ್ಕೆ ಮುಖ್ಯ ಕಾರಣ ವಚನಕಾರರ ಚಳುವಳಿಯನ್ನು ಎದುರಿಸಿದೆ ನಾಶವಾಯಿತು.

ಹೊಯ್ಸಳರು ಕೆಲಕಾಲ ಕಲ್ಯಾಣದ ಚಾಲುಕ್ಯರ ಮಾಂಡಲಿಕರಾಗಿದ್ದು ೧೧ನೆಯ ಶತಮಾನದ ಆದಿಭಾಗದಲ್ಲಿ ಪ್ರಾಬಲ್ಯಕ್ಕೆ ಬಂದರು. ದ್ವಾರ ಸಮುದ್ರ ಇವರ ರಾಜಧಾನಿಯಾಗಿತ್ತು.

೨೬. SII Vol. XX, No. 99

೬ನೆಯ ವಿಕ್ರಮಾದಿತ್ಯ ನಂತರ ಸ್ವತಂತ್ರ್ಯ ರಾಜನೆಂದು ಆಳ್ವಿಕೆ ನಡೆಸಿದ ವಿಷ್ಣುವರ್ಧನನು, ಗಂಗವಾಡಿ, ನೋಳಂಬವಾಡಿ, ಬನವಾಸಿ ಹಾನಗಲ್ಲು ಪುಲಿಗೆರೆ ಮುಂತಾದ ಕೃಷ್ಣನದಿಯ ವರೆಗಿನ ಪ್ರದೇಶಗಳನ್ನು ಬಂಕಾಪುರದ ನೆಲೆವಿಡಿನಿಂದ ಆಳುತ್ತಿದ್ದನೆಂದು ಕ್ರಿ.ಶ. ೧೧೪೯ರ ಶಾಸನವು ಉಲ್ಲೇಖಿಸುತ್ತದೆ. ಬಹುಶಃ ಚಾಲುಕ್ಯರು ತಮಗೆ ನಿಷ್ಠುರರಾಗಿದ್ದ ಪಾಂಡ್ಯರನ್ನು ಇಂತಹ ಸಮಯದಲ್ಲಿ ನೇಮಿಸಿರಬೇಕು. ಪುಲಿಗೆರೆಯ ಪಿರಿಯ ಮನ್ನೆಯರಾಗಿ ನೇಮಿಸಿರಬೇಕು.

ಕ್ರಿ.ಶ. ೧೧೮೭ ಹಾಗೂ ೧೧೯೨ರ ಮಧ್ಯದಲ್ಲಿ ಗದಗ ತಾಲೂಕಿನ ಸೊರಟೂರಿನ ಹತ್ತಿರ ದೇವಗಿರಿ ಯಾದವರ ದೊರೆ ಭಿಲ್ಲಮನ ಮಗನಾದ ಜೈತುಗಿಯ ಜೊತೆಯುದ್ಧ ಮಾಡಿ ಅವನನ್ನು ಸೋಲಿಸಿದನು.[೨೭] ಲಕ್ಕುಂಡಿ ಪ್ರದೇಶವನ್ನು (ಬೆಳ್ವೊಲ-೩೦೦ ಪ್ರದೇಶ) ತನ್ನ ಸ್ವಾಧೀನಕ್ಕೆ ತೆಗೆದುಕೊಂಡನಲ್ಲದೇ ಲಕ್ಕುಂಡಿಯನ್ನು ತನ್ನ ಎರಡನೆಯ ರಾಜಧಾನಿಯನ್ನಾಗಿ ಮಾಡಿಕೊಂಡನು. ಆಗ ಹೊಯ್ಸಳರ ಪ್ರತಿನಿಧಿಯಾಗಿ ಮಹಾಮಂಡಲೇಶ್ವರ ಆಡಳಿತ ನೋಡಿಕೊಳ್ಳುತ್ತಿದ್ದನು. ಈತನ ಆಡಳಿತ ಕಾಲದಲ್ಲಿ ಲಕ್ಕುಂಡಿಯಲ್ಲಿ ಚಾಲುಕ್ಯ ಶೈಲಿಗೆ ಹೊಯ್ಸಳ ಶೈಲಿಯನ್ನು ಸಮ್ಮತಿಸಿಕೊಂಡು ವಾಸ್ತುಶಿಲ್ಪ ಬೆಳೆಯಿತು.

೨ನೆಯ ವೀರಬಲ್ಲಾಳನ ನಂತರ ಇವನ ಎರಡನೆಯ ಮಗನಾದ ಚಿಕ್ಕ ನರಸಿಂಹಯ್ಯನು ಮಹಾಪ್ರಧಾನಾಗಿ ಸರ್ವಾಧಿಕಾರಿಯಾಗಿ ಮುಳಗುಂದ ನಾಡನ್ನು ಆಳುತ್ತಿದ್ದನು.

೧೨ನೆಯ ಶತಮಾನದ ಅಂತ್ಯಭಾಗದಲ್ಲಿ ಗದಗ ಪ್ರದೇಶವು ಯಾದವರ ಹಾಗೂ ಹೊಯ್ಸಳರ ಯುದ್ಧಭೂಮಿಯಾಗಿ ಮಾರ್ಪಟ್ಟಿತು. ಕ್ರಿ.ಶ. ೧೧೯೦ರ ಸೊರಟೂರ ಶಾಸನವು ಇದನ್ನು "ಸೊರಟೂರು ಕಾಳಗ" ಎಂದು ಉಲ್ಲೇಖಿಸುತ್ತದೆ.

ಹೊಯ್ಸಳ ರಾಜಮನೆತನವು ಸುದತ್ತಚಾರ್ಯರೆಂಬ ಜೈನ ಗುರುವಿನ ಆಶೀರ್ವಾದದಿಂದ ಹುಟ್ಟಿದ ಹೊಯ್ಸಳ ಮನೆತನ ಅನೇಕ ವ್ಯಕ್ತಿಗಳು ಬಹುಸಂಖ್ಯೆಯ ಮಾಂಡಲಿಕರು ಮಂತ್ರಿವರ್ಯರು ಧರ್ಮಪಾಲನೆಗೈದು ಜಿನಧರ್ಮವನ್ನು ಶ್ರೀಮಂತಗೊಳಿಸಿದರು.

ಹೊಯ್ಸಳ ಕಾಲದಲ್ಲಿ ಜೈನ ಮತಕ್ಕೆ ದೊರೆತ ಮನ್ನಣೆ ರಾಜಮನೆತನಕ್ಕಿಂತ ಅಧಿಕವಾಗಿ ಮಂತ್ರಿ ಮತ್ತು ಅಧಿಕಾರಿ ವರ್ಗದವರದು ವಿಷ್ಣುವರ್ಧನನ ಪಟ್ಟದರಸಿ ನಾಟ್ಯ ಸರಸ್ವತಿ ಎಂಬ ಬಿರುದು ಪಡೆದ 'ಶಾಂತಲೆ' ಮೂಲತಃ ಜೈನಳಾಗಿದ್ದು ಜೈನ ಧರ್ಮಕ್ಕೆ ದಾನ ದತ್ತಿಗಳನ್ನು ನೀಡಿದ್ದಾಳೆ. ಈತನ ಮಂತ್ರಿ ದಂಡನಾಯಕ ಗಂಗರಾಜ ಮತ್ತು ನರಸಿಂಹನ ಮಂತ್ರಿ ಹುಳ್ಳರಾಜರು ಸಹ ಜೈನ ಧರ್ಮಕ್ಕೆ ತಮ್ಮದೇ ಆದ ಕೊಡುಗೆಗಳನ್ನು ನೀಡಿದ್ದಾರೆ.

ಕಲ್ಯಾಣದ ಚಾಲುಕ್ಯರ ನಂತರ ಕನಾಟಕ ಇಬ್ಭಾಗವಾಗಿ ಸೇವುಣರು ಹಾಗೂ ಹೊಯ್ಸಳರ ನಡುವೆ

---

೨೭. SII Vol. XI, i ಕ್ರಿ.ಶ. ೧೧೯೦ರ ಸೊರಟೂರು ಶಾಸನ.

ಹಂಚಿಹೋಯಿತು. ಸುಮಾರು ೧೩ನೆಯ ಶತಮಾನದಿಂದ ತುಂಗಭದ್ರೆಯ ಎತ್ತರದ ಭಾಗಗಳು ಸೇವುಣರ ಸ್ವಾಧೀನಕ್ಕೆ ಒಳಪಟ್ಟಿತು. ಸೇವುಣರ ಶಾಸನಗಳು ಲಕ್ಷ್ಮೇಶ್ವರದಲ್ಲಿಯೇ ಸಿಕ್ಕಿವೆ. ಇವುಗಳಲ್ಲಿ ಐದು ಸಿಂಘಣನವು ಒಂದು ರನ್ನರದು, ಎರಡು ರಾಮಚಂದ್ರನ ಕಾಲದವು. ಕ್ರಿ.ಶ. ೧೨೧೫ರಲ್ಲಿ ಪುಲಿಗೆರೆ ನಗರವನ್ನು ಮಾಯಿಪಂಡಿತನೂ ೧೨೨೭ರಲ್ಲಿ ಮಲ್ಲಿಸೆಟ್ಟಿಯೂ ಆಳುತ್ತಿದ್ದರು. ರಾಮಚಂದ್ರನ ೧೨೮೭ರ ಶಾಸನದಲ್ಲಿ ಮುಂಮಡಿ ಸಿಂಗಯ ನಾಯಕನ ಮೇಲೆ ಯಾದವರ ಸೇನಾಧಿಪತಿಯೋರ್ವನು ದಾಳಿಮಾಡಿದಾಗ ಹಾಮನಾಯಕನೆಂಬ ವೀರನೋರ್ವನು ಮಡಿದನೆಂದು ಹೇಳಿದೆ. ಇದೊಂದು ವೀರಗಲ್ಲು. ಖ್ಯಾತಿವೆತ್ತ ಕುಮಾರ ರಾಮನ ಅಜ್ಜ ಈ ಸಿಂಗೆಯನಾಯಕ ಕಂಪಲಿಯ ದೊರೆ. ೧೧೯೧ರ ಗದುಗಿನ ಶಾಸನದ ಪ್ರಕಾರ ಯಾದವರ ಭಿಲ್ಲಮ ದೊರೆ ಹೀರೆಹಂದಿಗೋಳ ಗ್ರಾಮವನ್ನು ತ್ರಿಕೋಟೇಶ್ವರ ದೇವಾಲಯಕ್ಕೆ ದಾನ ನೀಡಿದನೆಂದು ಹೇಳುತ್ತದೆ.[೨೮]

ಹೊಯ್ಸಳ ದೊರೆ ಇಮ್ಮಡಿ ವೀರಬಲ್ಲಾಳನಿಗೂ ಬೆಳ್ವೊಲ ಪ್ರದೇಶ ಮೇಲೆ ಕಣ್ಣಿಟ್ಟ ಯಾದವ ಭಿಲ್ಲಮನಿಗೂ ಮುಳಗುಂದ-೧೨ ನಾಡಿನ ಸಮೀಪದ ಸೊರಟೂರಿನ ಬಳಿ ಘನಘೋರ ಯುದ್ಧವಾಗಿ ಇಮ್ಮಡಿ ವೀರಬಲ್ಲಾಳ ಜಯಶಾಲಿಯಾಗಿರುವುದು 'ಚಾರಿತ್ರಿಕ ಸತ್ಯವಾಗಿದೆ' ಬಲ್ಲಾಳ ಭೂಪಾಲನ ಒಂದನೆಯ ಭಿಲ್ಲಮನ ಸೈನ್ಯವನ್ನು ಒಕ್ಕಲಿಕ್ಕೆ ತುಳಿದು ಬೆನ್ನಟ್ಟಿ ಸೊರಟೂರಿನಿಂದ ಲಕ್ಕುಂಡಿಯವರೆಗೆ ಓಡಿಸಿರುವುದು ಈ ನಾಡಿನ ಒಂದು ಮಹತ್ವದ ಐತಿಹಾಸಿಕ ಘಟನೆಯಾಗಿದೆ. ಈ ಸೇಡನ್ನು ಈತನ ಮೊಮ್ಮಗ ಸಿಂಘಣನು ತೀರಿಸಿದನು.

ಯಾದವ ಬಲ್ಲಮನ ಮಗನಾದ ಜೈತುಗಿಯು ಕ್ರಿ.ಶ. ೧೧೯೨ರಲ್ಲಿ ಅಧಿಕಾರಕ್ಕೆ ಬಂದು ೧೨೦೦ರವರೆಗೆ ಮುಳಗುಂದ ನಾಡಿನ ಪ್ರದೇಶವನ್ನು ಆಳಿದನು.

ಯಾದವ ಭಿಲ್ಲಮನ ಮೊಮ್ಮಗನಾದ ಈತನು, ತನ್ನ ತಾತನ ಮೇಲಿನ ಸೇಡನ್ನು ಸಿಂಘಣನು ಹೊಯ್ಸಳರ ಮಾಂಡಳಿಕರನ್ನು ಒಬ್ಬೊಬ್ಬರನ್ನಾಗಿ ಸದೆಬಡೆಯುತ್ತ ಬಂದು ಮುಳಗುಂದ ನಾಡನ್ನೊಳಗೊಂಡ ಬೆಳ್ವೊಲ ಪ್ರದೇಶವನ್ನು ಅಳಲಾರಂಭಿಸಿದನು. ಈತನ ಕಾಲದಲ್ಲಿ ಮುಳಗುಂದವೇ ಆಡಳಿತ ವಿಭಾಗದ ಮುಖ್ಯ ಸ್ಥಳವಾಗಿ ಮುಂದುವರಿದ್ದಿತೆಂದು ಸ್ಪಷ್ಟವಾಗುತ್ತದೆ. ಇಮ್ಮಡಿ ಬಲ್ಲಾಳ ಹಾಗೂ ಈತನ ನಡುವೆ ನಡೆದ ಯುದ್ಧದಲ್ಲಿ ಬಲ್ಲಾಳ ಸಾವನ್ನಪ್ಪಿದನು. ಈ ಕಾರಣಕ್ಕಾಗಿ ಅವನ ಗರುಡನಾಗಿದ್ದ ಕುವರ ಲಕ್ಷ್ಮಣನೂ ಇತರ ಹಲವರೂ ತಮ್ಮ ಬಲಿಮಾಡಿಕೊಂಡರು. ವೀರಬಲ್ಲಾಳನು ಮುಳಗುಂದದ ನಗರೇಶ್ವರ ದೇವಾಲಯದ ಆಚಾರ್ಯರಿಗೆ ಭೂಧಾನ ಕೊಟ್ಟ ಅಲ್ಲಿಯ ಶಾಸನವನ್ನು ಅಳಿಸಿ ಹಾಕದೇ ಅದರ ಕೆಳಗೆ ಸಿಂಘಣನು ನಗರೇಶ್ವರ ದೇವರಿಗೆ ಭೂಮಿ ದಾನ ಕೊಡುವ ಇನ್ನೊಂದು ಶಾಸನವನ್ನು ಕೆತ್ತಿಸಿರುವುದು ಅವನ ಉದಾರ ಗುಣಕ್ಕೆ ಸಾಕ್ಷಿಯಾಗಿದೆ; ಮಹತ್ವದ ಸಂಗತಿಯಾಗಿದೆ. ಕುರ್ತಕೋಟಿ ಶಾಸನದಲ್ಲಿ ನಾವಿಕಾಸನೆಂಬ ಒಬ್ಬ ಸಾಮಾನ್ಯ ಮನುಷ್ಯನನ್ನು ಅಪಾರವಾಗಿ ಹೊಗಳಿರುವ ಘಟನೆ ಅಂದಿನವರ ಗುಣಗ್ರಾಹಕತೆಗೆ ಸಾಕ್ಷಿಯಾಗಿದೆ.[೨೯]

---

೨೮. ಕ್ರಿ.ಶ. ೧೧೯೧ರ ಗದಗ ಶಾಸನ.

೨೯. SII Vol. XI, i 134-ಪು. ೧೫೭, ಕ್ರಿ.ಶ. ೧೦೮೭ರ ಶಾಸನ.

ರಾಷ್ಟ್ರಕೂಟರ ಆಳ್ವಿಕೆ ನಡೆಸುವ ಸಂದರ್ಭದಲ್ಲಿ ಪುಲಿಗೆರೆಯಲ್ಲಿ ಸಗರ ಅಥವಾ ಮಣಲೆರವಂಶಕ್ಕೆ ಸೇರಿದ ಸಾಮಂತರು ಪುಲಿಗೆರೆಯನ್ನಾಳ ತೊಡಗಿದರು. ಇವರು ಸಗರ ಮಾರ್ತಣ್ಣ ಮಣಲೆರಾದಿತ್ಯ ಮುಂತಾದ ಬಿರುದುಗಳನ್ನು ಪಡೆದಿದ್ದರು. ಶಾಸನಗಳಲ್ಲಿ ಇವರು ಪುಲಿಗೆರೆ-೩೦೦ನ್ನು ರಾಷ್ಟ್ರಕೂಟಕರಾಗಿ ಪಾಲಿಸುತ್ತಿದ್ದರೆಂದು ಹೇಳಿದೆ. ಇದುವರೆಗೆ ತಿಳಿದು ಬಂದಂತೆ ಈ ವಂಶದಲ್ಲಿ ಮೊದಲಿಗನು ಜಯಕೇಶ ಕ್ರಿ.ಶ. ೧೦೩೮ನೆಯ ವರ್ಷದ ಶಾಸನವೊಂದರಲ್ಲಿ ಇವನನ್ನು ನಮೂದಿಸಲಾಗಿದೆ.[೩೦] ಇವರ ವಂಶಾವಳಿ ಹೀಗಿದೆ.




ಲಕ್ಷ್ಮೇಶ್ವರ ಮತ್ತು ಇತರ ಕಡೆಗಳಲ್ಲಿ ದೊರೆತ ಶಾಸನಗಳ ಆಧಾರದಿಂದ ಈ ಸಗರ ಕುಲದವರು ಕ್ರಿ.ಶ. ೧೦೩೮ರಿಂದ ೧೧೫೩ರವರೆಗೂ ಪುಲಿಗೆರೆ ನಾಡಿನ 'ಮನ್ನೆಯ'ರಾಗಿದ್ದರು. ಎಂದು ಹೇಳಬಹುದು. ಆದರೆ ಈ ವೇಳೆಗೆ ಈ ಪ್ರಾಂತ ಅಂದಿನ ರಾಜಕೀಯದಲ್ಲಿ ವಿಶಿಷ್ಠ ಸ್ಥಾನವನ್ನು ಪಡೆದಿದ್ದರಿಂದ ಇವರ ಮೇಲೆ ಮಹಾಮಂಡಲೇಶ್ವರರು, ದಂಡನಾಯಕರು ಅಧಿಕಾರದಲ್ಲಿದ್ದರು. ಉದಾಹರಣೆಗೆ-ಕ್ರಿ.ಶ. ೧೦೬೨ರಲ್ಲಿ ಮಹಾಮಂಡಲೇಶ್ವರ ಮಾರರಸನು ಪುಲಿಗೆರೆ ಬೆಳ್ವೊಲ ಪ್ರಾಂತಗಳನ್ನಾಳುತ್ತಿದ್ದನೆಂದು ಶಿರಗುಪ್ಪಿ ಶಾಸನ ತಿಳಿಸುತ್ತದೆ.[೩೧] ಈ ಮಾರರಸನೇ ಚೋಳರ ರಾಜಾಧಿರಾಜನನ್ನು ಕೊಂದನೆಂದು ಈತನನ್ನು ಶಾಸನಗಳು ವರ್ಣಿಸಿವೆ.

ನಂತರ ಮನ್ನೆಯರ ಅಧಿಕಾರ ಕಳೆದುಕೊಂಡು ನೇರವಾಗಿ ಮಹಾಮಮಡಲೇಶ್ವರರ ಆಳ್ವಿಕೆಗೆ ಪುಲಿಗೆರೆ ಒಳಪಟ್ಟಿತು. ಲಕ್ಷ್ಮರಸನು ಅರಸನ ಪ್ರಧಾನಮಂತ್ರಿಯಾಗಿದ್ದನು. ಈತನ ಆಳ್ವಿಕೆಗೆ ಬೆಳ್ವೊಲ-೩೦೦, ಪುಲಿಗೇರಿ-೩೦೦ ಒಳಪಟ್ಟಿದ್ದವು ಈತನ ಹೆಸರಿನಿಂದಲೇ ಪುಲಿಗೆರೆಯು ಲಕ್ಷ್ಮೇಶ್ವರವೆಂದಾಯಿತು.

---

೩೦. SII Vol. XX, No. 144, 47, 03.-ಲಕ್ಷ್ಮೇಶ್ವರ ಶಾಸನಗಳು.

೩೧. ಶಿರಗುಪ್ಪಿ ಶಾಸನ.

ಹೀಗೆ ಸಗರ ಕುಲದವರು ಪುಲಿಗೆರೆಯ ಮನ್ನೆಯರಾಗಿ ಆಡಳಿತ ನಡೆಸಿ ಜೈನ ಪರಂಪರೆಯ ಪ್ರಮುಖ ಕೇಂದ್ರವನ್ನಾಗಿ ಪುಲಿಗೆರೆಯನ್ನು ಬೆಳೆಸಿದರು.

ವಿಜಯನಗರ ಮಹಾಸಾಮ್ರಾಜ್ಯವನ್ನು ಸಂಗಮ (೧೩೩೬-೧೪೮೫) ಸಾಳುವ (೧೪೮೫-೧೫೦೩) ತುಳವ (೧೫೦೩-೬೫) ಅರವೀಡು (೧೫೬೫-೧೬೭೨) ಎಂಬ ೪ ವಂಶಗಳು ಆಳಿವೆ. ೧ನೇ ದೇವರಾಯ ೨ನೆಯ ಬುಕ್ಕರಾಯ, ಸಾಳುವ ನರಸಿಂಹ, ಕೃಷ್ಣದೇವರಾಯ, ಅಚ್ಯುತರಾಯ, ಸದಾಶಿವರಾಯ, ಅಳಿಯ ರಾಮರಾಯ, ತಿರುಮಲ, ವೆಂಕಟ ಮೊದಲಾದ ಅರಸರು ಆಳ್ವಿಕೆ ನಡೆಸಿದರು. ಸಾಮ್ರಾಜ್ಯವು ಪೂರ್ವದಲ್ಲಿ ಓರಿಸ್ಸಾದಿಂದ ಪಶ್ಚಿಮದಲ್ಲಿ ಗೋಧಾವರಿವರೆಗೂ ಉತ್ತರದಲ್ಲಿ ವಿಜಾಪುರದ ಆದಿಲ್‌ಶಾಹಿ ರಾಜ್ಯದ ಗಡಿಯಿಂದ ದಕ್ಷಿಣದಲ್ಲಿ ಸಿಂಹಳದ ಅನುರಾಧಪುರ ರಾಜ್ಯದ ಗಡಿವರೆಗೂ ವಿಸ್ತಾರವಾಗಿತ್ತು. ವಿಜಯನಗರ ಅರಸರು, ರಾಣಿಯರು, ಅಧಿಕಾರಿಗಳು ನಾಡು ನುಡಿಯ ರಕ್ಷಣೆ ಮತ್ತು ಸಾಮ್ರಾಜ್ಯದ ವಿಸ್ತರಣೆಯ ಜೊತೆಗೆ ವಿಶಾಲವಾದ ಸಾಮ್ರಾಜ್ಯದಲ್ಲಿ ವಿವಿಧ ಸಾಂಸ್ಕೃತಿಕ ಚಟುವಟಿಕೆಗಳನ್ನು ಕೈಗೊಳ್ಳುವುದರೊಂದಿಗೆ ಉದಾರವಾಗಿ ದಾನ-ದತ್ತಿಗಳನ್ನು ಕೂಡ ಮಾಡಿರುವುದು ಸಮಕಾಲೀನ ಪುರಾತತ್ವ ಮತ್ತು ಸಾಹಿತ್ಯಿಕ ಕುರುಹುಗಳಿಂದ ಸ್ಪಷ್ಟವಾಗುತ್ತದೆ. ಅಂತಹ ಕೆಲವು ಕುರುಹುಗಳು ಇಂದಿನ ಗದಗ ಜಿಲ್ಲೆಯಾದ್ಯಂತ ಗೋಚರಿಸುತ್ತವೆ. ಈ ಜಿಲ್ಲೆಯ ಗದಗ ತಾಲ್ಲೂಕಿನಲ್ಲಿ ೨೦ ಶಿರಹಟ್ಟಿ ತಾಲೂಕಿನಲ್ಲಿ ೨೦, ರೋಣ ತಾಲೂಕಿನಲ್ಲಿ ೧೩, ನರಗುಂದ ತಾಲೂಕಿನಲ್ಲಿ ೩, ಮುಂಡರಗಿ ತಾಲೂಕಿನಲ್ಲಿ ೧೦ ಶಾಸನಗಳು ಹೀಗೆ ೬೬ ಶಾಸನಗಳು ಬೆಳಕಿಗೆ ಬಂದಿವೆ. ಜೊತೆಗೆ ಆ ಕಾಲದಲ್ಲಿ ಜೀರ್ಣೋದ್ದಾರವಾಗಿರುವ ಕೆಲವು ದೇವಾಲಯಗಳು ಮತ್ತು ವಿವಿಧ ಸಂದರ್ಭಗಳಲ್ಲಿ ಹೋರಾಡುತ್ತ ವೀರಮರಣವನ್ನಪ್ಪಿದ ವೀರರ ವೀರಗಲ್ಲುಗಳು, ಆ ವೀರರ ಪತ್ನಿಯರು ಸಹಗಮನ ಮತ್ತು ಅನುಗಮನದಿಂದ ಪ್ರಾಣತ್ಯಾಗ ಮಾಡಿದ ಮಹಾಸತಿಗಲ್ಲುಗಳು ಅನೇಕ ಗ್ರಾಮಗಳಲ್ಲಿ ಗೋಚರಿಸುತ್ತವೆ. ಹಾಗೆಯೇ ಅರಸರ ಅಧೀನದಲ್ಲಿ ಈ ಜಿಲ್ಲೆಯ ಆಡಳಿತ ನಿರ್ವಹಿಸುತ್ತಿದ್ದ ಅಧಿಕಾರಿಗಳು, ನಾಯಕರು ಮತ್ತು ಪ್ರಜೆಗಳು ಪ್ರತಿಷ್ಠಾಪಿಸಿದ ವಿವಿಧ ಧರ್ಮಗಳ ಶಿಲ್ಪಗಳೂ ಕೆಲವು ಗ್ರಾಮದಲ್ಲಿವೆ. ಅಂದು ಕೆಲವು ಜೈನ ಮುನಿಗಳು ಮತ್ತು ಶ್ರಾವಕರು ಸಲ್ಲೇಖನ ವ್ರತದಿಂದ ಸಮಾಧಿಮರಣವನ್ನಪ್ಪಿದ ವಿನಯಾರ್ಥವಾಗಿ ನಿಲ್ಲಿಸಿದ ನಿಷಿಧಿ ಗಲ್ಲುಗಳು ಕೆಲವು ಗ್ರಾಮಗಳಲ್ಲಿ ಕಾಣುತ್ತವೆ. ಇವೆಲ್ಲವೂ ವಿಜಯನಗರ ಮನೆತನದ ಆಳ್ವಿಕೆಯ ಸಂದರ್ಭದಲ್ಲಿ ಗದಗ ಜಿಲ್ಲೆಯ ಆಡಳಿತ ಮತ್ತು ಸಾಂಸ್ಕೃತಿಕ ಚಟುವಟಿಕೆಗಳ ಇತಿಹಾಸವನ್ನು ಪುನರಚಿಸಲು ಪ್ರಾಥಮಿಕ ಆಕರಗಳಾಗಿವೆ. ಆ ಕಾಲದಲ್ಲಿ ಈ ಜಿಲ್ಲೆಯಲ್ಲಿ ರಚಿತವಾಗಿರುವ ಕೃತಿ-ಕಾವ್ಯಗಳೂ ಪೂರಕ ಮಾಹಿತಿಯನ್ನು ಒದಗಿಸುತ್ತವೆ.

ವಿಜಯನಗರ ಅರಸರು ಪ್ರಜೆಗಳ ಕ್ಷೇಮದಲ್ಲಿ ತಮ್ಮ ಅಭ್ಯುದಯವನ್ನು ಕಾಣುವ ಉದಾತ್ತ ಧ್ಯೇಯವನ್ನು ಹೊಂದಿದ್ದರು. ಅವರು ತಮ್ಮ ಸಾಮ್ರಾಜ್ಯದಾದ್ಯಂತ ಏಕರೀತಿಯ ಆಡಳಿತ ವ್ಯವಸ್ಥೆಯನ್ನು ರೂಪಿಸಿದ್ದರು. ವ್ಯವಸ್ಥಿತ ಆಡಳಿತದ ಅನುಕೂಲಕ್ಕಾಗಿ ಸಾಮ್ರಾಜ್ಯವನ್ನು ರಾಜ್ಯ, ಮಂಡಲ, ಪಾಳೆಯ ಪಟ್ಟಣಗಳು, ಮಾಗಣಿ, ಸೀಮೆನಾಡು,

ಕಂಪಣ ಒಳಿತು ಇತ್ಯಾದಿಯಾಗಿ ವಿಂಗಡಿಸಿ ಅಧಿಕಾರದ ವಿಕೇಂದ್ರಿಕರಣವನ್ನು ಮಾಡಿದ್ದರು. ಅವುಗಳ ಆಡಳಿತ ನಿರ್ವಹಣೆಗೆ ಯುವರಾಜರು, ಮಹಾಮಂಡಳೇಶ್ವರರು, ಸಾಮಂತರು, ನಾಯಕರು ನಾಡಪ್ರಭುಗಳು ನಾಡಗೌಡರು ಒಡೆಯರು, ಮೊದಲಾದವರನ್ನು ನೇಮಿಸಲಾಗಿತ್ತು. ಅಂತಹ ಹಲವು ಸಿಮೇಗಳು ಗದಗ ಜಿಲ್ಲೆಯ ಕೆಲವು ಶಾಸನಗಳಲ್ಲಿ ಕಾಣುತ್ತವೆ. ಹಾಗಾಗಿ ಈ ಜಿಲ್ಲೆಯು ಅಂದು ವಿವಿಧ ಸೀಮೆಗಳಲ್ಲಿ ಅಂತರ್ಗತವಾಗಿತ್ತೆಂಬುದು ದೃಢಪಡುತ್ತದೆ.

ಹಿಂದೂ ಧರ್ಮದ ರಕ್ಷಣೆಗಾಗಿ ತಲೆಯೆತ್ತಿದ ವಿಜಯನಗರ ಸಾಮ್ರಾಜ್ಯದಲ್ಲಿ ಗದಗ ಪ್ರದೇಶವು "ಗದಗು ದೇಶ" ಎಂದು ಆಡಳಿತ ವಿಭಾಗವಾಗಿ ಪ್ರಸಿದ್ಧಿ ಹೊಂದಿತ್ತು. ವಿಜಯನಗರ ಅರಸನಾದ ೨ನೆಯ ದೇವರಾಯನ ಕಾಲದಲ್ಲಿ ಮುಳಗುಂದ ಆಡಳಿತ ಉಪವಿಭಾಗವಾಗಿ 'ಒಳಿತ'ವೆಂದು ಪ್ರಸಿದ್ಧಿ ಪಡೆದಿತ್ತು. ವಿಜಯನಗರ ಸಾಮ್ರಾಜ್ಯದ ಸ್ಥಾಪನೆಯ ಬಳಿಕ ಪುಲಿಗೆರೆ ಆ ಸಾಮ್ರಾಜ್ಯದ ಒಂದು ಭಾಗವಾಗಿ ತನ್ನ ಪ್ರಾಮುಖ್ಯತೆಯನ್ನು ಕಳೆದುಕೊಂಡಿತು.

ಈ ಜಿಲ್ಲೆಯ ಲಕ್ಷ್ಮೇಶ್ವರದ ಕ್ರಿ.ಶ. ೧೩೫೩ರ ಶಾಸನದಲ್ಲಿ ೧ನೆಯ ಹರಿಹರ, ಡಂಬಳ, ಅಬ್ಬಿಗೇರಿಯ ಕ್ರಿ.ಶ. ೧೩೭೯ರ ಕಳಕಪ್ಪನಗುಡ್ಡ, ಲಕ್ಷ್ಮೇಶ್ವರ, ಕಣವಿಯ ಕ್ರಿ.ಶ. ೧೪೦೮ರ ಶಾಸನಗಳಲ್ಲಿ ೨ನೆಯ ಹರಿಹರ ಲಕ್ಷ್ಮೇಶ್ವರದ ಕ್ರಿ.ಶ. ೧೪೧೨ರ ಮತ್ತು ೧೪೩೨ರ ಶಾಸನಗಳಲ್ಲಿ ೧ನೆಯ ದೇವರಾಯ ಸವಡಿಯ ಕ್ರಿ.ಶ. ೧೪೩೧ರ ಮುಳಗುಂದದ ಕ್ರಿ.ಶ. ೧೪೨೦ರ ಬನದಾಂಬಿಕೆ, ೧೪೨೦ರ ಮತ್ತು ಕಲ್ಲೂರದ ಶಾಸನಗಳಲ್ಲಿ ೨ನೇ ದೇವರಾಯ ಗದುಗಿನ ಕ್ರಿ.ಶ. ೧೫೨೦ರ ಗಾಡಗೋಳಿಯ ಶಾಸನಗಳಲ್ಲಿ ಅಚ್ಯುತರಾಯ, ಸೊರಟೂರು, ಲಕ್ಷ್ಮೇಶ್ವರ ಕೋಟುಮಚಗಿ ಕೊಣ್ಣೂರು, ಸಂಕದಾಳ, ಹೊಂಬಳದ ಕ್ರಿ.ಶ. ೧೫೪೭ರ ಶಾಸನಗಳಲ್ಲಿ ಸದಾಶಿವರಾಯನ ಪ್ರಸ್ತಾಪಗಳಿವೆ.[೩೨] ಈ ಅರಸರ ಅಧೀನದಲ್ಲಿ ಕೆಲವು ಮಾಂಡಳಿಕರು ಮತ್ತು ಅಧಿಕಾರಿಗಳು ಈ ಜಿಲ್ಲೆಯಲ್ಲಿ ಆಡಳಿತವನ್ನು ನಿರ್ವಹಿಸುತ್ತಿದ್ದರೆಂಬುದು ಸಮಕಾಲೀನ ಶಾಸನಗಳು ಮತ್ತು ಅಹೋಬಲನ 'ವಿರೂಪಾಕ್ಷ ವಸಂತೋತ್ಸವ" ಚಂಪೂ ಕೃತಿಯಲ್ಲಿ ನಿರೂಪಣೆಗಳಿವೆ.

ವಿಜಯನಗರ ಮನೆತನದ ಅರಸರು ಮತ್ತು ಅಧಿಕಾರಿಗಳು ಗದಗ ಜಿಲ್ಲೆಯಲ್ಲಿ ವಿವಿಧ ಧಾರ್ಮಿಕ, ಸಾಮಾಜಿಕ, ಸಾಂಸ್ಕೃತಿಕ ಚಟುವಟಿಕೆಗೆ ಉದಾರವಾಗಿ ದಾನದತ್ತಿಗಳನ್ನು ಕೊಟ್ಟಿದ್ದಾರೆ. ಅವುಗಳಲ್ಲಿ ಅನಂಧಿ ನಿಧಿದಾನ,[೩೩] ಭೂದಾನ, ಹೊನ್ನದಾನ, ಸುವರ್ಣದಾನ, ವತದಾನ, ಹಣದಾನ ಗ್ರಾಮದಾನ ಸುಂಕದಾನ, ತೋಟದಾನ ಪ್ರಮುಖವಾಗಿವೆ.

---

೩೨. ಧಾರವಾಡ ಜಿಲ್ಲಾ ಗ್ಯಾಝೀಟಿಯರ್ ೧೯೫೯ರ ಸಂಪಾದನೆ-ಡಾ. ಸೂರ್ಯನಾಥ ಕಾಮತ್. ಪು. ೯೨೫-೨೬.

೩೩. ಆನಂದ ನಿಧಿ ಎಂದರೆ ಅಕ್ಷಯ ನಿಧಿ ಎಂದರ್ಥ. ಆನಂದ ನಿಧಿ ದಾನವನ್ನು ಕೆಲವು ವಿಶೇಷ ಸಮಾರಂಭಗಳ ಪೂರ್ವಾರ್ಧವಾದ ನಂತರ ಬ್ರಹ್ಮಣ ಪಂಡಿತರಿಗೆ ಕೊಡುಗೆಯನ್ನೀಯುವುದು ಎಂದು 'ಚತುರ್ವರ್ಗ ಚಿಂತಾಮಣಿ' ಎಂಬ ಪುಸ್ತಕದಲ್ಲಿ ಅದರ ಕರ್ತೃ ಹೇಮಾದ್ರಿ ಹೇಳಿದ್ದಾನೆ.

ವಿಜಯನಗರ ಅರಸರು ಧರ್ಮಸಹಿಷ್ಣುರಾಗಿದ್ದರು. ಸಾಮ್ರಾಜ್ಯದಾದ್ಯಂತ ವೀರಶೈವ, ಶ್ರೀ ವೈಷ್ಣವ, ಜೈನ, ಮುಸ್ಲಿಂ ಕ್ರೈಸ್ತ ಮೊದಲಾದ ಧರ್ಮಗಳು ಯಾವ ಬಾಧಕವಿಲ್ಲದೆ ಅಸ್ತಿತ್ವದಲ್ಲಿದ್ದವು. ಆಳರಸರು ಮತ್ತು ಅಧಿಕಾರಿಗಳ ಆಶ್ರಯ–ಪ್ರೋತ್ಸಾಹ ಎಲ್ಲಾ ಧರ್ಮಗಳಿಗೂ ಏಕರೂಪವಾಗಿದ್ದಿತು. ಆದರೂ ಗದಗ ಪರಿಸರದಲ್ಲಿ ಕೆಲವು ಸಂದರ್ಭಗಳಲ್ಲಿ ವೀರಶೈವರೂ ಜೈನರು, ಮುಸ್ಲಿಂರು ತಮ್ಮ ತಮ್ಮ ಧರ್ಮದ ಶ್ರೇಷ್ಠತೆಯನ್ನು ದೃಢಪಡಿಸಲು ಮತ್ತು ವಲಯವನ್ನು ವಿಸ್ತರಿಸಿಕೊಳ್ಳಲು ಪರಸ್ಪರ ವ್ಯಾಜ್ಯ ಮತ್ತು ಸಂಘರ್ಷಣೆಗಳಲ್ಲಿ ತೊಡಗಿದ್ದ ಕುರಿತಾಗಿ ಶಾಸನಾಧಾರಗಳಿವೆ.[೩೪]

ಲಕ್ಷ್ಮೇಶ್ವರದಲ್ಲಿ ಕ್ರಿ.ಶ. ೧೫೩೮ರಲ್ಲಿ ಶಂಖ ಬಸದಿಯ ಜೈನರಿಗೂ ಮತ್ತು ಸೋಮನಾಥ ದೇವಾಲಯದ ಶೈವರಿಗೂ ತಲೆದೊರಿದ ವ್ಯಾಜ್ಯವನ್ನು ನಿರ್ಣಯಿಸಿದ ಕುರಿತಾಗಿ ಸ್ಥಳೀಯ ಶಾಸನದಲ್ಲಿ ಪ್ರಸ್ತಾಪವಿದೆ.[೩೫]

ಮುಳಗುಂದದ ಬೆಟ್ಟದ ಮೇಲಿರುವ ಪಾರ್ಶ್ವನಾಥ ಬಸದಿಯನ್ನು ಕ್ರಿ.ಶ. ೧೬ನೆಯ ಶತಮಾನದಲ್ಲಿ ಮುಸ್ಲಿಂರು ಸುಟ್ಟರು. ಆ ಸಂದರ್ಭದಲ್ಲಿ ಬಸದಿಯಲ್ಲಿದ್ದ ಸಹ ಸಕೀರ್ತಿ ಮುನಿಗಳು ಮಡಿದರು. ನಾಶವಾದ ಬಸದಿಯನ್ನು ಕುಲಕರ್ಣಿ ನಾಗಭೂಪನ ಧರ್ಮಪತ್ನಿ ಬನದಾಂಬಿಕೆ ಎಂಬುವಳು ಕ್ರಿ.ಶ. ೧೬೭೫ರಲ್ಲಿ ಜೀರ್ಣೋದ್ಧಾರ ಮಾಡಿಸಿದಳೆಂದು ಸ್ಥಳೀಯ ಶಾಸನಗಳಲ್ಲಿ ನಿರೂಪಣೆಯಿದೆ. ಹೀಗಾಗಿ ವಿಜಯನಗರ ಅರಸರು ಮತ್ತು ಅಧಿಕಾರಿಗಳು ಈ ಜಿಲ್ಲೆಯಲ್ಲಿ ಸಕಲ ಧರ್ಮಿಯರಿಗೂ ಧಾರ್ಮಿಕ ಹಾಗೂ ಸಾಮಾಜಿಕ ಚಟುವಟಿಕೆಗಳಿಗೆ ದಾನ–ದತ್ತಿಗಳನ್ನು ಕೊಡಮಾಡಿ ಪರಸ್ಪರರಲ್ಲಿ ಧರ್ಮಸಮನ್ವಯತೆ ಮತ್ತು ಸಾಮರಸ್ಯತೆಯನ್ನು ಕಲ್ಪಿಸಲು ವಿಶೇಷವಾಗಿ ಪ್ರಾಧಾನ್ಯತೆ ಕೊಟ್ಟಿದ್ದರು.

ಬುಕ್ಕರಾಯ ರಾಜ್ಯ ವಿಸ್ತರಣೆಯತ್ತ ಗಮನವಿತ್ತಷ್ಟೇ ಆಂತರಿಕ ಸುಧಾರಣೆಗೂ ಗಮನವಿತ್ತಿದ್ದ. ಈ ಕಾಲದಲ್ಲಿ ಧಾರ್ಮಿಕ ವಿಷಯದಲ್ಲಿ ಜೈನರಿಗೂ ಶ್ರೀವೈಷ್ಣವರಿಗೂ ವಾದವಿವಾದ ಹುಟ್ಟಿ ವಿಕೋಪಕ್ಕೆ ಹೋಗಲು ಬುಕ್ಕನ ಮಧ್ಯಪ್ರವೇಶದಿಂದ ವಿವಾದ ಸುಖಾಂತವಾಗಿ ಕೊನೆಗೊಂಡಿತು.

ಬುಕ್ಕರಾಯನ ಹಿರಿಯಮಗ ೨ನೆಯ ಹರಿಹರ ಕ್ರಿ.ಶ. ೧೩೭೭ರಿಂದ ೧೪೦೪ರವರೆಗೆ ೨೭ ವರ್ಷಗಳ ಕಾಲ ಆಳ್ವಿಕೆ ನಡೆಸಿದ ಗದಗ ಪ್ರಾಂತಕ್ಕೆ ಸೇರಿದ ಡಂಬಳದಲ್ಲಿ ೧೩೭೯ರ ತಾಮ್ರಶಾಸನವೊಂದು[೩೬] ಗದಗು ದೇಶದ ೨೨ ಗ್ರಾಮಗಳನ್ನು ಗದುಗಿನ ದೇವತೆಗಳಾದ ತ್ರಿಕೋಟೇಶ್ವರ ಮತ್ತು ವೀರನಾರಾಯಣರಿಗೆ ಉಂಬಳಿಯಾಗಿ ಕೊಟ್ಟಿದ್ದನ್ನು ವಿವರಿಸುತ್ತದೆ. ಈ ಕಾಲಕ್ಕೆ ಗದಗು ದೇಶವು ಪಂಪಾಹಸ್ತಿನಾವತಿ ಪ್ರಾಂತಕ್ಕೆ ಸೇರಿದ ಲಕ್ಕುಂಡಿ ಪೀಠ ಎಂಬ ರಾಜಕೀಯ ವಿಭಾಗದಲ್ಲಿ ತೊರಗಲ್ಲು ನಾಡಿನ ೬೬ ಗ್ರಾಮಗಳ ಆಳ್ವಿಕೆಯನ್ನು ಒಳಗೊಂಡಿತ್ತು ಎಂದು ಈ ತಾಮ್ರಶಾಸನ ವರ್ಣಿಸುತ್ತದೆ.

ಕ್ರಿ.ಶ. ೧೩೭೮ರ ಶಾಸನದ ಪ್ರಕಾರ ರಾಜಗುರು ಶ್ರೀಮದ್ ಮಹಾಮಂಡಲಾಚಾರ್ಯ ವಾಣಿವಿಲಾಸ ಕ್ರಿಯಾಶಕ್ತಿಯಾಚಾರ್ಯರು ದೊರೆಗಳ ಕುಲಗುರುಗಳಾಗಿದ್ದ ಅವರ ಸೂಚನೆಯ ಮೇರೆಗೆ ರಾಜನು ದಾನ

---

೩೪. SII Vol. XX, No. 282-284.

೩೫. SII Vol. XX, No. 383.

೩೬. SII Vol. XII, i Page 186, 1379 ರ ಡಂಬಳ ಶಾಸನ.

ಮಾಡಿದನೆಂದು ಶಾಸನ ಉಲ್ಲೇಖಿಸುತ್ತದೆ.[೩೭] ಡಂಬಳದ ಇನ್ನೊಂದು ತಾಮ್ರಶಾಸನವು ಹರಿಹರನು ಗದಗು ಪ್ರಾಂತವನ್ನು ೬೬ ಗ್ರಾಮಗಳಾಗಿ ವಿಭಾಗಿಸಿ ಕವಿಗಳಿಗೆ ವಿದ್ವಾಂಸರಿಗೆ ಉಂಬಳಿಯಾಗಿ ನೀಡಿದನೆಂದು ಉಲ್ಲೇಖಿಸುತ್ತದೆ. ಅವರಲ್ಲಿ ಸೋಮಭಟ್ಟ ರಂಗಭಟ್ಟ ವೆಂಕಟಶಾಸ್ತ್ರಿ ವಿರೂಪಾಕ್ಷ ಮುಂತಾದವರಲ್ಲದೆ ಶೃಂಗೇರಿ ಮಠಕ್ಕೆ ಸೇರಿದ ಶೃಂಗೇರಿ ಭಟ್ಟ ಮತ್ತು ವಿದ್ಯಾಶಂಕರ ಭಟ್ಟರು ದಾನ ಸ್ವೀಕರಿಸಿದ ಪ್ರಮುಖರೆಂದು ಶಾಸನ ಹೇಳುತ್ತದೆ.[೩೮]

೨ ಹರಿಹರನ ಮರಣಾನಂತರ ಅವನ ಪುತ್ರರಾದ ಬುಕ್ಕರಾಯ ವಿರುಪಾಕ್ಷ ಮತ್ತು ದೇವರಾಯರಲ್ಲಿ ಸಿಂಹಾಸನಕ್ಕಾಗಿ ಕಲಹ ಏರ್ಪಟ್ಟಿತು. ಇದರಲ್ಲಿ ಜಯಶೀಲನಾದ ೧ನೆಯ ದೇವರಾಯ ಕ್ರಿ.ಶ. ೧೪೦೬ರಲ್ಲಿ ಸಿಂಹಾಸನ ಪಡೆದನು. ಇವನೂ ತಂದೆಯಂತೆ ಯುದ್ಧ ಕೋವಿದನಾಗಿದ್ದು ಚತುರತೆ, ದಕ್ಷತೆಯಿಂದಲೇ ರಾಜ್ಯವಾಳಿದ. ಕ್ರಿ.ಶ. ೧೪೧೨ರ ಲಕ್ಷ್ಮೇಶ್ವರದ ಶಂಖ ಬಸದಿಯ ಕಂಭದ ಮೇಲಿನ ಶಾಸನವು[೩೯] ಈತನ ಕಾಲದ್ದು ಲಕ್ಷ್ಮೇಶ್ವರದ ಸೋಮನಾಥಾಲಯದ ಆಚಾರ್ಯರು ಶಿವರಾಮ ಒಡೆಯರು ಇವರಿಗೂ ಶಂಖಬಸದಿಯ ಹೇಮ ದೇವಾಚಾರ್ಯರಿಗೂ ತಮ್ಮ ತಮ್ಮ ದೇವಸ್ಥಾನಗಳಿಗೆ ಸೇರಿದ ಭೂಮಿಯ ವಿಷಯದಲ್ಲಿ ಭಿನ್ನಾಭಿಪ್ರಾಯ ಎಂಬಾಗಿ ಈ ವ್ಯವಹಾರವನ್ನು ಮಹಾಪ್ರಧಾನ ನಾಗಣ್ಣ ದಣ್ಣಾಯಕನ ಅಪೇಕ್ಷೆಯಂತೆ ಅರಮನೆಯ ಪುರೋಹಿತರಾದ ಸಂಗಮದೇವರು ಶಾಸನಗಳನ್ನು ಪರೀಕ್ಷಿಸಿ ಸಾಕ್ಷಿಗಳನ್ನು ವಿಚಾರಿಸಿ ಕೊನೆಗೆ ಹೇಮದೇವಾಚಾರ್ಯರ ಪರವಾಗಿ ನಿರ್ಣಯ ಕೊಟ್ಟರು. ಸುಮಾರು ೧೪೧೮ರಲ್ಲಿ ಇದೇ ಇಬ್ಬರು ಆಚಾರ್ಯರ ನಡುವೆ ದೇವಸ್ಥಾನದಲ್ಲಿ ಸಲ್ಲುವ ಕೆಲವು ಮರ್ಯಾದೆಗಳ ಸಂಬಂಧವಾಗಿ ಮತ್ತೊಮ್ಮೆ ಭಿನ್ನಾಭಿಪ್ರಾಯ ಉಂಟಾಯಿತು. ಕೊನೆಗೆ ಜೈನರು ತಾವು ಮಾಡಿದುದು ತಪ್ಪೆಂದು ಒಪ್ಪಿ ಶಿವರಾಮ ಒಡೆಯನಿಗೆ ಜಯ ಪತ್ರಿಕೆಯನ್ನು ಕೊಟ್ಟರು.[೪೦] ಸೋಮೇಶ್ವರ ದೇವಾಲಯದ ದಕ್ಷಿಣ ದ್ವಾರದ ಬಳಿ ಈಗಲೂ ನಾವು ಶಿವರಾಮ ಒಡೆಯರ ಮೂರ್ತಿಯನ್ನು ಕಾಣಬಹುದು.

ಕ್ರಿ.ಶ. ೧೫೧೯ರ ಶಾಸನವೊಂದು ಬಾಗಿನಾಗಿನಾಯಕ್ಕರ ಮಗ ನಯನಪ್ಪ ನಾಯಕನಿಗೆ ತಿಮ್ಮಪ್ಪ ನಾಯಕರು ಗದುಗಿನ ಸೀಮೆಯ ಬಟ್ಟಕೆರೆಯಲ್ಲಿ ಶ್ರೀ ತ್ರಯಂಬಕದವರ ಹಾಗೂ ವೀರನಾರಾಯಣ ದೇವರ ಪ್ರತ್ಯರ್ಥವಾಗಿ ಎರಡು ಅರವಟ್ಟಿಗೆಗಳ ನಿರ್ಮಾಣಕ್ಕಾಗಿ ತುಂಗಭದ್ರನದಿ ತೀರದಲ್ಲಿ ವಿರೂಪಾಕ್ಷ ದೇವರ ಸನ್ನಿಧಿಯಲ್ಲಿ ದಾನ ನೀಡಿದ್ದನ್ನು ಉಲ್ಲೇಖಿಸುತ್ತದೆ.[೪೧]

ಅಚ್ಯುತರಾಯನ ಕಾಲದ ಶಾಸನಗಳು ಗದುಗಿನ ಪುರಾತನ ಇತಿಹಾಸ ಹಾಗೂ ವೀರನಾರಾಯಣ ದೇವಾಲಯಗಳಿಗೆ 'ಆನಂದ ನಿಧಿ" ದಾನವನ್ನು ಉಲ್ಲೇಖಿಸುತ್ತದೆ.[೪೨] ಈ ಶಾಸನವು (೧೫೩೯) ಕವಿ ಕುಮಾರವ್ಯಾಸನನ್ನು

---

೩೭. Annual Report of the Mysore Archaelogical department 1941 No. 20.

೩೮. Journal of Bombay branch of Royal Asiatic Society Vol. XII P-338.

೩೯. SII Vol. XX, No. 282-284.

೪೦. SII Vol. XX, No. 383.

೪೧. ARSIE-1926-27 P-186 & SII XII No. 280.

೪೨. SII Vol. XV, No. 252.

ಉಲ್ಲೇಖಿಸುವುದು ವಿಶೇಷ. ಈ ಆನಂದ ನಿಧಿ ದಾನ ಮಾಡುವುದರಿಂದ ದೀರ್ಘಾಯುಸ್ಸು ಆರೋಗ್ಯ ಹಾಗೂ ಸಾಮ್ರಾಜ್ಯದ ಪ್ರಭುತ್ವಗಳು ಸಿದ್ಧಿಸುತ್ತವೆ. ಈ ಎಲ್ಲಾ ಕಾರಣಕ್ಕಾಗಿಯೇ ದೊರೆ ಅಚ್ಯುತರಾಯನು ಈ ಆನಂದನಿಧಿ ದಾನವನ್ನು ತುಂಗಭದ್ರಾ ನದಿಯ ಮೇಲಿನ ವೀರೇಶ್ವರ ದೇವಸ್ಥಾನದಲ್ಲಿ ಯಾಧವ ಸಂಪ್ರೀತಿಗಾಗಿ ಈ ದಾನವನ್ನು ಕೈಗೊಂಡನು. ಗದಗ ಹಾಗೂ ಕೋಟುಮಚಗಿಗಳು ಪ್ರಮುಖ ವಿದ್ವಾಂಸರಿಂದ ಅಗ್ರಹಾರಗಳಾಗಿ ಮುಂದುವರೆದವು. ವೀರನಾರಾಯಣ ದೇವಾಲಯದ ಪ್ರದೇಶದಲ್ಲಿರುವ ರಾಯಗೋಪುರ ಹಾಗೂ ಆಕರ್ಷಕ ತೇಜೋಮಯವಾದ ವೀರನಾರಾಯಣ ಮೂರ್ತಿ ಇದೇ ಕಾಲದಲ್ಲಿ ಪ್ರತಿಷ್ಠಾಪನೆಗೊಂಡವೆಂದು ಡಾ. ಅ. ಸುಂದರ ಅವರು "ಗದಗ ಬೆಟಗೇರಿಯ ಪ್ರಾಚೀನ ದೇವಾಲಯಗಳು" ಎಂಬ ಅವರ ಲೇಖನದಲ್ಲಿ ತಿಳಿಸಿದ್ದಾರೆ.[೪೩]

ಸದಾಶಿವರಾಯನ ಕಾಲದ ಕುರ್ತಕೋಟಿ, ಸೊರಟೂರು, ಹೊಂಬಳ, ಲಕ್ಷ್ಮೇಶ್ವರ, ಕೊಣ್ಣೂರು, ಸಂಕದಾಳದ ಶಾಸನಗಳಲ್ಲಿ ನಾವಿದರ ಪ್ರತಿನಿಧಿಗಳಾದ ಮಲ್ಲೋಜ, ಚಂದೂಜ, ತಿಮ್ಮೋಜರಿಗೆ ವಿಶೇಷವಾಗಿ ದಾನ ದತ್ತಿಗಳನ್ನು ಕೊಡುವುದರೊಂದಿಗೆ ಅವರ ಸಮುದಾಯವನ್ನು ಕೆಲವು ತೆರಿಗೆಗಳಿಂದ ವಿನಾಯಿತಿಗೊಳಿಸಿದ ಪ್ರಸ್ತಾಪಗಳಿವೆ. ಕೋಟುಮಚಗಿಯ ಜೈನಬಸದಿಯ ಹತ್ತಿರ ದೊರೆತ ಒಂದು ಶಾಸನದ ಪ್ರಕಾರ (೧೬ನೆಯ ಶತಮಾನ) ಕೋಟುಮಚಗಿ ಗ್ರಾಮಕ್ಕೆ 'ಸದಾಶಿವರಾಯನ ಸವಂದ್ರ' ಎಂಬ ಇನ್ನೊಂದು ಹೆಸರಿತ್ತೆಂದು ತಿಳಿದು ಬರುತ್ತದೆ. ಇದೇ ಹೆಸರಿನ ಕೆರೆಯನ್ನು ಕಟ್ಟಿಸಿದನೆಂದು ಶಾಸನ ಉಲ್ಲೇಖಿಸುತ್ತದೆ.[೪೪]

ಹೀಗೆ ವಿಜಯನಗರದ ಅರಸರು ಗದಗ ಪರಿಸರದಲ್ಲಿ ಆಡಳಿತ ನಡೆಸಿ ಸಾಮಾಜಿಕ, ಧಾರ್ಮಿಕ ಹಾಗೂ ಸಾಂಸ್ಕೃತಿಕ ಕೊಡುಗೆಗಳನ್ನು ನೀಡಿದ್ದಾರೆ.

ಚಲ್ಲಕೇತನ ಎಂದರೆ ಹರಿತವಾದ ಭರ್ಚಿಯನ್ನು ಧ್ವಜದ ಚಿಹ್ನವಾಗಿಸಿಕೊಂಡವರು ಎಂದರ್ಥ. ಚೆಲ್ಲಕೇತನ ಮನೆತನದ ಪ್ರಥಮ ಪ್ರಸ್ತಾಪ ಬರುವದು ಕೊಣ್ಣೂರು (೮೬೦) ಶಾಸನದಿಂದ[೪೫] 'ಎರಕೇರಿ' ಈ ಮನೆತನದ ಮೂಲ ಪುರುಷ ಈತನ ಮಗ ಧೋರನೆಂಬವ ಕೊಳನೂರಿನ ಮೇಲ್ವಿಚಾರಣೆ ಕೈಕೊಂಡಿದ್ದ ರಾಷ್ಟ್ರಕೂಟರ ಸೇನಾನಾಯಕನೂ ಆಗಿದ್ದ ಧೋರನ ಪತ್ನಿ ವಿಜಯಾಂಬೆ ಈ ದಂಪತಿಗಳ ಸುಪುತ್ರ ಬಂಕೇಯ. ಇವನನ್ನೂ ಶಾಸನ ಕಾವ್ಯಗಳು ಬಂಕೇಯ, ಬಂಕೇಯರಸ, ಬಜ್ಜರಾಜ ಎಂದು ಕರೆದಿವೆ.

ಈಗೀನ ಗದಗ ಜಿಲ್ಲೆಯ ನರಗುಂದ ತಾಲೂಕಿನ ಕೊಣ್ಣೂರು ಹಾಗೂ ಮಲಿಗೆರೆ ಪ್ರದೇಶದಲ್ಲಿ ರಾಷ್ಟ್ರಕೂಟರ ನಿಷ್ಠಾವಂತ ಸಾಮಂತನಾಗಿ ಆಳ್ವಿಕೆ ನಡೆಸಿದವ ಬಂಕೇಯರಸ. ನೃಪತುಂಗ ಚಕ್ರವರ್ತಿಯ ಸೇನಾಪತಿಯಾಗಿದ್ದ ತನ್ನ ಹೋರಾಟಪರ ಮನೋಭಾವ ಅಸಾಧಾರಣ ಸಾಹಸದಿಂದ ಬನವಾಸಿ ಮೂವತ್ತು ಸಾವಿರ ಹಳ್ಳಿಗಳ

---

೪೩. ಡಾ. ಅ. ಸುಂದರ, 'ಗದಗ-ಬೆಟಗೇರಿಯಲ್ಲಿರುವ ಪ್ರಾಚೀನ ದೇವಾಲಯಗಳು' ಗದಗ-ಬೆಟಗೇರಿ ಡೈರೆಕ್ಟರಿ, ೧೯೭೫. ಸಂಪಾದನೆ ಹ. ರಾ. ಕಿದಿಯೂರ, ಪು-೪೮೧.

೪೪. SII Vol. XV, No. 696.

೪೫. ಕ್ರಿ.ಶ. ೮೬೦ರ ಕೊಣ್ಣೂರು ಶಾಸನ.

ಮೇಲ್ವಿಚಾರಣೆ ಕೈಕೊಂಡಿದ್ದ ನಂತರ ಪುಲಿಗೇರೆ-೩೦೦, ಬೆಳ್ವೊಳ-೩೦೦ರ ಆಳ್ವಿಕೆಯನ್ನು ತನ್ನ ವ್ಯಾಪ್ತಿಗೆ ಒಳಪಡಿಸಿಕೊಂಡಿದ್ದ. (ಕ್ರಿ.ಶ. ೮೭೪) ಬಂಕೇಯನ ಕಾರ್ಯಸಾಧನೆಗೆ ಹೆಗಲುಗೊಟ್ಟುವ ಮಂತ್ರಿ ಮಹತ್ತರ ಗಣಪತಿ.

ಬಂಕೇಯ ನಂತಹ ಸಮರ್ಥ ಸೇನಾಪತಿಯ ನೆರವು ರಾಷ್ಟ್ರಕೂಟ ಮನೆತನದ ಏಳ್ಗೆಗೆ ಕಾರಣವಾಯಿತು. ಇಂತಹ ಸ್ವಾಮಿನಿಷ್ಠನ ಅಚಲ ವಿಶ್ವಾಸ ಉಳಿಸಿಕೊಳ್ಳಲು ನೃಪತುಂಗ ಆತನಿಗೆ ಏನಾದರೂ ಕಾಣಿಕೆ ಕೊಡಲು ಬಯಸಿದರೆ ಬಂಕೇಯ ಬೇಡಿದ್ದೇನು? "ನಿಮ್ಮಿಂದ ಸನ್ಮಾನಿಸಿಕೊಳ್ಳುವುದಕ್ಕಿಂತ ನಿಮ್ಮ ಭೃತ್ಯನಾಗಿ ಉಳಿಯುವದೇ ನನ್ನಾಸೇ. ತಾವು ನನಗಾಗಿ ಏನಾದರೂ ಮಾಡುವದಿದ್ದರೆ ಕೊಣ್ಣೂರಿನ ಜೈನ ಬಸದಿಗೆ ನಿಮ್ಮ ಹೆಸರಿನಿಂದ ದಾನವೊಂದನ್ನು ಕೊಡಿ ಎಂದು ಕೇಳಿದನಂತೆ. ನೃಪತುಂಗ ಆತನ ಬೇಡಿಕೆಯನ್ನು ಕೊಣ್ಣೂರು ಶಾಸನದಲ್ಲಿ ಬರೆಸಿ ಬಂಕೇಯನ ಇಷ್ಟಾರ್ಥದಂತೆ ಜೈನಬಸದಿಗೆ ದಾನ ಮಾಡಿರುವನು.[೪೬]

## ೪.೨. ಗದಗ ಪರಿಸರದ ಜೈನ ಅರಸುಮನೆತನಗಳು :

### ೪.೨.೧. ಗಂಗರು :

ಗಂಗರು ಸಿಂಹ ನಂದಿಯತಿಗಳ ಪ್ರೇರಣೆಯಿಂದ ರಾಜ್ಯವನ್ನು ಪಡೆದ ಕಾರಣ ಜೈನ ಧರ್ಮವನ್ನು ತಮ್ಮ ರಾಷ್ಟ್ರೀಯ ಧರ್ಮವನ್ನಾಗಿ ಮಾಡಿಕೊಂಡು ಚಕ್ರವರ್ತಿಗಳಾಗಿ, ಅರಸರಾಗಿ, ಸಾಮಂತ ಅರಸರಾಗಿ, ಮಂಡಳಾಧಿಕಾರಿಗಳಾಗಿ ಆಳ್ವಿಕೆಯನ್ನು ಗದಗ ಪರಿಸರದಲ್ಲಿ ನಡೆಸಿದ್ದಾರೆ.

### ಇಮ್ಮಡಿ ಭೂತುಂಗ (ಕ್ರಿ.ಶ. ಸು. ೯೩೫) (೯೩೨ ರಿಂದ ೯೬೦) :

ರಾಷ್ಟ್ರಕೂಟ ಮುಮ್ಮಡಿ ಅಮೋಘವರ್ಷನು ಗಂಗರ ಇಮ್ಮಡಿ ಭೂತುಗನಿಗೆ ತನ್ನ ಮಗಳಾದ ರೇಮಕ ನಿಮ್ಮಡಿಯನ್ನು ಮದುವೆ ಮಾಡಿಕೊಟ್ಟು ಬೆಳುವಲ-೩೦೦, ಪುಲಿಗೆರೆ-೩೦೦, ಬಾಗೆನಾಡು-೭೦ ಮತ್ತು ಕಿಸುಕಾಡು-೭೦ ಪ್ರಾಂತಗಳ ಅಧಿಪತ್ಯವನ್ನು ಬಳುವಳಿಯಾಗಿ ನೀಡಿದನು. ಇದು ಕ್ರಿ.ಶ.೯೩೫ರ ಸುಮಾರಿಗೆ ಕ್ರಿ.ಶ. ೯೪೨ ಮತ್ತು ೯೪೬ನೆಯ ವರ್ಷಗಳ ಶಿಲಾಶಾಸನಗಳಲ್ಲಿ ಬೂತುಗನು ಪುಲಿಗೆರೆ ನಾಡನ್ನು ಆಳುತ್ತಿದ್ದನೆಂದು ಹೇಳಿದೆ. ಬಹುಶಃ ೯೪೬ರ ಬಳಿಕ ಭೂತುಗನ ಸಹೋದರನಾದ ರಾಜಮಲ್ಲನು ಭೂತುಗನಿಂದ ಬೆಳ್ವೊಲ, ಪುಲಿಗೆರೆ ನಾಡುಗಳನ್ನು ಸೆಳೆದುಕೊಂಡಿರಬಹುದೆಂದೂ ಆದರೆ ರಾಷ್ಟ್ರಕೂಟರ ೩ನೇ ಕೃಷ್ಣನು ರಾಜಮಲ್ಲನಿಂದ ಇವುಗಳನ್ನು ಪುನಃ ಕಿತ್ತುಕೊಂಡು ತನ್ನ ಭಾವನಾದ ಭೂತೂಗನಿಗೆ ಕೊಟ್ಟಿರಬೇಕೆಂದೂ ಊಹಿಸಲಾಗಿದೆ.

---

೪೬. ಡಾ. ಜಿ. ಎಂ. ನಾಗಯ್ಯ-ಆರನೇ ವಿಕ್ರಮಾದಿತ್ಯನ ಶಾಸನಗಳು.

## ಇಮ್ಮಡಿ ಮಾರಸಿಂಹ (ಕ್ರಿಶ. ಸುಮಾರು ೯೭೧) :

ಕ್ರಿಶ. ೯೭೧ ಹಾಗೂ ೯೭೩ರಲ್ಲಿ ಇಮ್ಮಡಿ ಮಾರಸಿಂಹನು ಪುಲಿಗೆರೆ ೩೦೦, ಬೆಳ್ವೊಳ ೩೦೦ ಮತ್ತು ಇತರ ಪ್ರಾಂತಗಳನ್ನು ಆಳುತ್ತಿದ್ದನು. ಮಾರಸಿಂಹನ ಮೂರು ಶಾಸನಗಳು ಪುಲಿಗೇರಿಯಲ್ಲಿ ಲಭ್ಯವಾಗಿವೆ. ಗಂಗವಂಶದ ಇಮ್ಮಡಿ ಮಾರಸಿಂಹ ತನ್ನ ವಂಶದ ಹೆಸರಿನಲ್ಲಿ ಒಂದು ದೇವಾಲಯ ನಿರ್ಮಾಣ ಮಾಡಿದಂತೆ ತೋರುವುದು. ೯೬೮-೯೬೯ರ ಒಂದು ಶಾಸನದಲ್ಲಿ "ಗಂಙ್ಗ ಕನ್ದರ್ಪ ಜೇನೇಂದ್ರ ಮಂದಿರ"ಕ್ಕೆ ಕೊಟ್ಟ ದತ್ತಿಯ ವಿವರ ಇದೆ. ಇದನ್ನು ಮತ್ತೊಂದು ಶಾಸನದಲ್ಲಿ ಹೇಳಲಾಗಿದೆ. ೯೭೧ರಲ್ಲಿ ಇದೆ ಇಮ್ಮಡಿ ಮಾರಸಿಂಹನು ಶಂಖಬಸದಿಗೆ ಗೋದಾನವಿತ್ತ ಉಲ್ಲೇಖವಿದೆ.

ಹೀಗೆ ಗಂಗರು ಅರಸರಾಗಿ ಸಾಮಂತ ಅರಸರಾಗಿ ಕ್ರಿಶ. ೪ನೆಯ ಶತಮಾನದಿಂದ ೧೦ನೆಯ ಶತಮಾನದವರೆಗೂ ಕರ್ನಾಟಕದಲ್ಲಿ ಆಡಳಿತ ನಡೆಸಿದರು ಆದರೆ ಅವರು ಬೆಳ್ವೊಳ-೩೦೦ರ ಆಳ್ವಿಕೆಗೆ ಒಳಪಟ್ಟು ಪುಲಿಗೇರಿ-೩೦೦ ವಿಭಾಗದಲ್ಲಿ ಮಾತ್ರ ಇವರ ಪ್ರಭಾವ ಕಂಡು ಬರುತ್ತದೆ. ಇನ್ನುಳಿದ ಉಪವಿಭಾಗಗಳಾದ ಮುಳಗುಂದ ನಾಡು, ಮಾಸವಾಡಿನಾಡು, ನರೇಗಲ್ಲು ನಾಡು, ಚಿಂಚಲಿನಾಡು, ಬೆಳವಣಿಕೆನಾಡು, ಇನ್ನಿತರ ಉಪವಿಭಾಗಗಳಲ್ಲಿ ಗಂಗರ ಪ್ರಭಾವ ಕಂಡು ಬರುವುದಿಲ್ಲ. ಆದ್ದರಿಂದ ಅರಸರಾಗಿ ಸಾಮಂತ ಅರಸರಾಗಿ ಗಂಗರು ಜೈನ ಧರ್ಮಕ್ಕೆ ದಾನ, ದತ್ತಿಯನ್ನು ನೀಡಿ ಅಮೂಲ್ಯವಾದ ಕೊಡುಗೆಗಳನ್ನು ನೀಡಿದ್ದಾರೆಂದು ಕರ್ನಾಟಕದಲ್ಲಿ ಲಭ್ಯವಾಗುವ ಶಾಸನಗಳಿಂದ ಕಂಡುಕೊಳ್ಳಬಹುದು.

ಲಕ್ಕುಂಡಿಯಲ್ಲಿ ಉಪಲಬ್ಧವಾದ ಮಣ್ಣಿನ ಗಡಿಗೆಗಳು ತಲಕಾಡು ಗಂಗರ ಕಾಲದವು ಆದ್ದರಿಂದ ಈ ಪ್ರದೇಶವು ಗಂಗರ ಆಳ್ವಿಕೆಗೆ ಒಳಪಟ್ಟಿತ್ತು ಎಂಬುದು ತಿಳಿದು ಬರುತ್ತದೆ.

ಪುಲಿಗೆರೆಯಲ್ಲಿ ಮುಕ್ಕರ ಬಸದಿ, ರಾಚಮಲ್ಲ ಬಸದಿ ಗಂಗರ ಕಂದರ್ಪಜಿನ ಮಂದಿರ, ಗಂಗ ಪೆರ್ಮಾಡಿ ಜಿನಾಲಯ ಅಥವಾ ಪೆರ್ಮಾಡಿ ಬಸದಿ, ಗಂಗ ಪೆರ್ಮಾಡಿ ಎಂದರೆ ಗಂಗರ ೨ನೆಯ ಬೂತುಗನಾಗಿದ್ದಾನೆ. ಅದರಂತೆ ಗಂಗ ಕಂದರ್ಪನೆಂದರೆ ಗಂಗರ ಮಾರಸಿಂಹ, ರಾಚಮಲ್ಲ, ದುರ್ವಿನಿತನ ಮಗ ಮುಷ್ಕರನು ಕಟ್ಟಿಸಿದ ಬಸದಿ ಮುಕ್ಕರ ಬಸದಿ ಇವು ಗಂಗ ದೊರೆಗಳೇ ಪುಲಿಗೆರೆಯಲ್ಲಿ ಕಟ್ಟಿಸಿದ ಬಸದಿಗಳು.

## ೪.೧.೨. 'ರಾಷ್ಟ್ರಕೂಟರು' (ಕ್ರಿಶ. ೭೫೩ ರಿಂದ ೯೭೩) :

ಕರ್ನಾಟಕದಲ್ಲಿ ಆಳ್ವಿಕೆ ನಡೆಸಿದ ಪ್ರಸಿದ್ಧ ಅರಸು ಮನೆತನಗಳಲ್ಲಿ ರಾಷ್ಟ್ರಕೂಟರು ಪ್ರಮುಖರಾಗಿದ್ದಾರೆ. ಇವರ ಆಳ್ವಿಕೆ ಕಾಲವು ರಾಜಕೀಯವಾಗಿ, ಧಾರ್ಮಿಕವಾಗಿ ಸಾಹಿತ್ಯಿಕವಾಗಿ ಹಾಗೂ ಸಾಂಸ್ಕೃತಿಕವಾಗಿ ಮಹತ್ವ ಪಡೆದ ಕಾಲಘಟ್ಟ ಈ ಅರಸು ಮನೆತನದ ೧ನೆಯ ಅಮೋಘವರ್ಷ ನೃಪತುಂಗ, ೨ನೇ ಕೃಷ್ಣ, ಮುಮ್ಮಡಿ ಅಮೋಘವರ್ಷ, ೩ನೇ ಕೃಷ್ಣ ಪ್ರಮುಖ ಅರಸರು ಗದಗ ಪರಿಸರದಲ್ಲಿ ಆಡಳಿತ ಮಾಡಿದ್ದಾರೆ. ಇದುವರೆಗೆ ತಿಳಿದು ಬಂದಂತೆ ಪುಲಿಗೆರೆ-೩೦೦ ವಿಭಾಗದ ಪ್ರಥಮ ಉಲ್ಲೇಖ ಬರುವುದು. ರಾಷ್ಟ್ರಕೂಟ ಅರಸರ ಕಾಲದಲ್ಲಿಯೇ.

## ೧ನೆಯ ಅಮೋಘವರ್ಷ (೮೧೪ ರಿಂದ ೮೭೪)

ಕ್ರಿ.ಶ. ೮೬೦ರಲ್ಲಿ ಈತನ ಆಳ್ವಿಕೆಯ ಕಾಲದಲ್ಲಿ ಗುಜರಾತಿನಲ್ಲಿದ್ದ ರಾಷ್ಟ್ರಕೂಟ ವಂಶದ ಇನ್ನೊಂದು ಶಾಖೆಯ ಅರಸರೂ, ದಕ್ಷಿಣದಲ್ಲಿ ತಲಕಾಡಿನ ಗಂಗರೂ ದಂಗೆಯೆದ್ದಾಗ ಅವರನ್ನು ಸೆದೆ ಬಡೆಯುವುದರಲ್ಲಿ ಸಹಾಯಕನಾಗಿದ್ದು ನಿಷ್ಠೆಯಿಂದ ಸೇವೆ ಸಲ್ಲಿಸಿದ ಚೆಲ್ಲಕೇತನ ಮನೆತನದ ಬಂಕೇಶನನ್ನು ಬನವಾಸಿ ಪನ್ನಿರ್ಚ್ಛಾಸಿಕ್ ಬೆಳ್ವೊಳ-೩೦೦, ಪುಲಿಗೆರೆ ೩೦೦ ಮತ್ತು ಇತರ ಪ್ರಾಂತಗಳ ಅಧಿಕಾರಿಯಾಗಿ ಮಾಡಲಾಯಿತೆಂದು ಶಾಸನಗಳು ತಿಳಿಸಿವೆ. ಈತನ ಕಾಲದಲ್ಲೇ ಅಪಾರವಾದ ವ್ಯಕ್ತಿತ್ವವನ್ನು ಪಡೆದಿದ್ದ ದೇವಣ್ಣಯ್ಯ ಸಾಮಂತಾಧಿಪತಿಯಾಗಿ ಬೆಳ್ವೊಲ-೩೦೦ನ್ನು ಆಳುತ್ತಿದ್ದಾಗ ಆತನ ಮೈದುನನಾದ ಕುಲಪಯ್ಯಾ ಮುಳಗುಂದ-೧೨ನ್ನು ಆಳುತ್ತಿದ್ದನೆಂದು ನೀಲಗುಂದ ಶಾಸನದಿಂದ ತಿಳಿಯುತ್ತದೆ.(೮೬೬)[೪೭]

## ೨ನೆಯ ಕೃಷ್ಣ (೮೭೮ ರಿಂದ ೯೧೪)

ಈತನ ಆಳ್ವಿಕೆಯಲ್ಲಿ ಮಹಾಸಾಮಂತನಾಗಿ ಬೆಳ್ವೊಲ-೩೦೦ನ್ನು ಮಹಾಸಿರಿವಂತನು ಆಳುತ್ತಿದ್ದನು ಮುಳಗುಂದ ೧೨ನ್ನು ಮಾಯಿರ್ಮ್ಮನೆಂಬುವನು ನಾಡ ಪ್ರಭುವಾಗಿ ನೋಡಿಕೊಳ್ಳುತ್ತಿದ್ದನು. ಈ ಅವಧಿಯಲ್ಲಿ ಶಿರೂರಿನ ಪರ್ಗವುಂಡನಾಗಿ ಬಗೆಗನು ವಾರಾಡಳಿತವನ್ನು ಮಾಡುತ್ತಿದ್ದನು ಎಂದು ಕ್ರಿ.ಶ. ೯೦೬ರ ವೆಂಕಟಾಪುರ ಶಾಸನವು ಉಲ್ಲೇಖಿಸುತ್ತದೆ.[೪೮]

ಮೂರನೆಯ ಇಂದ್ರನ ಸಾಮಂತನಾಗಿ "ಸ್ತ್ರೀಪಯ್ಯನೆಂಬುವನು ಬೆಳ್ವೊಲ-೩೦೦ನ್ನು ಆಳುತ್ತಿದ್ದನು. ೩ನೆಯ ಇಂದ್ರನ ಮಗ ೨ನೇ ಅಮೋಘವರ್ಷನ ಆಳ್ವಿಕೆಯಲ್ಲಿ ಕಲಿವಿಟ್ಟರಸ ಸಾಮಂತನಾಗಿ ಬೆಳ್ವೊಲ-೩೦೦ನ್ನು ಆಳುತ್ತಿದ್ದನು. ೨ನೇ ಕೃಷ್ಣನ ಕಾಲಕ್ಕೆ ಶಿರೂರಿನ ೪ನೆಯ ಸೋಮೇಶ್ವರ ೧೧೮೪ರಿಂದ ೧೧೯೭ ವಾರಾಡಳಿತದ ಜವಾಬ್ದಾರಿಯನ್ನು ನಿರ್ವಹಿಸಿದ ಬಗೆಗನು ಪ್ರಸ್ತುತ ಅಮೋಘವರ್ಷನ ಅಧಿಕಾರಾವಧಿಯಲ್ಲಿ ಮುಂದುವರಿಸಿದ್ದಾನೆಂದು ತಿಳಿಯುತ್ತದೆ.

## ೩ನೆಯ ಕೃಷ್ಣ

ಈತನ ಕಾಲದಲ್ಲಿ ನನ್ನಿಯ ಎರಡನೆಯ ಗಂಗಭೂತಯ್ಯನು ಬೆಳ್ವೊಲ-೩೦೦ನ್ನು ಆಳುತ್ತಿದ್ದನು. ಈತನ ಅಧೀನದಲ್ಲಿ ಲೋಕಯ್ಯನು ಕುರ್ತಕೋಟಿಯ ಗಾವುಂಡನಾಗಿ ಅದನ್ನು 'ಏಕಭೋಗ'ದಿಂದ ಆಳಿದನು. ಎಂದು ಕ್ರಿ.ಶ. ೯೪೬ರ ಕುರ್ತಕೋಟಿ ಶಾಸನವು ಉಲ್ಲೇಖಿಸುತ್ತದೆ.[೪೯]

---

೪೭. ಕ್ರಿ.ಶ. ೮೬೬ರ ನೀಲಗುಂದ ಶಾಸನ.

೪೮. ಕ್ರಿ.ಶ. ೯೦೬ರ ವೆಂಕಟಾಪುರ ಶಾಸನ.

೪೯. ಕ್ರಿ.ಶ. ೯೪೬ರ ಕುರ್ತಕೋಟಿ ಶಾಸನ.

ರಾಷ್ಟ್ರಕೂಟರ ಸಾಮಂತರಾಗಿ ಗಂಗರು ಈ ಪ್ರದೇಶವನ್ನು ಆಳಿದ ಉಲ್ಲೇಖಗಳಿವೆ. ಗಂಗದೊರೆ ಭೂತಗ (೯೩೭-೬೦)ನ ಎರಡನೆಯ ಮಗ ಮಾರಸಿಂಹ ಅತ್ಯಂತ ಪರಾಕ್ರಮಿಯಾಗಿದ್ದು ಅವರ ವೈರಿಗಳನ್ನೆಲ್ಲ ಸದೆಬಡಿದು ರಾಷ್ಟ್ರಕೂಟರ ನಿಷ್ಠಾವಂತ ಸಾಮಂತರಾಗಿ ಪಟ್ಟಕ್ಕೆ ಬಂದನು. ಹಲವಾರು ಯುದ್ಧಗಳನ್ನು ಮಾಡಿ ಸಾಮ್ರಾಜ್ಯವನ್ನು ವಿಸ್ತರಿಸಿದನು. ಈತನ ಮರಣದ ನಂತರ ಇವನ ಪಾಳೆಗಾರನಾಗಿದ್ದ ಪಾಂಚಾಲದೇವ ಮುಳಗುಂದ-೧೨ನ್ನೊಳಗೊಂಡ ಬೆಳ್ವೊಲ-೩೦೦ರ ಪ್ರದೇಶವನ್ನು ಆಳಿದನೆಂದು ಕ್ರಿ.ಶ. ೯೭೫ರ ಮುಳಗುಂದ ಶಾಸನವು ಉಲ್ಲೇಖಿಸುತ್ತದೆ.[೫೦]

ಕ್ರಿ.ಶ. ೮೬೦ರಲ್ಲಿ ಅಮೋಘವರ್ಷ ನೃಪತುಂಗನ ಮಹಾದಂಡನಾಯಕ ಬಂಕೆಯರಸ ನಿರ್ಮಿಸಿದ ಜೈನ ಬಸದಿಗೆ ಭೂದಾನದ ವಿವರವು ಕೊಣ್ಣೂರು ತಾಮ್ರಶಾಸನದಲ್ಲಿ ಉಲ್ಲೇಖಗೊಂಡಿದೆ.[೫೧]

ಮಾಸವಾಡಿ-೧೪೦ ಹಾಗೂ ಪುಲಿಗೆರೆ ನಾಡಿನ ಕೆಲವು ಪ್ರದೇಶಗಳ ರಾಷ್ಟ್ರಕೂಟರ ಮಾಂಡಲಿಕರಾಗಿ ಆಡಳಿತ ನಡೆಸಿದ ಅಂಶಗಳನ್ನು ೨ನೇ ಕೃಷ್ಣನ ಕಾಲದ ಮೇವುಂಡಿ ಶಾಸನದಿಂದ ತಿಳಿಯಬಹುದು.

ಹೀಗೆ ಗದಗ ಪ್ರದೇಶದ ಸ್ಥಳಗಳು ಈ ಅರಸು ಮನೆತನದ ಆಳ್ವಿಕೆಗೆ ಒಳಪಡುತ್ತಿದ್ದವು ಎಂಬುದು ತಿಳಿದುಬರುತ್ತದೆ. ಗಂಗವಂಶದ ಅವನತಿಯ ಕಾಲಕ್ಕೆ ರಾಷ್ಟ್ರಕೂಟರು ತಲೆಯೆತ್ತಿ ಜೈನ ಧರ್ಮವನ್ನು ಮೇಲೆತ್ತಿದರು. ಅವರಲ್ಲಿ ಕೆಲವರು ಜೈನ ಧರ್ಮವನ್ನು ಸ್ವೀಕರಿಸಿದರು. ಜೈನ ಇತಿಹಾಸದಲ್ಲಿ ಹೆಸರಾಂತ ಜೈನದಾರ್ಶನಿಕ ಅಕಲಂಕನಿಗೆ ಈ ಮನೆತನದ ದಂತಿದುರ್ಗನು ಗೌರವ ಸಲ್ಲಿಸಿದ ಉಲ್ಲೇಖವಿದೆ. ಸ್ವತಃ ಅಕಲಂಕಚಾರ್ಯರು (ಕ್ರಿ.ಶ.೭೨೦-೮೦) ರಾಷ್ಟ್ರಕೂಟರ ೧ನೇ ಕೃಷ್ಣನೇ ಶುಭತಂಗನಾಗಿದ್ದು (೭೫೩-೭೬) ಈ ಶುಭತುಂಗನ ಮಗನೇ ಅಖಿಲ ಭಾರತ ಖ್ಯಾತಿ ಅಕಲಂಕಚಾರ್ಯರು. ಅಕಲಂಕ ಸ್ವಧರ್ಮ ಪುಷ್ಪಸೇನ ಮುನಿಯ ಶಿಷ್ಯ ವಿಮಲಚಂದ್ರ ಮನಿಯು ಪ್ರಸಿದ್ಧರು.

೩ನೇ ಗೋವಿಂದ (೭೯೯) ನಂತರ ಹೆಸರಾದವರು ಅಮೋಘವರ್ಷನು ಈತನ ಕಾಲದ ಜೈನ ಸಂಸ್ಕೃತಿ ಕನ್ನಡ ಸಾಹಿತ್ಯ ಶಿಲ್ಪ ಕೃತಿಗಳ ಉನ್ನತ ದರ್ಜೆಯವು ಇವನು ಜೈನ ಧರ್ಮದ ಮಹಾಪೋಷಕನೆಂಬುದರಲ್ಲಿ ಸಂದೇಹವಿಲ್ಲ. ರಾಜಾಶ್ರಯ ದೊರತಂತೆ ರಾಜಗುರುಗಳು ಮಾಂಡಲಿಕರಾಗಿ ಆಡಳಿತ ನಡೆಸಿದರು. ರಾಷ್ಟ್ರಕೂಟರು ಮತ್ತು ಜೈನ ಧರ್ಮದೊಂದಿಗೆ ಸಂಬಂಧ ಜೈನ ಧರ್ಮದ ಬಲವನ್ನು ಹೆಚ್ಚಿಸಿತು. ಧರ್ಮದಲ್ಲಿ ರಾಜಕಾರಣವು ಇವರ ಕಾಲದಲ್ಲಿ ಬೆಸೆದುಕೊಂಡಿತು.

ರಾಷ್ಟ್ರಕೂಟರ ರಾಜಧಾನಿ ಮಾನ್ಯಖೇಡವು ರಾಜಕೀಯ ಚಟುವಟಿಕೆಗಳ ಕೇಂದ್ರವಾಗಿದ್ದು ಜೊತೆಗೆ ಜೈನ ಧಾರ್ಮಿಕ ಸಾಂಸ್ಕೃತಿಕ ಚಟುವಟಿಕೆಗಳ ಕೇಂದ್ರವೂ ಆಗಿತ್ತು. ಅಂತಹ ಮಾನ್ಯಖೇಡವು ಪರಮಾರವಂಶದ ರಾಜನಾದ ಹರ್ಷದೇವನು ಸುಟ್ಟಾಗ. ಪುಷ್ಪದಂತನಿಂದ ಹೊರಟ ನೋವಿನ ಉದ್ಗಾರವಿದು." ಮಾನ್ಯಖೇಟ ನಗರ ದೀನ ಮತ್ತು ಅನಾಥರ ನಗರವಾಗಿತ್ತು. ಯಾವಾಗಲೂ ಅರಳಿದ ಹೂಗಳಿಂದ ಶೋಭಿಸುವ ಉದ್ಯಾನವನಗಳು ಅವುಗಳಲ್ಲಿ ವಿಹರಿಸುವ ಜನರಿಂದ ಇಂದ್ರಪುರಿಯಂತೆ ಸುಂದರವಾಗಿತ್ತು. ಇಂಥ ನಗರವು ದಾರನಾಥನ

---

೫೦. ಕ್ರಿ.ಶ. ೯೭೫ರ ಮುಳಗುಂದ ಶಾಸನ.

೫೧. ಕ್ರಿ.ಶ. ೮೬೦ರ ಕೊಣ್ಣೂರು ಶಾಶನ.

ಕೋಪಾಗ್ನಿಯಿಂದ ದಗ್ಧವಾಗಿ ಹೋಯಿತು. ಇನ್ನು ಪುಷ್ಪದಂತ ಕವಿಯು ಎಲ್ಲಿ ವಾಸಿಯಾನು? ಬಹುಶಃ ಈ ನೋವು ಪುಷ್ಪದಂತ ಕವಿಯದಷ್ಟೇ ಆಗಿರದೇ ಇಡೀ ಜೈನ ಸಾಂಸ್ಕೃತಿಕ ವಲಯದ ನೋವು ಇದಾಗಿತ್ತು. ರಾಷ್ಟ್ರಕೂಟರ ಮನೆತನದ ಅವನತಿಯೊಂದಿಗೆ ಜೈನಧರ್ಮ ಮತ್ತೊಮ್ಮೆ ತನ್ನ ಬಾಹ್ಯ ನೆಲೆಯನ್ನು ಕಳೆದುಕೊಳ್ಳುವಂತಾಯಿತು.

ರಾಷ್ಟ್ರಕೂಟರ ೪ನೇ ಗೋವಿಂದನ ಅಸುಂಡಿ (೯೨೫)ರ ಶಾಸನದಲ್ಲಿ[೫೨] ಬಿಜ್ಜಾಪಾಠದ ಘೋರ ಜಿನಾಲಯದ ಪ್ರಸ್ತಾಪವಿದೆ. ಚಂದ್ರಪ್ರಭು ಭಟ್ಟಾಚಾರ್ಯರು ಇದರ ಆಚಾರ್ಯರಾಗಿದ್ದು ಅಸುಂಡಿಯ ಆಳ್ವಿಕೆ ಮಾಡುತ್ತಿದ್ದರು ಎಂಬುದರ ಉಲ್ಲೇಖವಿದೆ.

ಹೀಗೆ ರಾಷ್ಟ್ರಕೂಟರು ಗದಗ ಪರಿಸರದಲ್ಲಿ ಆಳ್ವಿಕೆ ನಡೆಸಿ ಜೈನ ಪರಂಪರೆಯನ್ನು ಬೆಳೆಸಿ ಉತ್ತಮ ಆಡಳಿತವನ್ನು ನೀಡಿದ್ದಾರೆ.

### ೪.೨.೩. ಸವದತ್ತಿ ರಟ್ಟರು :

ಮಹಿಳಾಪತೀರ್ಥನೆಂಬ[೫೩] ಜೈನ ಗುರು ಇವರ ವಂಶ ಸ್ಥಾಪಕ. ಸವದತ್ತಿಯನ್ನು ರಾಜಧಾನಿಯನ್ನಾಗಿ ಮಾಡಿಕೊಂಡು ಆಳ್ವಿಕೆ ನಡೆಸಿದ ಈ ಮನೆತನದವರು ರಾಷ್ಟ್ರಕೂಟರ, ಕಲ್ಯಾಣದ ಚಾಲುಕ್ಯರ ಸಾಮಂತರಾಗಿ ಗದಗ ಪರಿಸರದ ಉತ್ತರ ಭಾಗದಲ್ಲಿನ ಬೆಳ್ವೊಲ-೩೦೦ರ ಉಪವಿಭಾಗಗಳಾದ ಬೆಳವಣಿಕೆ-೧೨, ನರೇಗಲ್ಲು-೧೨, ಗದಗ ಪ್ರದೇಶದ ಸುತ್ತಮುತ್ತಲಿನ ಕೆಲವು ಗ್ರಾಮಗಳಲ್ಲಿ ಆಡಳಿತ ನಡೆಸಿದ ಉಲ್ಲೇಖಗಳು ಸಿಗುತ್ತವೆ. ಇವರು ಜೈನ ಮತದ ಅರಸರಾಗಿದ್ದರಿಂದ ಈಗಿನ ಗದಗ ಜಿಲ್ಲೆಯ ಉತ್ತರ ಭಾಗದಲ್ಲಿ ಜೈನ ಧರ್ಮ ತತ್ವಗಳ ಪ್ರಸಾರ, ಬೆಳವಣಿಗೆ ಮಾಡಿದ್ದರಲ್ಲಿ ಇವರು ಪ್ರಮುಖ ಪಾತ್ರ ಹಾಗೂ ಪ್ರಾಬಲ್ಯ ಕಂಡು ಬರುತ್ತದೆ. ಹಲವಾರು ಜೈನ ಮುನಿಗಳಿಗೆ, ಜೈನ ಬಸದಿಗಳನ್ನು ನಿರ್ಮಿಸಿದ್ದಾರೆ. ಹೀಗಾಗಿ ರಟ್ಟರು ಸಹ ಗದಗ ಪರಿಸರದಲ್ಲಿ ಜೈನ ಧರ್ಮದ ಬೆಳವಣಿಗೆಯಲ್ಲಿ ಪ್ರಮುಖ ಪಾತ್ರವನ್ನು ವಹಿಸುತ್ತಾರೆ.

ಹೀಗೆ ಗದಗ ಪರಿಸರದಲ್ಲಿ ಮೌರ್ಯರು, ಶಾತವಾಹನರು, ಕದಂಬರು, ಗಂಗರು, ಬದಾಮಿ ಚಾಲುಕ್ಯರು, ರಾಷ್ಟ್ರಕೂಟರು, ಕಲ್ಯಾಣದ ಚಾಲುಕ್ಯರು, ಗಂಗರು ಹೊಯ್ಸಳರು ಕಲಚೂರಿಗಳು, ವಿಜಯನಗರದ ಅರಸರು, ರಟ್ಟರು ಈ ವಂಶಗಳ ಅರಸರು, ಸಾಮಂತರು ಮಹಾಮಂಡಲೇಶ್ವರರು ಅಧಿಕಾರಿಗಳು ಆಡಳಿತ ನಿರ್ವಹಿಸಿ ಜೈನ ಧರ್ಮದ ಅಭ್ಯುದಯಕ್ಕೆ ಕಾರಣೀಕರ್ತರಾಗಿದ್ದಾರೆ. ಮುಂದೆ ಗದಗ ಪರಿಸರವು ಆದಿಲ್‌ಷಾಹಿಗಳು ಬ್ರಿಟಿಷರ ಆಳ್ವಿಕೆ ಒಳಪಟ್ಟು ಮರಾಠರ ಆಳ್ವಿಕೆ ಒಳಪಟ್ಟ ಸ್ವಾತಂತ್ರ್ಯ ಹೋರಾಟ ಹಾಗೂ ಕರ್ನಾಟಕ ಏಕೀಕರಣ ಸಂದರ್ಭದಲ್ಲಿ ಮಹತ್ವದ ಪಾತ್ರವನ್ನು ವಹಿಸಿದೆ.

---

೫೨. ಕ್ರಿ.ಶ. ೯೨೫ರ ಅಸುಂಡಿ ಶಾಸನ.

೫೩. ರಟ್ಟರ ಕಾಲದ ಸಂಸ್ಕೃತ ಮತ್ತು ಕನ್ನಡ ಶಾಸನಗಳು-ಜೆ.ಎಫ್. ಫ್ಲೀಟ್‌ರು-೧೮೭೪.

ಈ ಎಲ್ಲಾ ಅರಸುಮನೆತನಗಳು ನೀಡಿದ ದಾನದತ್ತಿಗಳ ಕುರುಹು ಆಗಿ ಇಂದಿಗೂ ಸಹ ಗದಗ ಪರಿಸರದಲ್ಲಿ ಗ್ರಾಮಗಳಲ್ಲಿ ಜೈನ ಧರ್ಮದ ಪರಂಪರೆಯ ಸಂಕೇತವಾಗಿ ಜೈನ ಬಸದಿಗಳು ಜೈನ ಮಠಗಳು ಉಳಿದು ಬಂದಿವೆ. ಗದಗ, ಲಕ್ಷ್ಮೇಶ್ವರ, ಲಕ್ಕುಂಡಿ, ಮುಳಗುಂದ[೫೪] ಸೊರಟೂರು[೫೫], ಕೊಣ್ಣೂರು, ರೋಣ, ಜಕ್ಕಲಿ, ನರೇಗಲ್ಲ, ಡೋಣಿ, ಡಂಬಳ, ಕಲಕೇರಿ, ಚಿಂಚಲಿ ಹರ್ತಿ, ಕುರ್ತಕೋಟಿ, ಮುಂಡರಗಿ ಮುಂತಾದ ಸ್ಥಳಗಳಲ್ಲಿ ಜೈನ ಧರ್ಮದ ಧಾರ್ಮಿಕ ಕೇಂದ್ರಗಳಾಗಿ ಇಂದಿಗೂ ಪ್ರಸಿದ್ಧಿಯನ್ನು ಪಡೆದುಕೊಂಡಿವೆ. ಹೀಗೆ ಈ ಪರಿಸರದಲ್ಲಿ ಜೈನ ಪರಂಪರೆಯು ಬೆಳೆದು ಬರುವುದಕ್ಕೆ ಕಾರಣೀಕರ್ತರು ಈ ರಾಜ ಮನೆತನಗಳ ಅರಸರು, ಸಾಮಂತ ಅರಸರು, ಅಧಿಕಾರಿ ವರ್ಗದವರಿಗೆ ಸಲ್ಲಬೇಕು. ಅವರು ಬೆಳೆಸಿದ ಆ ಪರಂಪರೆಯನ್ನು ಉಳಿಸಿ ಬೆಳೆಸಿಕೊಂಡು ಹೋಗುವುದು ನಮ್ಮೆಲ್ಲರ ಹೊಣೆಯಾಗಿದೆ. ಆ ಜೈನ ಪರಂಪಾರಿಕ ಕೇಂದ್ರಗಳ ಸಂರಕ್ಷಣೆ, ಸಾಂಸ್ಕೃತಿಕ ಪರಂಪರೆಯನ್ನು ರಕ್ಷಣೆ ಮಾಡಿಕೊಂಡು ಮುನ್ನಡೆಸುವುದು ನಮ್ಮ ಪ್ರಮುಖ ಧ್ಯೇಯವಾಗಬೇಕು. ಇಂದಿನ ಅಸಹಿಷ್ಣುತೆಯ ಯುಗದಲ್ಲಿ ಜೈನ ಪರಂಪರೆಯ ಮಹತ್ವ ಐತಿಹಾಸಿಕ ಮಹತ್ವವನ್ನು ಅರಿತು ಅದನ್ನು ಇಂದಿನ ಜನಸಾಮಾನ್ಯರಿಗೂ ತಿಳಿಯಪಡಿಸಿ ಸಂರಕ್ಷಣೆ ಮಾಡುವುದು ಚಾರಿತ್ರಿಕ ಪ್ರಜ್ಞೆ ಬೆಳೆಸುವುದು ನಮ್ಮೆಲ್ಲರ ಉದ್ದೇಶವಾಗಿದೆ. ಪರಸ್ಪರ ಸ್ನೇಹ ಸೌಹಾರ್ದ, ಪ್ರೀತಿ, ವಿಶ್ವಾಸಗಳನ್ನು ಕುದುರಿಸಿ ಒಗ್ಗಟ್ಟನ್ನು ಗಟ್ಟಿಗೊಳಿಸುವುದು ಕೂಡ ಇಂದು ಬಹಳ ಅಗತ್ಯವಾಗಿದೆ.

ಬದಾಮಿ ಚಾಲುಕ್ಯರ ೨ನೇ ಕೀರ್ತಿವರ್ಮನ ಕಾಲದಲ್ಲಿ ಜೋಬುಳಗೇರಿಯ ಗಾವುಂಡನೊಬ್ಬ ಅಣ್ಣಿಗೇರಿಯಲ್ಲಿ ಜೈನ ಬಸದಿಯೊಂದನ್ನು ಕಟ್ಟಿಸಿದ್ದು ಈ ದೊರೆಯ ಆಳ್ವಿಕೆಯಲ್ಲಿಯೇ.

ಬದಾಮಿಯ ಚಾಲುಕ್ಯರ ಕಾಲದ ವೈದಿಕೇತರ ಧರ್ಮಗಳಲ್ಲಿ ಜೈನಧರ್ಮ ತಕ್ಕಷ್ಟು ಪ್ರಚಾರದಲ್ಲಿದ್ದುದಕ್ಕೆ ಆಧಾರಗಳು ದೊರೆಯುತ್ತವೆ. ಬದಾಮಿಯ ಮಹಾದೇವಾಲಯಗಳಲ್ಲಿ ನಾಲ್ಕನೆಯದು ಜೈನ ಮಹಾದೇವಲಯವಾಗಿದೆ. ಐಹೊಳೆಯ ಮೀನಬಸದಿ (ಗುಹಾಲಯ), ರವಿಕೀರ್ತಿ ನಿರ್ಮಿಸಿದ ಜೈನ ಬಸದಿ (ಮೇಗುತಿ-ಗುಡಿ) ವಿಜಯಾದಿತ್ಯನ ಸೋದರಿ ಕುಂಕುಮ ಮಹಾದೇವಿ ಲಕ್ಷ್ಮೇಶ್ವರದಲ್ಲಿ ಕಟ್ಟಿಸಿದ ಆನೆ ಸಜ್ಜೆಯ ಬಸದಿ, ಇತ್ಯಾದಿಗಳು ಜೈನರ ಸಂಖ್ಯೆ ಗಮನಾರ್ಹವಾಗಿದ್ದುದನ್ನು ಸೂಚಿಸುತ್ತವೆ.

ಒಂದು ನಾಡಿನ ಸಾಂಸ್ಕೃತಿಕ ಅಧ್ಯಯನ ಆ ನಾಡಿನ ತಾತ್ಕಾಲೀನ ಧಾರ್ಮಿಕ ಪರಿಸರದ ಹಿನ್ನೆಲೆಯಲ್ಲಿ ಹೆಚ್ಚು ಅರ್ಥಪೂರ್ಣವೆನಿಸುತ್ತದೆ. ಪರಂಪರೆ ಧರ್ಮ ಒಂದು ಜನಾಂಗದ ಸಂಸ್ಕೃತಿಯನ್ನು ರೂಪಿಸುವಲ್ಲಿ ತುಂಬಾ ಮಹತ್ವದ ಪಾತ್ರವಾಡುತ್ತಿದೆ. ಒಂದು ಕಾಲದ ಧಾರ್ಮಿಕ ಪರಿಸರದ ಅಧ್ಯಯನಕ್ಕೆ ಆ ಕಾಲದ ಸಾಹಿತ್ಯ ಇತಿಹಾಸ ಹಾಗೂ ಶಾಸ್ತ್ರಗ್ರಂಥಗಳು ವಿದೇಶೀ ಪ್ರವಾಸಿಗರ ಬರಹಗಳು, ಉತ್ಖನನಗಳಲ್ಲಿ ದೊರೆತ ಪ್ರಾಚೀನ ಅವಶೇಷಗಳು, ಮುಖ್ಯವಾಗಿ ಶಾಸನಗಳು ನೆರವು ನೀಡುತ್ತವೆ. ಇನ್ನು ಮಹತ್ವದ ಹಾಗೂ ಹೆಚ್ಚು ವಿಶ್ವಾಸಾರ್ಹ ಸಾಮಾಗ್ರಿಗಳೆಂದರೆ ವಾಸ್ತು ಹಾಗೂ ಮೂರ್ತಿ ಶಿಲ್ಪಗಳು ಅವು ಆಯಾಕಾಲದ ಜನರ ಧಾರ್ಮಿಕ ಭಾವನೆಗಳನ್ನು ಅವರ ದೈವಿ

೫೪. ಜೆ. ಎಫ್. ಫ್ಲೀಟ್‌ರು-ರಟ್ಟರ ಕಾಲದ ಶಾಸನಗಳು-(೧೮೭೪-೧೯೦-೯೧)
೫೫. ಜೆ. ಎಫ್. ಫ್ಲೀಟ್‌ರು-ರಟ್ಟರ ಕಾಲದ ಶಾಸನಗಳು-(೧೮೭೪-೧೯೫)

ಭಕ್ತಿಯನ್ನು ಒಂದಿಲ್ಲೊಂದು ರೀತಿಯಲ್ಲಿ ಹಿಡಿದಿಟ್ಟುಕೊಂಡಿರುತ್ತವೆ. "ಬಹು ಧರ್ಮಧೇನು ನೀರಹಕ್ಕೆ ಆಡುಂ ಬೊಲಂ"

"ಸಹಕಾರತತ್ವ ಕನ್ನಡಿಗರಿಗೆ ಹೊಸತಲ್ಲ. ನಮ್ಮ ಪೂರ್ವಜರಲ್ಲಿ ಅದು ರಕ್ತಗತವಾಗಿತ್ತು. ಆ ರಕ್ತವೇ ನಮ್ಮಲ್ಲಿ ಇಳಿದು ಬಂದಿದೆ. ಕಾರಣಾಂತರಗಳಿಂದ ನಮ್ಮಲ್ಲಿರುವ ಸಹಕಾರ ಮನೋಭಾವನೆ ಮಬ್ಬು ಕವಿದಿರಬಹುದು. ಆ ಕವಿದಿರುವ ಮಬ್ಬನ್ನು ಹೊಡೆದೊಡಿಸಿದಲ್ಲಿ ಪ್ರತಿಯೊಬ್ಬನೂ ಅದರ ಮಹತ್ವವರಿತು ಕಾರ್ಯೋನ್ಮುಖ ಆಗುವುದರಲ್ಲಿ ಸಂದೇಹವಿಲ್ಲ. ಅಂತಹ ಒಂದು ಪವಿತ್ರ ಕಾರ್ಯವನ್ನು ಇಂದು ಅಸ್ತಿತ್ವದಲ್ಲಿರುವ ಸಹಕಾರಿ ಸಂಘಗಳು ಮಾಡಬೇಕಾಗಿದೆ. ಸಹಕಾರಿ ಸಂಘಗಳು ತಮ್ಮ ಕೃತಿಯಿಂದ ಸಹಕಾರದ ಮಹತ್ವವನ್ನು ಅನ್ಯ ಜನರಿಗೆ ಮನವರಿಕೆ ಮಾಡಿಕೊಟ್ಟು ಅವರೂ ಅದರಲ್ಲಿ ಪಾಲುಗಾರರಾಗುವಂತೆ ಮಾಡಿದ್ದರೆ ಗ್ರಾಮೀಣಾಭಿವೃದ್ಧಿ ಬಹುಬೇಗನೆ ಸಾಧ್ಯವಾಗುತ್ತದೆ. ಸಹಕಾರವೇ ಸಮೃದ್ಧಿಯ ಮೂಲ, ಸಹಕಾರವೇ ಏಳಿಗೆಯ ಏಣಿ, ಸಹಕಾರದಿಂದಲೇ ಸರ್ವ ಸಮಸ್ಯೆಗಳಿಗೆ ಪರಿಹಾರ.

***

ಅಧ್ಯಾಯ ೫

# ಗದಗ ಪರಿಸರ ಮತ್ತು ಜೈನ ಬಸದಿಗಳು–ಮಠಗಳು

---

**೫.೧. ಪೀಠಿಕೆ :**

ಧರ್ಮಶ್ರದ್ಧೆ, ಆಧ್ಯಾತ್ಮಿಕತೆಯನ್ನು ಬದುಕಿಸಿ ಕೇಂದ್ರ ಪ್ರಜ್ಞೆಯಾಗಿಸಿಕೊಂಡಿರುವ ಭಾರತೀಯ ಸಂಸ್ಕೃತಿಯಲ್ಲಿ ದೇವಾಲಯಗಳಿಗೆ ವಿಶೇಷ ಮಹತ್ವವಿದೆ. ದೈವಾರಾಧನೆಯ ತಾಣಗಳಾಗಿರುವ ದೇವಾಲಯಗಳು ಪ್ರಾಚೀನ ಕಾಲದಿಂದಲೂ ಸಾಹಿತ್ಯ, ಸಂಗೀತ, ಕಲೆ ವಿದ್ಯೆಯ ಕೇಂದ್ರಗಳಾಗಿವೆ. ವೇದಪೂರ್ವದ ನಾಗಾರಾಧನೆಯ ಕಾಲದಿಂದ ವೇದೋತ್ತರದ ಅವಧಿಯಲ್ಲಿ ವಿಭಿನ್ನ ತಾತ್ವಿಕ ಪ್ರಣಾಳಿಕೆಯುಳ್ಳ ಹಲವಾರು ಧರ್ಮದರ್ಶನಗಳು ಉದಯಿಸಿವೆ. ಆಸ್ತಿಕ–ನಾಸ್ತಿಕ–ಚಾರ್ವಾಕ–ಜೈನ–ಬೌದ್ಧ ಇತ್ಯಾದಿ ಪರಸ್ಪರ ವೈರುಧ್ಯಾತ್ಮಕ ಧೋರಣೆಯುಳ್ಳ ಧರ್ಮಪಂಥಗಳು ಒಂದಾಗಿ ಬಾಳಿ ಬದುಕಿವೆ. ಆತ್ಮ ಪರಮಾತ್ಮದ ಅಸ್ತಿತ್ವವನ್ನು ಒಪ್ಪುವ ನಿರಾಕರಿಸುವ ವಿಭಿನ್ನ ಧರ್ಮ–ದರ್ಶನಗಳು ಭಾರತದ ಆಧ್ಯಾತ್ಮಿಕ ಪರಂಪರೆಯನ್ನು ರೂಪಿಸಿದ್ದರೂ, ದೇವಾಲಯಗಳ ನಿರ್ಮಾಣ ಅವ್ಯಾಹತವಾಗಿ ನಡೆದು ಬಂದಿರುವದು ಕುತೂಹಲದ ವಿಚಾರ, ದೈವಭಕ್ತಿ, ಶ್ರದ್ಧೆ, ಆರಾಧನೆ ಆಚರಣೆಗಳ ಸಂಕೇತವಾಗಿರುವ ದೇವಾಲಯಗಳು ಭಾರತೀಯರ ಬದುಕಿನ ಅವಿಭಾಜ್ಯ ಅಂಗಗಳಾಗಿವೆ. ಆಯಾ ಸಂದರ್ಭದ ರಾಜಕೀಯ–ಧಾರ್ಮಿಕ ಸ್ಥಿತ್ಯಂತರಗಳಿಂದಾಗಿ ಅನ್ಯಧರ್ಮಿಯರ ಆಕ್ರಮಣ ಆಘಾತಗಳಿಂದ ನಾಶಹೊಂದಿವೆ; ಭಗ್ನಗೊಂಡಿವೆ. ಹೀಗೆ ಶತಮಾನಗಳ ಕಾಲದ ಹೊಡೆತಗಳನ್ನು ಮನುಷ್ಯ ದಬ್ಬಾಳಿಕೆಯನ್ನು ತಾಳಿಕೊಂಡು ಅಳಿದುಳಿದಿರುವ ಬಹುಸಂಖ್ಯೆಯ ದೇವಾಲಯಗಳು ಭಾರತೀಯ ಸಂಸ್ಕೃತಿಯ ಅನನ್ಯತೆ ಮತ್ತು ವೈರುಧ್ಯಗಳಿಗೆ ಮೌನ ಸಾಕ್ಷಿಯಾಗಿವೆ.

ದೇವಾಲಯ ಹಾಗೂ ಶಿಲ್ಪಗಳು ಆಯಾ ಪ್ರದೇಶದ ಸಾಂಸ್ಕೃತಿಕ ಚರಿತ್ರೆಯ ಬರವಣಿಗೆಯಲ್ಲಿ ಪ್ರಧಾನ ಪಾತ್ರವಹಿಸಿವೆ. ಆದ್ದರಿಂದಲೇ "ದೇವಾಲಯಗಳನ್ನು ಆಯಾ ಕಾಲದ ವರ್ತಮಾನವನ್ನು ಸಾದಾರಪಡಿಸುವ ಮಾಧ್ಯಮಗಳೆಂದು ಪರಿಗಣಿಸಲಾಗಿದೆ." ಧಾರ್ಮಿಕ ಮತಗಳ ಅನುಗುಣವಾಗಿ ವಿಭಿನ್ನ ಸ್ಥಳ, ಸ್ಮಾರಕಗಳು ಬೇರೆ ಬೇರೆ ಹೆಸರುಗಳಿಂದ ಕರೆಯಲ್ಪಟ್ಟಿವೆ. ಅಂದರೆ ಹಿಂದುಗಳು ದೇವಾಲಯ ಎಂದು ಕರೆದರೆ ಬೌದ್ಧರು ಚೈತ್ಯವೆಂದು, ಜೈನರು ಬಸದಿ ಎಂದು ಕರೆದರು.

ಭಾರತದ ದೇವಾಲಯಗಳ ಚರಿತ್ರೆ ವಿಸ್ಮಯ ಹುಟ್ಟಿಸುತ್ತದೆ. ದೇವರ ಅಸ್ತಿತ್ವದ ಬಗ್ಗೆ ಬಹುತೇಕ ಮೌನವಾಗುಳಿದಿರುವ ಮೂರ್ತಿ ಪೂಜೆಯನ್ನು ನಿರಾಕರಿಸುವ ಬೌದ್ಧ ಮತ್ತು ಜೈನ ಧರ್ಮಗಳು ಕಾಲಾಂತರದಲ್ಲಿ ದೇವಾಲಯಗಳನ್ನು ನಿರ್ಮಿಸಿದುದು. ಜಿನ–ಬುದ್ಧರೇ ದೇವರಾಗಿ ಆರಾಧನೆಗೊಳ್ಳುತ್ತಿರುವ ವಾಸ್ತವವು ದೇವಾಲಯಗಳು ಭಾರತೀಯ ಪ್ರಜ್ಞೆಯನ್ನು ಆಳವಾಗಿ ಪ್ರಭಾವಿಸಿದ್ದರ ಕುರುಹು. ದೇಹ ದೇವಾಲಯದ ಅತಂತ್ರಿಕ ದರ್ಶನವನ್ನು ಪ್ರತಿಪಾದಿಸಿದ ಶರಣರನ್ನು ಸ್ಥಾವರ ಮೂರ್ತಿಗಳಾಗಿಸಿ ದೇವಾಲಯ ನಿರ್ಮಿಸುವ ಬಳವಣಿಗೆಗಳು ಇದಕ್ಕೆ ನಿದರ್ಶನವಾಗಿವೆ.

ಸರ್ವಧರ್ಮ ಸಮನ್ವಯದ ಬೀಡಾಗಿದ್ದ ಕರ್ನಾಟಕವು ಹಿಂದಿನಿಂದಲೂ ದೇವಾಲಯ ಸಂಸ್ಕೃತಿಯನ್ನು ಪೋಷಿಸಿಕೊಂಡು ಬಂದಿದೆ. ಈ ಪ್ರದೇಶದಲ್ಲಿ ಅರಸು ಮನೆತನಗಳು, ಅಧಿಕಾರಿಗಳು, ನೂರಾರು ದೇವಾಲಯಗಳನ್ನು ನಿರ್ಮಿಸಿದ್ದಾರೆ. ದೇವಾಲಯಗಳು ನಮ್ಮ ಪೂರ್ವಜರ ಕಲಾಭಿರುಚಿ ಧರ್ಮಶ್ರದ್ಧೆಗೆ ಜೀವಂತ ನಿದರ್ಶನಗಳಾಗಿವೆ. ಕಲೆಯನ್ನು ಕದ್ದು ಮಾರುವ ವಾಣಿಜ್ಯ ಸಂಸ್ಕೃತಿಯ ಹಣದಾಹಕ್ಕೆ ಸಾಕ್ಷಿಯಂತಿರುವ ಪ್ರಾಚೀನ ದೇವಾಲಯಗಳ ಬರಿದಾದ ಗರ್ಭಗುಡಿಗಳು ಖಾಲಿದೇವ ಕೋಷ್ಟಗಳು, ಬಣಗುಡುವ ವೇದಿಕೆಗಳು ಆಧುನಿಕ ಮನಸ್ಸಿನ ನೈತಿಕ ದಿವಾಳಿತನಕ್ಕೆ ಕನ್ನಡಿಯಾಗಿವೆ. ಪ್ರಸ್ತುತ ಗದಗ ಪರಿಸರದಲ್ಲಿರುವ ಜೈನ ಬಸದಿಗಳು ಹಾಗೂ ಅವಶೇಷಗಳ ಮಹತ್ವವನ್ನು ಕುರಿತು ಅವಲೋಕನ ಮಾಡಲಾಗಿದೆ.

ಕವಿರಾಜ ಮಾರ್ಗಕಾರ[೧] ಸ್ತುತಿಸಿದ ತಿರುಗ್ಗನ್ನಡದ ಪ್ರದೇಶವು ಕರ್ನಾಟಕದ ಸಂಸ್ಕೃತಿ ಮತ್ತು ಧಾರ್ಮಿಕ,

---

೧. ಕವಿರಾಜ ಮಾರ್ಗ–ಶ್ರೀವಿಜಯ ಅಧ್ಯಾಯ–೧, ಪದ್ಯ–೩೭.
ಅದರೊಳಗಂ ಕಿಸುವೊಳಲಾ
ವಿದಿತ ಮಹಾಕೊಪಣ ನಗರದಾ ಪುಲಿಗೆರೆಯಾ
ಸದಭಿಸ್ತುತಮಪ್ಪೊಕ್ಕುಂ
ದದ ನಡುವಣ ನಾಡೆ ಕನ್ನಡದ ತಿರುಳ್

ಸಾಹಿತ್ಯಿಕ ಚರಿತ್ರೆಯಲ್ಲಿ ವಿಶೇಷ ದಾಖಲೆಗಳನ್ನು ನಿರ್ಮಿಸಿದ ನಾಡು. ಬೆಳ್ವೊಲ-೩೦೦, ಪುಲಿಗೆರೆ-೩೦೦[೨] ಎಂದೇ ಖ್ಯಾತವಾಗಿರುವ ತುಂಗಭದ್ರೆಯ ಉತ್ತರದ ಈ ಪ್ರದೇಶವು ಕನ್ನಡ ಸಾಹಿತ್ಯ ಧರ್ಮ, ಕಲೆಯ ಕ್ಷೇತ್ರದಲ್ಲಿ ಉನ್ನತ ಶಿಖರಗಳನ್ನು ನಿರ್ಮಿಸಿದ ಫಲವತ್ತಾದ ನೆಲ. ಇಂಥ ಪುಣ್ಯಭೂಮಿ ಪ್ರದೇಶದ ಹೃದಯ ಭಾಗದಲ್ಲಿರುವ ಗದಗ ಜಿಲ್ಲೆಯು ೫ ತಾಲೂಕುಗಳನ್ನೊಳಗೊಂಡ ಸಣ್ಣ ಜಿಲ್ಲೆ. ಈ ಭಾಗದಲ್ಲಿ ಉಪಲಬ್ಧವಾದ ಬಹುಪಾಲು ಶಾಸನಗಳು ಭೂದಾನ, ಸಂಪತ್ತು ದಾನದ ವಿವರವನ್ನು ನೀಡುತ್ತಿವೆ. ಧರ್ಮ ಮಾರ್ಗದಲ್ಲಿ ಸಂಪಾದನೆ ಸಂಪತ್ತನ್ನು ದಾನ ಧರ್ಮಕ್ಕಾಗಿ ಸದ್ವಿನಿಯೋಗಗೊಳಿಸಿಕೊಳ್ಳಬೇಕೆಂಬ ಕನ್ನಡಿಗರ ನಂಬಿಕೆ ನಿಷ್ಠೆ ದಾನಗುಣಕ್ಕೆ ಶಾಸನಗಳಲ್ಲಿ ಅಸಂಖ್ಯ ನಿದರ್ಶನಗಳಿವೆ. ದೇವಸ್ಥಾನ ಮತ್ತು ಕೆರೆಕಟ್ಟೆಗಳ ನಿರ್ಮಾಣದಿಂದ ಪುಣ್ಯಗಳಿಸಬೇಕೆನ್ನುವ ಕನ್ನಡಿಗರ ಮೌಲ್ಯಶ್ರದ್ಧೆಗೆ ಶಾಸನಗಳು ಸಾಕ್ಷಿ ನುಡಿಯುತ್ತಿವೆ. ದೇವಸ್ಥಾನದ ನಿರ್ಮಾಣವು ಉಳ್ಳವರ ಸೇವೆಯಾದರೆ ದೇವಾಲಯದ ಇನ್ನಿತರ ಅಗತ್ಯತೆಗಳಾಗಿ ಸಾಮಾನ್ಯರು ಯಥೋಚ್ಛವಾಗಿ ದಾನ ನೀಡಿದ್ದಾರೆ. ಹೀಗೆ ಉಳ್ಳವರಿಂದ ದಾನವಾಗಿ ಬಂದ ಸಂಪತ್ತನ್ನು ಸಮಾಜದ ಹಿತಕ್ಕಾಗಿ ವಿನಿಯೋಗಿಸುವ ಮೂಲಕ ದೇವಾಲಯಗಳು ಜನಮನ್ನಣೆ ಪಡೆದುಕೊಂಡಿವೆ. ಕೆರೆ-ಭಾವಿಗಳ ನಿರ್ಮಾಣ ಬಡವರಿಗೆ ಅನ್ನದಾನ ರೈತರು ಶಿಲ್ಪಿಗಳು ಕಲಾವಿದರು ಅಕ್ಕಸಾಲಿಗ ಇತ್ಯಾದಿ ವೃತ್ತಿಯ ಜನರಿಗೆ  ಉದ್ಯೋಗ ಒದಗಿಸಿವೆ.

ಪ್ರಾಪಂಚಿಕೆಯಲ್ಲಿ ಮುಳುಗಿ ಮೆತ್ತರಾದ ಮನುಷ್ಯರಲ್ಲಿ ಆಧ್ಯಾತ್ಮಿಕತೆ, ನೈತಿಕತೆ ಮತ್ತು ಜೀವಪರಿತೆಯ ಕಾಳಜಿ ಮೂಡಿಸಿ, ಮನುಷ್ಯರ ನೈತಿಕ, ಆಧ್ಯಾತ್ಮಿಕ ಅಂತಃಶಕ್ತಿಯನ್ನು ಜಾಗೃತಗೊಳಿಸುವ ಚೈತ್ಯನದ ಮೂಲಗಳಾಗಿ ಮಹತ್ವದ ಪಾತ್ರವಾಗಿವೆ. ಸೌಂದರ್ಯ ಪ್ರಜ್ಞೆಯ ವ್ಯಕ್ತಿರೂಪಗಳಾಗಿರುವ ದೇವಾಲಯಗಳ ಸ್ವಧರ್ಮನಿಷ್ಠೆ ಪರಧರ್ಮ ಸಹಿಷ್ಣುತೆಯ ಮಾದರಿಗಳು ಹೌದು.

ಲಕ್ಷ್ಮೇಶ್ವರ, ಲಕ್ಕುಂಡಿ, ಮುಳಗುಂದ, ಸೊರಟೂರು, ಡಂಬಳ, ರೋಣ, ಮುಂಡರಗಿ, ಶಿರಹಟ್ಟಿ ಮುಂತಾದ ಇತಿಹಾಸದ ಪ್ರಸಿದ್ಧ ಸ್ಥಳಗಳನ್ನು ಒಳಗೊಂಡಿರುವ ಗದಗ ಜಿಲ್ಲೆ ಪ್ರಾಚೀನ ಕಾಲದಲ್ಲಿ ಹಲವಾರು ರಾಜ ಮನೆತನಗಳ ಆಳ್ವಿಕೆಗೆ ಒಳಪಟ್ಟಿತ್ತು. ಈ ಪ್ರದೇಶ ಬೆಳ್ವೊಲ-೩೦೦, ಪುಲಿಗೇರಿ-೩೦೦, ಮುಳಗುಂದ-೧೨, ನರೇಗಲ್ಲು-೧೨, ಬೆಳವಣಿಕೆ-೧೨, ಮಾಸವಾಡಿ-೧೪೦ ವಿಭಾಗಗಳಲ್ಲಿ ಹರಡಿದ್ದ ಈಗಿನ ಗದಗ ಜಿಲ್ಲೆಯ ಗ್ರಾಮಗಳಲ್ಲಿ ಅರಸರಿಂದ, ಅಧಿಕಾರಿ ವರ್ಗದವರಿಂದ ನೂರಾರು ಬಸದಿಗಳು ನಿರ್ಮಾಣವಾಗಿವೆ. ಇವುಗಳೇ ಗದಗ ಜಿಲ್ಲೆಯ ಚಾರಿತ್ರಿಕ, ಸಾಂಸ್ಕೃತಿಕ ಚಿತ್ರವನ್ನು ನೀಡುತ್ತಿವೆ.

---

೨. ಪಂಪಭಾರತ-ಪಂಪ, ಅಧ್ಯಾಯ-೧೪, ಪದ್ಯ-೫೪.
ರಾಜದ್ರಾಜಕಮೆನಿಸಿದ
ಸಜಿದ ಪುಲಿಗೆರೆಯ ತಿರುಳ್ ಕನ್ನಡದೊಳ್ನ
ವ್ಯಾಜದೆಸಕದೊಳ್ ಪುದಿದಂ
ದೋಚೆಯ ಬಲದಿಯ ಕವಿತೆ ಪಂಪನ ಕವಿತೆ

ಗದಗ ಪರಿಸರದಲ್ಲಿನ ಜೈನ ಪರಂಪರೆಯ ಕೇಂದ್ರಗಳಾದ ಪುಲಿಗೆರೆಯ–ಶಂಖಬಸದಿ, ಅನಂತನಾಥ ಬಸದಿ, ಲಕ್ಕುಂಡಿಯ ಬ್ರಹ್ಮ ಜಿನಾಲಯ, ಸೊರಟೂರಿನ–ಬಲದೇವ ಬಸದಿ, ಮುಳಗುಂದದ–ಚಂದ್ರನಾಥ ಬಸದಿ, ಪಾರ್ಶ್ವನಾಥ ಬಸದಿ, ಲಕ್ಷ್ಮೇಶ್ವರದ–ಆನೆಸಜ್ಜೆ ಬಸದಿ ಹೀಗೆ ಇನ್ನೂ ಮುಂತಾದ ಬಸದಿಗಳು ಇಂದಿಗೂ ಸುಸದೇತವಾಗಿದ್ದು ಜೈನ ಪರಂಪರೆಯ ಕೇಂದ್ರಗಳಾಗಿವೆ. ಈ ಭಾಗದಲ್ಲಿ ಕಂಡು ಬರುವ ಜೈನ ಬಸದಿ ಶಿಲ್ಪಗಳು ಅವಶೇಷ ಹಾಗೂ ಸ್ಥಳಗಳ ವಿವರಣೆಯನ್ನು ಶಾಸನಗಳ ಹಾಗೂ ಸಾಹಿತ್ಯ ಕೃತಿಗಳು ಪೂರ್ವದಲ್ಲಿ ರಚನೆಗೊಂಡಿರುವ ಸಂಶೋಧನಾ ಕೃತಿಗಳನ್ನು ಪೂರಕ ಆಕರ ಸಾಮಗ್ರಿಗಳನ್ನಾಗಿ ಇಟ್ಟುಕೊಂಡು ಕ್ಷೇತ್ರ ಅಧ್ಯಯನದ ಮೂಲಕ ಅಧ್ಯಯನವನ್ನು ಕೈಗೊಳ್ಳಲಾಗಿದೆ.

## ೫.೨. ಜೈನ ಬಸದಿಗಳು :

ಜಿನಗೃಹ, ಜಿನವಾಸ, ಜಿನಚೈತ್ಯ, ಚೈತ್ಯಗೃಹ, ಬಸದಿ ಎಂದು ಕರೆಸಿಕೊಳ್ಳುವ ಈ ಬಸದಿಗಳು ಜೈನ ಪರಿಕಲ್ಪನೆಯಲ್ಲಿ ಇವುಗಳಿಗೆ ಮಹತ್ವವಿದೆ. ಜಿನ ಎಂದರೆ ಅರ್ಹಂತ, ಕರ್ಮವೆಂಬ ಶತ್ರುಗಳನ್ನು ಗೆದ್ದವನು. ಕ್ರೋಧ ಮಾನ, ಮಾಯ, ಲೋಭ ಈ ಕಷಾಯಗಳನ್ನು ಗೆದ್ದ ಕಾರಣ ಅರ್ಹತ ಭಗವಾನರು ಜಿನರೆನಿಸುತ್ತಾರೆ. ಇವರಲ್ಲಿ ೨ ಪ್ರಕಾರ "ಯಾರು ಘತಿ–ಅಘುತಿ ಕರ್ಮಗಳನ್ನು ಕ್ಷೇಯಸಿದ್ದರೂ ಅವರು ಸಕಲ ಜಿನರು ಉದಾ : ಅರ್ಹಂತ ಸಿದ್ಧರು – ಆಚಾರ್ಯ, ಉಪಾದ್ಯಯ ಮತ್ತು ಸಾಧು ಇವರು ತೀವ್ರ ಕಷಾಯ ಇಂದ್ರೀಯ ಮತ್ತು ಮೋಹವನ್ನು ಜಯಿಸುವುದರಿಂದ ದೇಶಜಿನರು" ಜಿನ ಪಂಚಪರಮೇಷ್ಠಿಗಳು[೩] ಅರಹಂತ, ಸಿದ್ಧ ಆಚಾರ್ಯ, ಉಪಾದ್ಯಾಯ ಸಾಧು ನಿಜಧರ್ಮ, ಜಿನಾಗಮ ಜಿನಚೈತ್ರ, ಜಿನಚೈತ್ಯಾಲಯ ಎಂಬವನ್ನು ಜೈನರು ನವದೇವತೆಗಳು[೪] ಎಂಬುದಾಗಿ ಭಾವಿಸುತ್ತಾರೆ. ಜೈನ ಧರ್ಮಿಯರಲ್ಲಿ ಇವುಗಳಿಗೆ ವಿಶಿಷ್ಟ ಸ್ಥಾನಮಾನಗಳಿವೆ. ಈ ಕಲ್ಪನೆಯ ಪ್ರತಿಫಲನವನ್ನು ಜೈನ ವಾಸ್ತು–ಶಿಲ್ಪಕಲೆಯಲ್ಲಿಯೂ ಗಮನಿಸಬಹುದು. ಇವುಗಳಿಗೆ ಪೂರಕವಾಗಿ ಮಂಗಲ ಚಿಹ್ನೆಗಳು, ಚೈತ್ಯವೃಕ್ಷ, ಮಹಾಪುರುಷ, ಶಾಸನದೇವತೆಗಳು ಯಕ್ಷ ನಂದೀಶ್ವರ ಚೌಮುಖ, ಚೌವೀಸ ತೀರ್ಥಂಕರ, ಮಾನಸ್ತಂಭ, ನಿಷಿಧಿ ಮುಂತಾದ ಕಲ್ಪನೆಗಳು ಬೆಳೆದಿವೆ. ಇವುಗಳಲ್ಲಿ ಪ್ರತಿಯೊಂದು ಒಂದಿಲ್ಲೊಂದು ರೀತಿಯಲ್ಲಿ ಅವರ ಕಲೆಯ ಆಗರಗಳಾದ ಬಸದಿಗಳಲ್ಲಿ ಕಾಣದೊರೆಯುತ್ತವೆ.

ಜೈನ ಪರಿಕಲ್ಪನೆಯ ನವದೇವತೆಗಳಲ್ಲಿ ಜಿನಚೈತ್ಯ ಮತ್ತು ಚೈತ್ಯಾಲಯ ಎಂಬುವುಗಳಿಗೆ ಕಲಾ ಇತಿಹಾಸ ದೃಷ್ಟಿಯಿಂದ ಬಹಳ ಮಹತ್ವವಿದೆ. ಜಿನ ಚೈತನ್ಯವೆಂಬುದು ತೀರ್ಥಂಕರನ ಮೂರ್ತಿ ಆದರೆ ಮೂಲತಃ ಇದು ಜೈನ ಸ್ತೂಪಕ್ಕೆ ಅನ್ವಯಿಸುವ ಪದವೆಂದು ತೋರುತ್ತದೆ. "ಚೈತ್ಯವು" ಸ್ತೂಪಕ್ಕೆ ಪರ್ಯಾಯ ಪದ ಚೈತ್ಯ ಎಂದರೆ

---

೩. ಪಂಚ ಪರಮೇಷ್ಠಿಗಳು : ೧) ಅರಹಂತರು ೨) ಸಿದ್ಧರು ೩) ಆಚಾರ್ಯರು ೪) ಉಪಾಧ್ಯಾಯರು ೫) ಸಾಧುಗಳು

೪. ನವದೇವತೆಗಳು : ೧) ಅರಹಂತ ೨) ಸಿದ್ಧ ೩) ಆಚಾರ್ಯ ೪) ಉಪಾಧ್ಯಾಯ ೫) ಸಾಧು ೬) ನಿಜಧರ್ಮ ೭) ಜಿನಾಗಮ ೮) ಜಿನಚೈತ್ರ ೯) ಜಿನ ಚೈತ್ಯಲಯ.

"ಪೂಜನೀಯ ಸ್ಥಾನ, ಪೂಜನೀಯ ವಸ್ತು ಎಂಬರ್ಥದಲ್ಲಿ ಅದನ್ನು ಬಳಸಿರುವುದು ಸಾಮಾನ್ಯ. ಕ್ರಮೇಣ ಅರ್ಹತ್ಪರಮೇಷ್ಠಿಯ ತೀರ್ಥಂಕರನ ವೀತರಾಗ ಹಾಗೂ ಪರಮಶಾಂತವಾದ ಮೂರ್ತಿಗೆ 'ಜಿನಚೈತ್ಯ'ವೆಂದು ಹೆಸರಾಯಿತು. ಜಿನಚೈತ್ಯವನ್ನು ಒಳಗೊಂಡಿರುವ ಆಲಯ ಚೈತ್ಯಾಲಯವೆನಿಸಿತು. ಇಂತಹ ಚೈತ್ಯಾಲಯಗಳು ಸಹ ಸಮವಸರಣ ಮಂಟಪದ ವಾಸ್ತುರೂಪದ ಸಂಕ್ಷಿಪ್ತ ಪ್ರತಿನಿಧಿಗಳೆಂಬುದು ಪ್ರಾಚೀನ ಚೈತ್ಯಾಲಯಗಳಿರುವ ಸ್ಥಾನದಿಂದ ಸೂಚಿತವಾಗುತ್ತದೆ.

ಚೈತ್ಯಾಲಯಗಳು ಸಮವಸರಣ ಮಂಟಪ ಕಲ್ಪನೆ ಹಿನ್ನೆಲೆಯಲ್ಲಿ ಮಾಡಿದ್ದರೂ ಬಾಹ್ಯ ವಿವರಗಳಲ್ಲಿ ಹಿಂದೂ ದೇವಾಲಯಗಳನ್ನೇ ಹೋಲುತ್ತವೆ. ಜೈನಮಂದಿರಗಳು ಚೈತ್ಯಾಲಯ ವಾಸ್ತುವಿನ ಸುಂದರ ಸೃಷ್ಟಿಗಳಾಗಿ ಪ್ರಸಿದ್ಧವಾಗಿವೆ. ಕರ್ನಾಟಕದಲ್ಲಿ ಶ್ರವಣಬೆಳಗೊಳ, ಹುಂಚ, ಹಳ್ಳೂರು, ಮುಳಗುಂದ, ಲಕ್ಕುಂಡಿ, ಲಕ್ಷ್ಮೇಶ್ವರ, ಹೂಲಿ, ಬೆಳಗಾವಿ ಹಳೆಬೀಡು, ಜಿನನಾಥಪುರ, ಹಂಪೆ, ಮೂಡಬಿದಿರೆ, ಕಾರ್ಕಳ ಮುಂತಾದಕಡೆ ರಾಷ್ಟ್ರಕೂಟರ ಕಾಲದಿಂದೀಚೆ ನಿರ್ಮಿತವಾದ ಸುಂದರ ಚೈತ್ಯಾಲಯಗಳಿವೆ. ಇವುಗಳಲ್ಲಿ ಐಹೊಳೆಯ ಮೊಗುಟಿ ಬಸದಿ (ಬದಾಮಿ ಚಾಲುಕ್ಯರ ಕಾಲ) ಹಳ್ಳೂರಿನ ಬಸದಿ (ರಾಷ್ಟ್ರಕೂಟರ ಕಾಲ) ಪಟ್ಟದಕಲ್ಲಿನ ಜೈನ ನಾರಾಯಣ ಗುಡಿ ರಾಷ್ಟ್ರಕೂಟ ಶ್ರವಣಬೆಳಗೊಳದ ಚಾವುಮಡರಾಯ ಬಸದಿ (ಗಂಗರ ನಿರ್ಮಿತಿ) ಲಕ್ಕುಂಡಿಯ ಬ್ರಹ್ಮ ಜಿನಾಲಯ (ಅತ್ತಿಮಬ್ಬೆಯಿಂದ ನಿರ್ಮಿತ) ಮುಂತಾದವುಗಳಲ್ಲಿ ಗರ್ಭಗೃಹದ ಮೇಲ್ಗಡೆ ಇನ್ನೊಂದು ಗರ್ಭಗೃಹವಿರುವದು ವಿಶೇಷ ನಕ್ಷತ್ರಾಕಾರದ ತಲ ವಿನ್ಯಾಸವನ್ನು ವಿಮಾನಕ್ಕೆ ಮೊದಲು ಅಳವಡಿಸಿದವರು ಜೈನ ಧರ್ಮದವರೆಂದು ತೋರುತ್ತದೆ. ಕೊಣ್ಣೂರಿನ[೫] ಪರಮೇಶ್ವರ ದೇವಾಲಯ ರಾಷ್ಟ್ರಕೂಟರ ಅಂತ್ಯಕಾಲದಲ್ಲಿ ನಿರ್ಮಾಣವಾಗಿರುವ ಮಹಾಪದ್ಮ ಹದಿನಾರು ಕೋಣಗಳ ನಕ್ಷತ್ರಾಕಾರ ರೀತಿಯ ವಿನ್ಯಾಸವಿರುವ ಚೈತ್ಯಾಲಯವಾಗಿದೆ. ಈ ವಿನ್ಯಾಸ ಕಲ್ಯಾಣದ ಚಾಲುಕ್ಯರ ಕಾಲದಲ್ಲಿ ಕ್ರಮೇಣ ಪ್ರಸಿದ್ಧವಾಗತೊಡಗಿ ಹೊಯ್ಸಳ ವಾಸ್ತು ರಚನೆಯಲ್ಲಿ ಪರಮೋನ್ನತಿ ಕಂಡಿತು. ವಿಜಯನಗರ, ವಿಜಯನಗರೋತ್ತರ ಕಾಲದಲ್ಲಿ ಜೈನಧರ್ಮ ಪಶ್ಚಿಮಘಟ್ಟ ಪ್ರದೇಶದಲ್ಲಿ ಬೇರೇರಿ, ಸೋಂದಾ, ನಗಿರೆ, ಹಾಡುವಳ್ಳಿ, ಕಾರ್ಕಳ, ಮೂಡುಬಿದಿರೆ ಮುಂತಾದ ಸ್ಥಳಗಳಿಂದ ಆಳಿದ ಪ್ರಾದೇಶಿಕ ಅರಸು ಮನೆತನಗಳ ಪ್ರೋತ್ಸಾಹದಡಿಯಲ್ಲಿ ಅನೇಕ ವಾಸ್ತು ನಿರ್ಮಿತಿಗಳಿಗೆ ಹಾದಿಮಾಡಿತು. ಗೇರುಸೊಪ್ಪೆಯ ಚತುರ್ಮುಖ ಬಸದಿ, ಕಾರ್ಕಳದ ಬಸದಿ, ಮೂಡುಬಿದಿರೆಯ ಸಾವಿರ ಕಂಬದ ಬಸದಿ ಮುಂತಾದವು ಇಲ್ಲಿ ಉಲ್ಲೇಖನೀಯವಾಗಿವೆ.

ಚೈತ್ಯಾಲಯಗಳು ಉತ್ತರ ದಿಕ್ಕಿಗೆ ಮುಖ ಮಾಡಿಲ್ಲ ಪೂರ್ವಾಭಿಮುಖವಾಗಿರುವುದೇ ಸಾಮಾನ್ಯ. ಗುಹಾವಾಸ್ತು ನಿರ್ಮಾಣಕ್ಕೂ ಜೈನರು ಕೊಡುಗೆ ನೀಡಿದ್ದಾರೆ. ಬದಾಮಿ ಮತ್ತು ಐಹೊಳೆಯ ಜೈನ ಗುಹೆಗಳು ಚಾಲುಕ್ಯರ ಕಾಲದಲ್ಲಿ ರಚಿತವಾಗಿವೆ.

ಜೈನ ಜೈತ್ಯಾಲಯಗಳ ಎದುರು ಮಾನಸ್ತಂಭವನ್ನು ನಿಲ್ಲಿಸುವುದು ಪರಂಪರೆ. ಚೈತ್ಯಾಲಯದ ಮುಂದಣ

---

೫. ಕ್ರಿ.ಶ. ೮೬೦ರ ಕೊಣ್ಣೂರಿನ ಶಾಸನದಲ್ಲಿ ಉಲ್ಲೇಖಿಸಲಾಗಿದೆ.

ಪರಿಸರದಲ್ಲಿ ಇವು ತಮ್ಮ ಬೃಹದ್ಗಾತ್ರ ಎತ್ತರಗಳಿಂದ ಆಕರ್ಷಿಸುತ್ತವೆ. ಸಮವಸರಣ ಮಂಟಪದ ಪ್ರತೀಕವಾಗಿರುವ ಚೈತ್ಯಾಲಯವನ್ನು ಪ್ರವೇಶಿಸುವ ಮುನ್ನ ಭಕ್ತನ ಗರ್ವ ಸೊಕ್ಕುಗಳನ್ನು ಮುರಿದು ಹದಗೊಳಿಸುವದರಿಂದ ಮಾನಸ್ತಂಭವೆಂದು ಈ ಕಂಬಕ್ಕೆ ಹೆಸರು ಏಕಶಿಲಾ ಸ್ತಂಬವನ್ನು ವೇದಿಕೆಯ ಮೇಲೆ ಸ್ಥಾಪಿಸಲಾಗಿರುತ್ತದೆ. ತುದಿಯಲ್ಲಿ ಗುಡಿಯಂತೆ ಕಾಣುವ ರಚನೆಯದ್ದು ಅದರೊಳಗೆ ಜಿನಯಕ್ಷ ಕ್ಷೇತ್ರಪಾಲ ವಿಗ್ರಹವಿರುತ್ತದೆ. ಬಹುಷಃ ಕುಷಾಣರ ಕಾಲದಿಂದಲೂ ಮಾನಸ್ತಂಭಗಳನ್ನು ನಿಲ್ಲಿಸುವ ಪರಂಪರೆಯಿತ್ತು.

ಶ್ವೇತಾಂಬರ ಮತ್ತು ದಿಗಂಬರ ಎಂಬ ಎರಡು ಪ್ರಮುಖ ಸಂಪ್ರದಾಯಗಳು ಜೈನರಲ್ಲಿವೆ. ಇವರ ನಡುವೆ ಕೆಲವು ವೈಚಾರಿಕ ಬಂಧಗಳಿವೆ. ದಿಗಂಬರರು ಪೂಜಿಸುವ ಜಿನವಿಗ್ರಹಗಳು ನಗ್ನವಾಗಿರುತ್ತವೆ. ಶ್ವೇತಾಂಬರರು ಜಿನವಿಗ್ರಹಗಳಿಗೆ ಬಟ್ಟೆ ತೊಡಿಸುತ್ತಾರೆ. ಕುಳಿತ ಜಿನ ವಿಗ್ರಹಗಳು ಜೈನರ ಪ್ರಥಮೋಪದೇಶ ಕಲ್ಪನೆಯ ಮೂರ್ತಿರೂಪಗಳು.

ಜೈನರ ಪ್ರಥಮೋಪದೇಶ ಪರಿಕಲ್ಪನೆಗೆ ಲಕ್ಷ್ಮೇಶ್ವರದ ಜಿನಬಿಂಬವು ಸಾಕ್ಷಿಯಾಗಿದೆ. ಹೀಗೆ ಗದಗ ಪರಿಸರದಲ್ಲಿ ಮೂಲಸಂಘ, ಗಣ, ಗಚ್ಛ, ಯಾಪನೀಯ ಪಂಥಗಳ ಪ್ರಭಾವದಲ್ಲಿ ಜೈನ ಸ್ಮಾರಕಗಳನ್ನು ನಿರ್ಮಿಸಿ ಜೈನ ಪರಂಪರೆಯನ್ನು ಪ್ರಾಚೀನ ಕಾಲದಲ್ಲಿ ಬೆಳಗಿಸಿದ್ದಾರೆ. ಆಧುನಿಕ ಕಾಲದಲ್ಲೂ ಗದಗ, ಹರ್ತಿ, ಲಕ್ಷ್ಮೇಶ್ವರಗಳಲ್ಲಿ ಜೈನ ಧರ್ಮಿಯರು ಆಧುನಿಕ ಮಾದರಿಯಲ್ಲಿ ಬಸದಿಗಳನ್ನು ನಿರ್ಮಿಸಿದ್ದಾರೆ.

ಅಖಂಡ ಧಾರವಾಡ ಜಿಲ್ಲೆಯಿಂದ ೧೯೯೭ರಲ್ಲಿ ಗದಗ ನೂತನ ಜಿಲ್ಲೆಯಾಗಿ ಉದಯಿಸಿತು. ಪ್ರಾಚೀನ ಕಾಲದಿಂದಲೂ ಕಲೆ-ಸಾಹಿತ್ಯ, ಸಂಸ್ಕೃತಿ, ಆಧ್ಯಾತ್ಮಿಕ ಔದ್ಯೋಗಿಕ ಕ್ಷೇತ್ರಗಳಲ್ಲಿ ತನ್ನದೇ ಆದ ವಿಶಿಷ್ಠ ಸ್ಥಾನ ಪಡೆದುಕೊಂಡಿರುವ ಈ ಜಿಲ್ಲೆ ಗದಗ, ನರಗುಂದ, ಶಿರಹಟ್ಟಿ, ಮುಂಡರಗಿ, ರೋಣ ಐದು ತಾಲೂಕುಗಳನ್ನು ಒಳಗೊಂಡಿದೆ. ಪ್ರಾಚೀನ ಗದಗ ಪರಿಸರ ಬೆಳ್ವೊಲ-೩೦೦, ಪುಲಿಗೇರೆ-೩೦೦ ಇನ್ನಿತರ ಉಪವಿಭಾಗಗಳಲ್ಲಿ ಹರಡಿತ್ತು. ಅಂದಿನ ಪರಿಸರದಲ್ಲಿ ಬರುವ ಕೆಲವು ಜೈನ ಪರಂಪರೆಯ ಪ್ರದೇಶಗಳನ್ನು ಅಧ್ಯಯನ ವ್ಯಾಪ್ತಿಗೆ ಒಳಪಡಿಸಿ ಅಧ್ಯಯನ ಕೈಗೊಳ್ಳಲಾಗಿದೆ. ಗದಗ ಜಿಲ್ಲೆಯ ಐದು ತಾಲೂಕಿನಲ್ಲಿ ಕಂಡು ಬಂದಿರುವ ಬಸದಿಗಳನ್ನು ತಾಲೂಕವಾರು ವಿವರಣೆಗೆ ಒಳಪಡಿಸಲಾಗಿದೆ. ನಂತರ ಈ ಪರಿಸರದ ಸುತ್ತಮುತ್ತಲಿನ ಜೈನ ಕೇಂದ್ರಗಳ ಬಗ್ಗೆ ವಿವರಣೆಯನ್ನು ಕೈಗೊಳ್ಳಲಾಗಿದೆ.

ಗದಗ ತಾಲೂಕು ೬೧ ಹಳ್ಳಿಗಳಿಂದ ಕೂಡಿದೆ. ಈಗಾಗಲೇ ೨೧೩ ಶಾಸನಗಳು ಪ್ರಕಟಣೆಗೊಂಡಿದ್ದು ಇನ್ನೂ ೧೭ ಶಾಸನಗಳು ಪ್ರಕಟಣೆಗೊಳ್ಳಬೇಕು. ಗದಗ ತಾಲೂಕು ಒಂದು ಜೈನಧರ್ಮ ಯಾಪನೀಯ ಪಂಥದ ಪ್ರಮುಖ ಕೇಂದ್ರವಾಗಿತ್ತು. ಈ ಪ್ರದೇಶದಲ್ಲಿ ಆಳ್ವಿಕೆ ನಡೆಸಿದ ಅರಸುಮನೆತನಗಳು ದಾನ-ದತ್ತಿಗಳನ್ನು ನೀಡಿ ಬಸದಿಗಳ ನಿರ್ಮಾಣ ಕಾರ್ಯವನ್ನು ಕೈಗೊಂಡಿದ್ದಾರೆ. ಗದಗ, ಲಕ್ಕುಂಡಿ, ಮುಳಗುಂದ, ಸೊರಟೂರು, ಹೊಸೂರು, ಹರ್ತಿ, ಚಿಂಚಲಿ ಇವು ಈ ತಾಲೂಕಿನ ಪ್ರಮುಖ ಜೈನ ಪರಂಪರೆಯ ಪ್ರಾಚೀನ ಕೇಂದ್ರಗಳೆನಿಸಿದ್ದವು.

## ೧. ಧೋರ ಜಿನಾಲಯ – ಅಸುಂಡಿ :

ಈಗೀನ ಗದಗ ಪ್ರದೇಶದ ನೈರುತ್ಯಕ್ಕೆ ೧೦ಕಿ.ಮೀ. ದೂರದಲ್ಲಿರುವ ಅಸುಂಡಿ ಗ್ರಾಮವು ರಾಷ್ಟ್ರಕೂಟ ಅರಸರ ಆಳ್ವಿಕೆಯ ಕಾಲದಲ್ಲಿ (೭೫೩ರಿಂದ ೯೭೩) ಇದೊಂದು ಜೈನ ಧರ್ಮದ ಪ್ರಮುಖ ಕೇಂದ್ರವಾಗಿತ್ತೆಂದು ಇಲ್ಲಿರುವ ಅಳುದು ಉಳಿದ ಅವಶೇಷಗಳಡಿ ಯಾವುದೇ ನವೀನತೆ ಕಾಣದೆ ಪಾಳು ಬಿದ್ದಿರುವ ಜೈನ ಬಸದಿಯೇ ಮೂಕ ಸಾಕ್ಷಿಯಾಗಿದೆ. ಇಂದಿನ ಅಸುಂಡಿಯ ಉಡಚಮ್ಮನ ಗುಡಿ ಹಿಂದೆ ಕ್ರಿ.ಶ. ೯೨೫ ರಾಷ್ಟ್ರಕೂಟರ ಅರಸರ ಕಾಲದ ಶಾಸನದಲ್ಲಿ ಉಲ್ಲೇಖಿಸಿದಂತೆ ಧೋರ ಜಿನಾಲಯದ ಮುಖ್ಯಸ್ಥನಾಗಿದ್ದ ಚಂದ್ರಪ್ರಭ ಭಟ್ಟನು ಪಸಲುಮಡಿಯನ್ನು ಆಳುವಾಗ 'ನಾಗಯ್ಯ' ಎಂಬುವನು ಈ ಬಸದಿಗೆ ಭೂದಾನ ಮಾಡಿದ ಕುರಿತು ಪ್ರಸ್ತಾಪಿಸಲಾಗಿದೆ. ಆದರೆ ಇಂದು ಈ ಗ್ರಾಮದಲ್ಲಿ ಯಾವುದೇ ಬಸದಿಯ ಕುರುಹುಗಳಿಲ್ಲ ಕೇವಲ ಶಾಸನಗಳಲ್ಲಿ ಮಾತ್ರ ಇತ್ತು[೬] ಈಗಿಲ್ಲ.

## ೨. ಛಾಯಾ ಚಂದ್ರನಾಥ ಹಾಗೂ ನಾಗರ ಶಿಲ್ಪಗಳು – ಚಿಂಚಲಿ :

ಗದುಗಿನಿಂದ ೨೪ ಕಿ.ಮೀ. ನೈರುತ್ಯ ದಿಕ್ಕಿನಲ್ಲಿರುವ ಚಿಂಚಲಿ ಲಕ್ಷ್ಮೇಶ್ವರದ ಉತ್ತರಕ್ಕೆ ೨೫ಕಿ.ಮೀ. ಅಂತರದಲ್ಲಿದೆ. ಪ್ರಾಚೀನ ಕಾಲದಲ್ಲಿ ಬೆಳ್ವೊಲ-೩೦೦ರ ಉಪವಿಭಾಗಗಳಲ್ಲಿ ಪ್ರಮುಖ ಭಾಗವಾಗಿದ್ದು ಚಿಂಚಲಿ-೫೦, ಪ್ರದೇಶವು ಉಪವಿಭಾಗದ ಕೇಂದ್ರಸ್ಥಳವಾಗಿ ಜೈನ ಧರ್ಮ ಪರಂಪರೆಯ ನೆಲೆವೀಡಾಗಿ ಪ್ರಸಿದ್ಧಿಯನ್ನು ಪಡೆದುಕೊಂಡಿತ್ತು. ಮುಳಗುಂದದಿಂದ ೬ ಕಿ.ಮೀ. ಪಶ್ಚಿಮಕ್ಕಿರುವ ಚಿಂಚಲಿ ಗ್ರಾಮದಲ್ಲಿ ಗುಡ್ಡದ ಬಂಡೆಯಲ್ಲಿ ಚಂದ್ರನಾಥನ ಛಾಯಯು ಬೆಳಗಿನ ಸೂರ್ಯನ ಕಿರಣಗಳಲ್ಲಿ ಮೂಡುತ್ತದೆ ಎಂಬ ನಂಬುಗೆ ಪ್ರಾಚೀನ ಕಾಲದಿಂದ ಇಂದಿನವರೆಗೂ ಇದೆ. ಪ್ರತಿ ವರ್ಷದ ಯುಗಾದಿ ಪಾಢ್ಯದಂದು ಜೈನಮುನಿಗಳು ದಿಗಂಬರ ಹಾಗೂ ಶ್ವೇತಾಂಬರ ಪರಂಪರೆಯವರು ಬಂದು ಪೂಜಾ ವಿಧಾನಗಳನ್ನು ಮಾಡುತ್ತಾರೆ. ಮತ್ತು ಸುತ್ತಮುತ್ತಲಿನ ಜೈನ ಧರ್ಮೀಯರು ಬಂದು ಪೂಜೆ ಸಲ್ಲಿಸುತ್ತಾರೆ. ಮುಳಗುಂದವು ಜೈನ ಧರ್ಮದ ಪ್ರಮುಖ ಕೇಂದ್ರವಾಗಿರುವ ಹಿನ್ನೆಲೆಯಲ್ಲಿ ಅಲ್ಲಿದ್ದ ಜೈನ ಮುನಿಗಳು ಈ ಗುಡ್ಡದಲ್ಲಿ ನೆಲೆನಿಂತು ತಪ್ಪಸ್ಸನ್ನು ಮಾಡಿರುವ ಉಲ್ಲೇಖವಿದೆ. ಆದರೆ ಇಂದು ಇಲ್ಲಿ ಗಣಿಗಾರಿಕೆ ನಡೆಸುತ್ತಿರುವುದುರಿಂದ ಈ ಪ್ರದೇಶವು ಹಾಳಾಗತೊಡಗಿದೆ. ಸಂಬಂಧಪಟ್ಟ ಇಲಾಖೆಯವರು ಈ ಜೈನ ಪರಂಪರೆಯ ಕೇಂದ್ರದ ಅಭಿವೃದ್ಧಿ ಕಡೆ ಗಮನ ಹರಿಸಿದರೆ ಇದೊಂದು ಪ್ರಸಿದ್ಧ ಪ್ರವಾಸಿ ತಾಣವಾಗಿ ಮಾರ್ಪಡುವುದರಲ್ಲಿ ಸಂಶಯವಿಲ್ಲ.

ಉಪವಿಭಾಗದ ಕೇಂದ್ರ ಸ್ಥಳವಾಗಿದ್ದ ಚಿಂಚಲಿಯ ಶ್ರೀ ಮೈಲಾರಲಿಂಗೇಶ್ವರ ದೇವಸ್ಥಾನದ ಪಕ್ಕದಲ್ಲಿರುವ ಅರಳಿ ಮರದ ಕೆಳಗೆ ನಾಗರಶಿಲ್ಪಗಳಿವೆ. ಹಾಗೂ ಭಗ್ನಗೊಂಡಿರುವ ಮೂರ್ತಿ ಶಿಲ್ಪಗಳಿವೆ. ಇವುಗಳ ಸಂಶೋಧನೆ ನಡೆದರೆ ಸತ್ಯ ಹೊರ ಬರುತ್ತದೆ. ನಾಗರ ಶಿಲ್ಪಗಳು ಜೈನ ಪರಂಪರೆಗೆ ಸಂಬಂಧ ಪಡುವುದರಿಂದ ಪಾರ್ಶ್ವನಾಥನ ಪ್ರಭಾವ ಈ ಭಾಗದಲ್ಲಿತ್ತು ಎಂಬುದನ್ನು ಮೇಲ್ನೋಟಕ್ಕೆ ತಿಳಿಯಬಹುದಾಗಿದೆ.

---

೬. ಕ್ರಿ.ಶ. ೯೨೫ರ ಅಸುಂಡಿ ಶಾಸನದಲ್ಲಿ ಉಲ್ಲೇಖಿಸಲಾಗಿದೆ.

ಹಾಗಾಗಿ ಚಿಂಚಲಿ-೪೦ ನಾಡಿಗೆ ಸಂಬಂಧಪಟ್ಟ ೪೪ ಹಳ್ಳಿಗಳ ಸಂಶೋಧನೆಯಾಗಿದೆ. ಇನ್ನೂ ೬ ಹಳ್ಳಿಗಳ ಸಂಶೋಧನೆಯಾಗಬೇಕಿದೆ. ಆದ್ದರಿಂದ ಆ ಎಲ್ಲಾ ಸ್ಥಳಗಳ ಸಂಶೋಧನೆಯಾದರೆ ಈ ನಾಡಿನಲ್ಲಿ ಜೈನ ಧರ್ಮದ ಪ್ರಭಾವ ಇನ್ನಷ್ಟು ಬೆಳಕಿಗೆ ಬರುತ್ತದೆ. ಆದ್ದರಿಂದ ಸುತ್ತಮುತ್ತಲಿನ ಜೈನ ಪರಿಸರದ ಪ್ರಭಾವದಿಂದ ಚಿಂಚಲಿಯಲ್ಲಿಯೂ ಜೈನ ಧರ್ಮದ ಪ್ರಭಾವವಿತ್ತು ಎಂಬುದನ್ನು ಮಾತ್ರ ಹೇಳಬಹುದು. ಇಲ್ಲಿರುವ ವೀರಭದ್ರ, ತೀರ್ಥಂಕರರ, ಪಾದಗಟ್ಟಿಗಳ ರೇಖಾಚಿತ್ರಗಳು ಇರುವುದರಿಂದ ಚಾರಿತ್ರಿಕವಾದ ಬೆಳಕನ್ನು ಚೆಲ್ಲುವುದರಿಂದ ಜೈನ ಧರ್ಮದ ಪ್ರಭಾವವನ್ನು ಅರಿಯಬಹುದಾಗಿದೆ. ಈ ನಾಡಿನಲ್ಲಿ ನಾನು ಕ್ಷೇತ್ರ ಕಾರ್ಯಕೈಗೊಂಡ ಸಂದರ್ಭದಲ್ಲಿ ಯಾವುದೇ ರೀತಿಯ ಬಸದಿಗಳು ಕಂಡುಬಂದಿಲ್ಲ. ಹಾಗೂ ಶಾಸನಗಳಲ್ಲಿ ಉಲ್ಲೇಖವಿಲ್ಲ. ಆದ್ದರಿಂದ ಈಗಿರುವ ಜೈನ ಸ್ಮಾರಕಗಳನ್ನು ಸಂರಕ್ಷಣೆ ಮಾಡುವುದು ನಮ್ಮೆಲ್ಲರ ಹೊಣೆಯಾಗಿದೆ.

**೩. ಚಂದ್ರನಾಥ ಬಸದಿ – ಮುಳಗುಂದ :**

ಗದುಗಿನಿಂದ ದಕ್ಷಿಣಕ್ಕೆ ೧೮ ಕಿ.ಮೀ. ದೂರದಲ್ಲಿರುವ ಮುಳಗುಂದ ಗ್ರಾಮವು ಲಕ್ಷ್ಮೇಶ್ವರದಿಂದ ಉತ್ತರಕ್ಕೆ ೧೮ಕಿ.ಮೀ. ಅಂತರದಲ್ಲಿದೆ. ಜೈನ ಧರ್ಮದ ಯಾಪನೀಯ ಪಂಥದ ಪ್ರಮುಖ ಕೇಂದ್ರವಾಗಿದ್ದ ಮುಳಗುಂದವು ಬೆಳ್ವೊಲ-೩೦೦ರ ಉಪವಿಭಾಗ ಮುಳಗುಂದ-೧೨ರ ಕೇಂದ್ರ ಸ್ಥಳವಾಗಿತ್ತು.[೭] ಚಂದ್ರಿಕಾವಟಿ ಜೈನ ಮುನಿಗಳ ಕೇಂದ್ರ ಸ್ಥಳವಾಗಿದ್ದು ಈ ಪ್ರದೇಶದಲ್ಲಿ ಜೈನ ಧರ್ಮದ ಪ್ರಭಾವವು ಬಹಳಷ್ಟು ಇತ್ತು ಎಂಬುದನ್ನು ಇಲ್ಲಿ ಉಪಲಬ್ಧವಾದ ಶಾಸನಗಳು ಉಲ್ಲೇಖಿಸುತ್ತವೆ.[೮] 'ಧರ್ಮಾಮೃತ'ದ ಕರ್ತೃ ನಯಸೇನನ ಜನ್ಮಭೂಮಿಯಿದ್ದು ಮೂಲತಃ ಜೈನನಾಗಿದ್ದ ನಯಸೇನ ತನ್ನ ಕೃತಿಯಲ್ಲಿ ಅಂದಿನ ಸಾಮಾಜಿಕ ವ್ಯವಸ್ಥೆಯನ್ನು ತನ್ನ ಕೃತಿಯಲ್ಲಿ ಚಿತ್ರಿಸಿದ್ದಾನೆ. ಮುಳಗುಂದದಲ್ಲಿ ತಿರ್ಥದ ಬಸದಿ, ಪಾರ್ಶ್ವನಾಥ ಬಸದಿ, ಚಂದ್ರನಾಥ ಬಸದಿಗಳ ನಿರ್ಮಾಣ ಹಾಗೂ ಇವುಗಳ ಅಭಿವೃದ್ಧಿ ಮತ್ತು ದಾನ ದತ್ತಿಗಳನ್ನು ನೀಡಿದ್ದರೆ ಅಂಶಗಳು ಶಾಸನಗಳಿಂದ ತಿಳಿದು ಬರುತ್ತದೆ.

ಚಂದ್ರನಾಥ ಬಸದಿ – ಇದು ಮುಳಗುಂದದ ಪ್ರಾಚೀನ ಬಸದಿಯಾಗಿದೆ. ಇದಕ್ಕೆ ಚಂದ್ರಪ್ರಭ ಜಿನಾಲಯವೆಂದೂ ಕರೆಯುತ್ತಾರೆ. ಇದನ್ನು ರಾಷ್ಟ್ರಕೂಟ ದೊರೆ೨ನೆಯ ಕೃಷ್ಣನ ಕಾಲದಲ್ಲಿ ಮುಳಗುಂದದ ವೈಶ್ಯನಾದ ಬೇಕಾರ್ಯನು ಕಟ್ಟಿಸಿದನು. ಈತನ ಮಗ ಅರಸಾರ್ಯನು ಇಲ್ಲಿ ಪೂಜಾ ಕಾರ್ಯಗಳನ್ನು ನೆರವೇರುವಂತೆ ವ್ಯವಸ್ಥೆ ಮಾಡಿದನು. ಈ ಬಸದಿಯ ಎದುರಿಗೆ ಪ್ರವೇಶ ಮಂಟಪವಿದೆ. ಆದರೆ ಎದುರಿಗಿರುವ ಚಂದ್ರನಾಥ ಬಸದಿ ಮಹಾದ್ವಾರ ಮುಖಮಂಟಪ, ಗರ್ಭ ಗೃಹಗಳನ್ನು ಒಳಗೊಂಡಿದೆ. ಮುಖ ಮಂಟಪದ ಪೂರ್ವ

---

೭. ಕ್ರಿ.ಶ. ೮೬೬ರ ನೀಲಗುಂದ ಶಾಸನ, ಕ್ರಿ.ಶ. ೬ನೇ ಶತಮಾನದ ಶಿರಗುಪ್ಪ ಶಾಸನದಿಂದ ಮುಳಗುಂದ ನಾಡಿನ ಪ್ರಸ್ತಾಪವಿದೆ.

೮. ಜೆ.ಎಫ್.ಫ್ಲೀಟರು ರಟ್ಟರ ಕಾಲದ ಶಾಸನಗಳು (೧೮೭೪-೧೯೦-೯೧)ರ ಶಾಸನದಲ್ಲಿ ಮುಳಗುಂದದ ವೈಶ್ಯ ಕುಲದವರು ಮೈಳಾಪತೀರ್ಥಕ್ಕೆ ದಾನ ದತ್ತಿಗಳನ್ನು ನೀಡಿದ ಉಲ್ಲೇಖಗಳಿವೆ. ಮೈಳಾಪತೀರ್ಥವು ಚಂದ್ರಕವಾಟಿ ಜೈನ ಮುನಿಗಳ ಮುಖ್ಯಸ್ಥಳವಾಗಿತ್ತು.

ದಿಕ್ಕಿನಲ್ಲಿರುವ ಗರ್ಭಗೃಹದ ಮುಂದೆ ಜೈನ ಮುನಿಗಳ ಸಲ್ಲೇಖನ ವ್ರತದ ಆಚರಣೆ ಹಾಗೂ ಬಸದಿಯ ಸಂಪತ್ತನ್ನು ಬಚ್ಚಿಡಲು ನೆಲಮಾಳಿಗೆಯ ಅಂತರಾಳದಲ್ಲಿ ಕೊಠಡಿಯೊಂದನ್ನು ರಚಿಸಿರುವುದು ಚಂದ್ರನಾಥ ಬಸದಿಯ ವಿಶೇಷವಾಗಿದೆ. ಒಟ್ಟಿನಲ್ಲಿ ಚಂದ್ರನಾಥ ಬಸದಿಯ ಹೊರಗೋಡೆಯಲ್ಲಿಯ ಸ್ತಂಭಗಳ ಅಲಂಕರಣ, ಆನೆಯ ಮೇಲೆ ಮಂಟಪವಿರುವ ಚಿತ್ರ, ಹೊಯ್ಸಳ ಶೈಲಿಯ ನಕ್ಷತ್ರಾಕಾರದ ವಿನ್ಯಾಸ, ಜೀವನ ಶ್ರದ್ಧೆ, ಮಾನವೀಯ ಮೌಲ್ಯ ಹಾಗೂ ಭವ್ಯ ಜೈನ ಸಂಸ್ಕೃತಿಯ ತಳಹದಿಯ ಮೇಲೆ ಈ ಜಿನಾಲಯವನ್ನು ಕಟ್ಟಿಸಿರುವುದರಿಂದ ಇದು ಬಹಳ ಮಹತ್ವದ್ದೆನಿಸಿದೆ.

ಜಿನಾಲಯದ ಗೋಡೆಯಲ್ಲಿರುವ ರಾಷ್ಟ್ರಕೂಟ ಅರಸ ೨ನೆಯ ಕೃಷ್ಣನ ಕ್ರಿ.ಶ. ೯೦೨-೦೩ರ ಶಾಸನವೊಂದು[೯] ಮುಳಗುಂದದ ವೈಶ್ಯನಾಗಿದ್ದ ಬೇಕಾರ್ಯ ಮತ್ತು ಈತನ ಮಗ ಅರಸಾರ್ಯನು ಮಾಡಿದ ಭೂದಾನವನ್ನು ಕುರಿತು ತಿಳಿಸುತ್ತದೆ. ಇಂದಿಗೂ ಸುಸ್ಥಿತಿಯಲ್ಲಿರುವ ಈ ಬಸದಿಯು ಇಲ್ಲಿನ ಜೈನ ಧರ್ಮಿಯರು ಸಾಮರಸ್ಯದಿಂದ ಈ ಬಸದಿಗೆ ಪೂಜೆ ಸಲ್ಲಿಸುತ್ತಾ ಬಂದಿದ್ದಾರೆ.

### ೪. ಪಾರ್ಶ್ವನಾಥ ಬಸದಿ-ಮುಳಗುಂದ :

ಮುಳಗುಂದದ ಗುಡ್ಡದ ಮೇಲಿರುವ ಪಾರ್ಶ್ವನಾಥ ಬಸದಿಯು ವಾಸ್ತುಶಿಲ್ಪದ ದೃಷ್ಟಿಯಿಂದ ಗಮನಾರ್ಹವಾದ ಮುಖಮಂಟಪ, ಸಭಾ ಮಂಟಪ ಹಾಗೂ ಗರ್ಭ ಗೃಹವನ್ನು ಹೊಂದಿದೆ. ಇಂತಹ ಐತಿಹಾಸಿಕ ಮಹತ್ವ ಪಡೆದಿದ್ದ ಬಸದಿಯನ್ನು ೧೬ನೆಯ ಶತಮಾನದಲ್ಲಿ ಮುಸ್ಲಿಂರು ಸುಟ್ಟರು. ಆ ಸಂದರ್ಭದಲ್ಲಿ ಬಸದಿಯಲ್ಲಿದ್ದ ಸಹ-ಸ್ರಕೀರ್ತಿ-ಮುನಿಗಳು ಮಡಿದರು ಎಂದು ಸ್ಥಳೀಯ ಶಾಸನದಿಂದ ತಿಳಿದು ಬರುತ್ತದೆ. ಹೀಗೆ ನಾಶವಾದ ಬಸದಿಯನ್ನು ಕುಲಕರ್ಣಿ ನಾಗಧೂಪನ ಧರ್ಮಪತ್ನಿ ಬನದಾಂಬಿಕೆ ಎಂಬುವಳು ಕ್ರಿ.ಶ. ೧೬೭೫ರಲ್ಲಿ ಜೀರ್ಣೋದ್ದಾರ ಮಾಡಿಸಿದಳೆಂದು ಶಾಸನದ ನಿರೂಪಣೆಯಿಂದ ತಿಳಿಯುತ್ತದೆ.[೧೦]

ಚಂದ್ರಪ್ರಭ ಚಂದ್ರನಾಥ ಬಸದಿಯ ಕಂಬದಲ್ಲಿನ ಶಾಸನವು ಮುಸ್ಲಿಂರ ದಾಳಿಯಿಂದ ಭಗ್ನಗೊಂಡ ಆದಿನಾಥನ ವಿಗ್ರಹವು ಇದೆ ಬನದಾಂಬಿಕೆಯು ಪುನಃ ಸ್ಥಾಪನೆ ಮಾಡಿದ ವಿಷಯವನ್ನು ಶಾಸನ ಉಲ್ಲೇಖಿಸಿದೆ. ಇನ್ನೂ ತೀರ್ಥದ ಬಸದಿಯ ಉಲ್ಲೇಖವು ಶಾಸನದಲ್ಲಿ ಇರುವುದರಿಂದ ಇದು ತೀರಾ ಜೀರ್ಣಾವಸ್ಥೆಯಲ್ಲಿರುವುದರಿಂದ ಅಭಿವೃದ್ಧಿ ಕಾರ್ಯ ಆಗಬೇಕಿದೆ. ಹೀಗೆ ಮುಳಗುಂದ ನಾಡಿನ ಪ್ರದೇಶಗಳಾದ ಹರ್ತಿ, ಕುರ್ತಕೋಟಿ, ಹೊಸೂರುಗಳಲ್ಲಿ ಜೈನ ಧರ್ಮದ ಸ್ಮಾರಕಗಳು ಸಿಗುತ್ತವೆ.

ಈ ನಾಡಿನಲ್ಲಿ ಅಪಾರ ಸಂಖ್ಯೆಯಲ್ಲಿ ಮೂರ್ತಿಶಿಲ್ಪಗಳು ದೊರೆತಿವೆ. ಕ್ರಿ.ಶ. ೯೦೨ರ ಶಿಲ್ಪಶಾಸ್ತ್ರದ ಪ್ರಕಾರ ಕೆತ್ತಿದ

---

೯. ಕ್ರಿ.ಶ. ೯೦೨ರ ಮುಳಗುಂದ ಶಾಸನ, (ಜೆ. ಎಫ್. ಫ್ಲೀಟರ-೧೯೧).

೧೦. ಕ್ರಿ.ಶ. ೧೬೭೫ರ ಮುಳಗುಂದ ಶಾಸನ.

ಅಪರೂಪದ ಪಾರ್ಶ್ವನಾಥ ತೀರ್ಥಂಕರ ಮೂರ್ತಿ ಶಿಲ್ಪವೊಂದು ಇತ್ತೀಚೆಗೆ ಮುಳಗುಂದದಲ್ಲಿ ಪತ್ತೆಯಾಗಿದೆ.[೧೧] ಈ ಶಿಲ್ಪದ ಹಿಂಬದಿಗೆ ಒಂದು ಸಂಸ್ಕೃತ ಶಾಸನವಿರುವುದು ಇದರ ವಿಶೇಷತೆ, ಕಮಡೋಪಸರ್ಗರಲ್ಲಿ ಕುಳಿತ ಪಾರ್ಶ್ವನಾಥ ತೀರ್ಥಂಕರನ ತಪಸ್ಸಿಗೆ ಉಂಟಾದ ನಾನಾ ಉಪಸರ್ಗಗಳನ್ನು ಶಿಲ್ಪಿಯು ಬಹಳ ಚಾಕಚಕ್ಯತೆಯಿಂದ ಕಟೆದಿರುವುದು ಅಪೂರ್ವ ಎನಿಸಿದೆ.

ಮುಳುಗುಂದ ನಾಡಿನಲ್ಲಿ ನಾಗರಶಿಲ್ಪಗಳ ಸಂಖ್ಯೆ ಅಧೀಕವಾಗಿದೆ. ಮುಳಗುಂದದ ಪಾರ್ಶ್ವನಾಥ ಬಸದಿಯ ಸಭಾಮಂಟಪದ ಛತ್ರದಲ್ಲಿರುವ ನಾಗದೇವತೆಯ ಉಬ್ಬುಶಿಲ್ಪ ವೈಶಿಷ್ಟ್ಯಪೂರ್ಣವಾಗಿದೆ. ಇಲ್ಲಿಯ ಕರೆಯ ಏರಿಯ ಮೇಲಿರುವ ಮತ್ತು ಸಿದ್ಧೇಶ್ವರ ದೇವಾಲಯದ ಆವರಣದಲ್ಲಿರುವ ನಾಗಶಿಲ್ಪಗಳು ಗಮನಾರ್ಹವೆನಿಸಿವೆ. ಬಂಡೆಯ ಮೇಲೆ ಪೂರ್ಣ ರೇಖಾ ವಿನ್ಯಾಸ ಬಿಡಿಸಿ ಅರ್ಧ ಕೆತ್ತಿದ ಬಾಹುಬಲಿ ವಿಗ್ರಹ ಬಹಳ ಮಹತ್ವದ್ದೆನಿಸಿದೆ. ಉತ್ತರ ಕರ್ನಾಟಕದಲ್ಲಿ ಇಷ್ಟು ಪ್ರಾಚೀನವಾದ ಬೃಹತ್ ಶಿಲ್ಪ ಬೇರೆಲ್ಲೂ ಇಲ್ಲ. ಇದು ಪೂರ್ಣ ಪ್ರಮಾಣದಲ್ಲಿ ಕೆತ್ತಲ್ಪಟ್ಟಿದ್ದರೆ ಶ್ರವಣಬೆಳಗೊಳದ ಗೊಮ್ಮಟ ಶಿಲ್ಪ ರಚನೆಯ ಪೂರ್ವದ ಶಿಲ್ಪ (೯೮೧) ಖ್ಯಾತಿಗೆ ಇದು ಪಾತ್ರವಾಗುತ್ತಿತ್ತು.[೧೨] ಹೀಗೆ ಪ್ರಾಚೀನ ಕಾಲದಲ್ಲಿ ಜೈನ ಪರಂಪರೆಯ ಕೇಂದ್ರವೆನಿಸಿದ್ದು ಮುಳಗುಂದ ಇಂದು ಇಲ್ಲಿನ ಜನಸಾಮಾನ್ಯರ ಸಾಮರಸ್ಯದಿಂದ ಜೀವನ ಸಾಗಿಸುತ್ತಿದ್ದಾರೆ.

## ೫. ಪಾರ್ಶ್ವನಾಥ ಬಸದಿ – ಮಲ್ಲಸಮುದ್ರ :

ಗದುಗಿನ ದಕ್ಷಿಣ ಭಾಗದಲ್ಲಿರುವ ಈ ಗ್ರಾಮ ೫ಕಿ.ಮೀ. ದೂರದಲ್ಲಿದೆ. ಗ್ರಾಮದ ಮಧ್ಯಭಾಗದಲ್ಲಿರುವ ಬಸದಿಯ ಗುಡಿ ನಿರ್ಮಾಣಗೊಂಡಿದ್ದು ಪೂರ್ವಾಭಿಮುಖವಾಗಿದೆ. ಹಳೆಯ ಕಟ್ಟಡದ ಭಾಗದಲ್ಲಿಯೇ ನವೀನ ಕಟ್ಟಡ ನಿರ್ಮಿಸಲಾಗಿದ್ದು ಇದರಲ್ಲಿ ಪ್ರಾಚೀನ ಕಾಲದ ಪಾರ್ಶ್ವನಾಥನ ಹಾಗೂ ಆಸಿನರಾಗಿರುವ ಪಾರ್ಶ್ವನಾಥನ ಮುಕ್ಕೊಡೆ ಸಿಂಹಲಾಂಛನ ಚಾಮರ ಧಾರಣೆಯರ ಮೂರ್ತಿಗಳಿವೆ. ಇದೇ ಗ್ರಾಮದ ಮಾರುತಿ ದೇವಾಲಯದಲ್ಲಿ ಜೈನ ಶಾಸನವಿದೆ. ಧ್ಯಾನ ಮುದ್ರೆಯಲ್ಲಿ ಕುಳಿತ ತೀರ್ಥಂಕರ, ಹಸು ಶಿಶುವಿನ ಶಿಲ್ಪಗಳು ಮತ್ತು ಸವೆದು ಹೋದ ಶಾಸನಗಳಿವೆ. ಈಗ ಈ ಬಸದಿಯನ್ನು ಜೈನ ದೇವಾಲಯವೆಂದು ಕರೆಯುತ್ತಾರೆ. ಇಲ್ಲಿನ ಜೈನ ಹಾಗೂ ಜೈನೇತರ ಜನಾಂಗದವರ ಸಾಮರಸ್ಯತೆಯನ್ನು ಈ ನವೀಕೃತಗೊಂಡ ಬಸದಿ ಬಿಂಬಿಸುತ್ತದೆ.

## ೬. ಬ್ರಹ್ಮಜಿನಾಲಯ – ಲಕ್ಕುಂಡಿ :

ಜಿಲ್ಲಾ ಕೇಂದ್ರ ಗದುಗಿನ ಆಗ್ನೇಯಕ್ಕೆ ೧೨ಕಿ.ಮೀ. ದೂರದಲ್ಲಿರುವ ಲಕ್ಕುಂಡಿ ಪ್ರಾಚೀನ ಕಾಲದಲ್ಲಿ ಪ್ರಮುಖ ಧಾರ್ಮಿಕ ಹಾಗೂ ಶಿಕ್ಷಣ ಕೇಂದ್ರವಾಗಿದ್ದು ದಕ್ಷಿಣ ಭಾರತದ ಶಿಲ್ಪಕಲಾ ಮುಕುಟಮಲೆ ಎಂದು

---

೧೧. ಸದ್ಯ ಶ್ರೀ ಪಾರ್ಶ್ವನಾಥ ತೀರ್ಥಂಕರ ಮೂರ್ತಿ ಗದುಗಿನ ಪುರಾತತ್ವ ಇಲಾಖೆಯ ಮ್ಯೂಜಿಯಂನಲ್ಲಿದೆ.

೧೨. ಸದ್ಯ ಮುಳಗುಂದ ಗುಡ್ಡದ ಏಕಶಿಲೆಯಲ್ಲಿ ಕೆತ್ತಿದ ಗೊಮ್ಮಟ ಶಿಲ್ಪ ಅರ್ಧಕೆತ್ತನೆಗೊಂಡು ಈಗಲೂ ಸುಸ್ಥಿತಿಯಲ್ಲಿದೆ.

ಹೆಸರಾಗಿದೆ. ಚಾರಿತ್ರಿಕ ಮಹತ್ವ ಪಡೆದ ಈ ಪ್ರದೇಶ ನೂರು-ಬಾವಿ ಹಾಗೂ ಗುಡಿಗಳನ್ನೊಳಗೊಂಡ ಬೀಡು ಇದಾಗಿತ್ತು. ಆದರೆ ಇಂದು ೩೭ ದೇವಾಲಯ ೧೪ ಬಾವಿಗಳು ಮಾತ್ರ ಉಳಿದಿವೆ. ಹೀಗೆ ಶಾಸನ, ಸಾಹಿತ್ಯಿಕ ಕೃತಿಗಳಲ್ಲಿ, ಪೌರಾಣಿಕವಾಗಿ ಇತಿಹಾಸದ ಗರ್ಭದಲ್ಲಿ ಹಡಗಿರುವ ಲಕ್ಕುಂಡಿ ಪ್ರದೇಶದ ಕೌತುಕ ಮಯವಾದ ಅಂಶಗಳನ್ನು ಅರಿಯಲು ಇನ್ನಷ್ಟು ಸಂಶೋಧನೆಯಾಗಬೇಕಿದೆ.

"ಬಿಳಿಯರಳೆಯಂತೆ ಗಂಗಾಜಲದಂತೆಸೆವಜಿತಸೇನ ಮುನಿಪತಿಯ ಗುಣಾವಳಿಯಂತೆ ನೆಗಳ್ದ ಕೋಪಣಾಚಲದಂತೆ ಪವಿತ್ರಮತ್ತಿಬ್ಬೆಯ ಚರಿತ್ರಂ" ಕವಿ ಚಕ್ರವರ್ತಿ ರನ್ನ ಅತ್ತಿಮಬ್ಬೆಯ ವ್ಯಕ್ತಿ ಚಿತ್ರ ನಿಡುವಾಗ ಕೋಪಣಾಚಲದಂತೆ ಪವಿತ್ರ ಎಂದಿದ್ದಾನೆ.[೧೩] ಕರ್ನಾಟಕದ ಶಾಸನಗಳಲ್ಲಿ ಮತ್ತು ಸಾಹಿತ್ಯಕೃತಿಗಳಲ್ಲಿ ಶತಮಾನಗಳವರೆಗೆ ಮತ್ತೆ ಮತ್ತೆ ಪ್ರಸ್ತಾಪಿತನಾದ ಅಪೂರ್ವ ಮಹಿಳೆ ಅತ್ತಿಮಬ್ಬೆ ಮತ್ತು ಆಕೆಯ ಕಾರ್ಯಕ್ಷೇತ್ರ ಅಂದಿನ ಲೊಕ್ಕಗುಂಡಿ ಇಂದಿನ ಲಕ್ಕುಂಡಿ. ಅಂತರರಾಷ್ಟ್ರೀಯ ಮಾನ್ಯತೆ ಹೊಂದಿದ ಚೊಕ್ಕ ಚಿನ್ನದ ನಾಣ್ಯ, ಲೋಕ್ಕಿಗದಾಣ್ಯವನ್ನು ತಯಾರಿಸುತ್ತಿದ್ದ ಟಂಕಶಾಲೆಯನ್ನು ಶಿಲ್ಪಕಲೆಯ ವೈಭವವಿರುವ ದೇವಾಲಯಗಳಿಂದ ಬೆಳಗಿದ ಪ್ರಸಿದ್ಧ ಸ್ಥಳ ಹೊಯ್ಸಳ ವೀರಬಲ್ಲಾಳನ ಉಪ ರಾಜಧಾನಿಯಾಗಿ ಅಮರಾವತಿಗೂ ಮಿಗಿಲೆಂಬ ಖ್ಯಾತಿಯನ್ನು ಪಡೆದ ಐತಿಹಾಸಿಕ ಸ್ಥಳ ಲಕ್ಕುಂಡಿ, ಅತ್ತಿಮಬ್ಬೆ ಕಟ್ಟಿಸಿದ "ಬ್ರಹ್ಮಜಿನಾಲಯ"ವು ಭಾವೈಕ್ಯತೆಯ ಶ್ರೇಷ್ಠ ಉದಾಹರಣೆ. ಲಕ್ಕುಂಡಿಯ ಮಹಾಜನರು ಜಿನನಿಗೂ ಬ್ರಹ್ಮನಿಗೂ ಸಮನ್ವಯ ಕಲ್ಪನೆ, ಅತ್ತಿಮಬ್ಬೆ ಕಟ್ಟಿಸಿದ ಜಿನಾಲಯಕ್ಕೆ ಬ್ರಹ್ಮ ಜಿನಾಲಯವೆಂದು ಹೆಸರು ಚಾಲುಕ್ಯ ಅರಸರ ಇರಿವಬೆಡಂಗನು ಬ್ರಹ್ಮಜಿನಾಲಯಕ್ಕೆ ದಾನದತ್ತಿ ನೀಡಿದ್ದಾನೆ.

ಲಕ್ಕುಂಡಿ ಜೈನ ಧರ್ಮದ ಯಾಪನೀಯ ಪಂಥದ ಪ್ರಮುಖ ಕೇಂದ್ರ. ಕ್ರಿ.ಶ. ೧೦೦೭ರ ಶಾಸನದ ಪ್ರಕಾರ[೧೪] ದಾನಚಿಂತಾಮಣಿ ಅತ್ತಿಮಬ್ಬೆಯು ಸಾವಿರ ದೈನೂರು ಬಸದಿಗಳನ್ನು ನಾಡಿನಾದ್ಯಂತ ನಿರ್ಮಿಸಿ ಈ ಎಲ್ಲಾ ಬಸದಿಗಳಿಗೆ ಮುಕುಟಪ್ರಾಯವಾಗಿ ಲಕ್ಕುಂಡಿಯ "ಬ್ರಹ್ಮ ಜಿನಾಲಯ"ವನ್ನು ನಿರ್ಮಿಸಿದಳೆಂದು ತಿಳಿದು ಬರುತ್ತದೆ. ಪಾರ್ಶ್ವನಾಥ ಬಸದಿ, ಘನಾಂತಿಕೆಯ ಬಸದಿ, ನೋಂಪಿಯ ಬಸದಿ, ಕಮ್ಮಟ ಜಿನಾಲಯ ಶಾಸನಗಳಿಂದ ತಿಳಿದು ಬರುತ್ತದೆ. ಲಕ್ಕುಂಡಿಯಲ್ಲಿ ಅನೇಕ ಸುಂದರವಾದ ಜೈನ ಶಿಲ್ಪಗಳಿವೆ. ಅದರಲ್ಲಿ ಪ್ರಮುಖವಾದವುಗಳೆಂದರೆ ಬ್ರಹ್ಮ, ಪದ್ಮಾವತಿ, ಮಹಾವೀರ, ಶಿರೋಭಗ್ನವಾದ ನೇಮಿನಾಥ ಮುಂತಾದವುಗಳು, ಇವುಗಳಲ್ಲದೆ ಲಕ್ಕುಂಡಿಯಲ್ಲಿರುವ ಮ್ಯೂಸಿಯಂನಲ್ಲಿ ಅದೇ ಊರಿನಲ್ಲಿ ದೊರೆತ ಹತ್ತಾರು ಜಿನಬಿಂಬಗಳಿರುವುದನ್ನು ಗಮನಿಸಬಹುದಾಗಿದೆ. 'ಚಾತುರ್ವರ್ಣ' ಎಂಬ ಯಮ ನಿಯಮಗಳ ಪರಿಪಾಲನೆಗೆ ಹೆಸರಾದ ವಿಶೇಷ ಜೈನ ಸಂಘ ಲಕ್ಕುಂಡಿಯಲ್ಲಿ ಅಸ್ತಿತ್ವದಲ್ಲಿತ್ತೆಂದು ತಿಳಿಯುತ್ತದೆ.

---

೧೩. ರನ್ನ-ಅಜಿತನಾಥ ತೀರ್ಥಂಕರ ಚರಿತೆ

೧೪. SII XI-i, 52. ಕ್ರಿ.ಶ. ೧೦೦೭ ಲಕ್ಕುಂಡಿ ಶಾಸನ.

ಬ್ರಹ್ಮಜಿನಾಲಯ ಇದು ಜೈನ ಮಹಾಸಾಧ್ವಿದಾನ ಚಿಂತಾಮಣಿ ಅತ್ತಿಮಬ್ಬೆ ೧೦೦೭ರಲ್ಲಿ ಕಟ್ಟಿಸಿದ ಜಿನಾಲಯ ೨೮ ಕಂಬಗಳುಳ್ಳ ಗರ್ಭಗೃಹದ ಮೇಲೆ ಮತ್ತೊಂದು ಗರ್ಭಗೃಹ ಹೊಂದಿರುವ ತೀರ್ಥಂಕರ ಮೂರ್ತಿಗಳ ವಿರಾಜಮಾನತೆ ಪಡೆದ ಒಳಮಂಟಪದಲ್ಲಿ ಬ್ರಹ್ಮನ ವಿಗ್ರಹ ಹಾಗೂ ಮಂಟಪದ ಬಾಗಿಲ ಮೇಲೆ ಗಜಲಕ್ಷ್ಮೀಯ ಮೂರ್ತಿ ಮತ್ತು ಜಿನ ಬಿಂಬವಿದ್ದು ಸಮಗ್ರವಾಗಿ ಜೈನ ವಾಸ್ತುಶಿಲ್ಪದ ಪರಿಕಲ್ಪನೆಯಲ್ಲಿ "ಕರ್ನಾಟಕ ಜೈನ ವಾಸ್ತು ಶೈಲಿಯ ಮೈಲುಗಲ್ಲು" ಎಂದು ಕರೆಯಲಾಗಿದೆ.

ಜಿನಾಲಯವು ಚೌಕಾಕಾರದ ಗರ್ಭಗೃಹ ಅರ್ಧಮಂಟಪ, ನವಗೃಹ ಹಾಗೂ ತೆರೆದ ಮುಖಮಂಟಪವನ್ನು ಹೊಂದಿದೆ. ಗರ್ಭಗೃಹದಲ್ಲಿ ನೇಮಿನಾಥನ ಆಕರ್ಷಕ ವಿಗ್ರಹವನ್ನು ಬ್ರಹ್ಮಜಿನನೆಂದು ಕರೆಯಲಾಗಿದ್ದು ಇದು ಸುಂದರವಾದ ಪ್ರಭಾವಳಿಯನ್ನು ಹೊಂದಿದೆ. ಅಕ್ಕ ಪಕ್ಕದಲ್ಲಿ ಚಾಮರಧಾರಣಿಯರ ಶಿಲ್ಪಗಳಿವೆ. ಅರ್ಧ ಮಂಟಪದಲ್ಲಿ ನಿಂತಿರುವ ಚತುರ್ಮುಖ ಬ್ರಹ್ಮ ಹಾಗೂ ಪದ್ಮಾವತಿಯರ ಶಿಲ್ಪಗಳ ಆಕರ್ಷಕವಾಗಿವೆ. ದೇವಾಲಯದ ಹೊರಭಾಗದಲ್ಲಿ ಗೋಡೆಗಳಲ್ಲಿರುವ ಗೋಡೆಗಂಬಗಳ ನಡುವೆ ಅನೇಕ ದೇವತೆಶಿಲ್ಪಗಳು ಅವುಗಳ ಮೇಲೆ ಶಿಖರ ವಿನ್ಯಾಸಗಳು ಕಿರುಹುಬ್ಬು ಕೆತ್ತನೆಗಳು ಬಹಳ ಮನಮೋಹಕರವಾಗಿವೆ.

ಈ ಜಿನಾಲಯಕ್ಕೆ ಕ್ರಿ.ಶ. ೧೦೦೭ರ ಶಾಸನ, ಕ್ರಿ.ಶ. ೧೧೭೭ರ ಶಾಸನಗಳು ದಾನದತ್ತಿಗಳ ವಿವರಣೆಯನ್ನು ನೀಡುತ್ತವೆ. ೧೦೦೭ರ ಶಾಸನವು ಅಜಿತ ಪುರಾಣದ ಎರಡು ಪದ್ಯಗಳನ್ನು ಒಳಗೊಂಡಿದೆ. ಶಾಸನದ ನಕಲು ಸಹ ಬಸದಿಯ ಆವರಣದಲ್ಲಿದೆ. ಬಸದಿ ಪ್ರವೇಶ ದ್ವಾರದ ಬಲಕಂಬದ ಮೇಲಿರುವ ಕಲಚೂರಿ ಸೋವಿದೇವ ಕ್ರಿ.ಶ. ೧೧೭೭ರ ಶಾಸನವು ಗುಣನಿಧಿ ಕೇಶವದೇವನು ಸುವರ್ಣ ದಾನವನ್ನು ಬಸದಿಗೆ ನೀಡಿದನೆಂದು ದಾಖಲಿಸಿದೆ.[೧೫] ಬಸದಿಯಲ್ಲಿರುವ ನೇಮಿನಾಥನ ಪಾದಪೀಠದಲ್ಲಿರುವ ಕ್ರಿ.ಶ. ೧೨ನೆಯ ಶತಮಾನದ ಶಾಸನವು ಮೂಲಸಂಘ ದೇವಗಣದ ಶಂಖದೇವನು ವಿಗ್ರಹವನ್ನು ದಾನ ನೀಡಿದನೆಂದು ಉಲ್ಲೇಖಿಸಿದೆ.

ಲಕ್ಕುಂಡಿಯ ವೀರಭದ್ರದೇವಾಲಯದ ಗರ್ಭಗೃಹದಲ್ಲಿ ಸಿಂಹ ಪೀಠವಿರುವ ಸಪ್ತಹೆಡೆಯ ನಾಗರಶಿಲ್ಪವಿದೆ. ಇದರ ಮೇಲೆ ಮುಕ್ಕೊಡೆ ಇದ್ದು ಕೆಳಗೆ ಕುಳಿತ ಜಿನರ ಶಾಖೆಗಳಿಂದ ಅಲಂಕೃತವಾಗಿದೆ. ಈ ದೇವಾಲಯದ ಸಮೀಪವೇ ೨೪ ತೀರ್ಥಂಕರರ ಪೀಠವಿದೆ. ನಗರೇಶ್ವರ ಗುಡಿ ಎದುರು ಇರುವ ಕ್ರಿ.ಶ.ಸು. ೧೨ನೇ ಶತಮಾನದ ಶಾಸನವು ವಸುದೈಕ ಬಾಂಧವ ಜಿನಾಲಯದ ತ್ರಿಭುವನ ತಿಲಕ ಶಾಂತಿನಾಥ ದೇವರಿಗೆ ದಾನ ಶಾಲೆಯ ನಿವೇಶನವನ್ನು ದಾನ ಮಾಡಿದ್ದನ್ನು ತಿಳಿಸುತ್ತದೆ.

ಪ್ರಾಚೀನ ಕರ್ನಾಟಕದ ಸ್ತ್ರೀಯರಲ್ಲಿ ಅಗ್ರಗಣ್ಯಗಳು ಪರಮಜಿನಭಕ್ತೆ ಲಕ್ಕುಂಡಿಯ ಧಾರ್ಮಿಕ ಹಾಗೂ ಸಾಂಸ್ಕೃತಿಕ ಚರಿತ್ರೆಯೊಡನೆ ಹಾಸುಹೊಕ್ಕಾಗಿ ನಿಲ್ಲುವ ಮಹಾಸಾಧ್ವಿ ಅತ್ತಿಮಬ್ಬೆ ಇವಳ ಆಶ್ರಯದಲ್ಲಿ ರನ್ನ ಕವಿ ಅಜೀತಪುರಾಣ (೯೯೩)ವನ್ನು ಬರೆದರೆ ಪೊನ್ನನಿಂದ ಶಾಂತಿಪುರಾಣವನ್ನು ಬರೆಯಿಸಿ ಸಾವಿರ ಕೈಬರಹದ

---

೧೫. ಅದೇ ಸಂಪುಟ XI-22 ಕ್ರಿ.ಶ. ೧೧೭೭ರ ಲಕ್ಕುಂಡಿ ಶಾಸನ, ಪು. ೨೩.

ಪ್ರತಿಗಳನ್ನು ಮಾಡಿಸಿ ಹಂಚಿದಳು. ಹೀಗೆ ಲಕ್ಕುಂಡಿ ಸರ್ವಧರ್ಮ ಸಮನ್ವಯತೆಯಿಂದ ಧಾರ್ಮಿಕವಾಗಿ, ಆರ್ಥಿಕವಾಗಿ, ಸಾಮಾಜಿಕವಾಗಿ, ರಾಜಕೀಯವಾಗಿ ಶೈಕ್ಷಣಿಕ ಹಾಗೂ ಕಲೆ ಸಾಹಿತ್ಯ ದೃಷ್ಟಿಯಿಂದ ಅಭಿವೃದ್ಧಿ ಹೊಂದುತ್ತ ಸಾಗುತ್ತಿರುವುದು ವರ್ತಮಾನದ ಘಟನೆಗಳಿಂದ ತಿಳಿಯಬಹುದಾಗಿದೆ. ಈ ಸಾಧಕಿಯ ನೆನಪಿಗಾಗಿ ಪ್ರತಿವರ್ಷ ಅತ್ತಿಮಬ್ಬೆ ಪ್ರಶಸ್ತಿಯನ್ನು ಮಹಿಳಾ ಸಾಧಕಿಯರಿಗೆ ನೀಡಲಾಗುತ್ತಿದೆ. ಹಾಗೂ ಪ್ರತಿವರ್ಷ ಲಕ್ಕುಂಡಿ ಉತ್ಸವದ ಮೂಲಕ ಈ ಪ್ರದೇಶದ ಕಲಾಕೃತಿಯ ಸಾಂಸ್ಕೃತಿಕ ಹಬ್ಬವನ್ನು ಸಡಗರ ಸಂಭ್ರಮದಿಂದ ಆಚರಿಸಲಾಗುತ್ತಿದೆ.

## ೭. ಬಲದೇವ ಬಸದಿ ಸೊರಟೂರು :

ಗದಗ ತಾಲೂಕಿನ ದಕ್ಷಿಣಕ್ಕಿರುವ ಸೊರಟೂರು ಸಹ ಯಾಪನೀಯ ಪಂಥದ ಪ್ರಮುಖ ಕೇಂದ್ರವಾಗಿತ್ತು.[೧೬] ಹೊಯ್ಸಳ ದೊರೆ ಇಮ್ಮಡಿ ವೀರಬಲ್ಲಾಳನು ಬೆಳ್ವೊಲ ಪ್ರದೇಶದ ಮೇಲೆ ಕಣ್ಣಿಟ್ಟ ಯಾದವ ಭಿಲ್ಲಮನಿಗೂ ಈ ನಾಡಿನಲ್ಲಿ ಅಂದರೆ ಸೊರಟೂರಿನ ಬಳಿ ಘನಘೋರ ಯುದ್ಧವಾಗಿ ಇಮ್ಮಡಿ ವೀರಬಲ್ಲಾಳ ಜಯಶಾಲಿಯಾಗಿರುವುದು "ಚಾರಿತ್ರಿಕ ಸತ್ಯವಾಗಿದೆ." ಬಲ್ಲಾಳ ಭೂಪಾಲಕನ ಒಂದನೇಯ ಬಿಲ್ಲಮನ ಸೈನ್ಯವನ್ನು ಒಕ್ಕಲಿಕ್ಕೆ ತಿಳಿದು ಬೆನ್ನಟ್ಟಿ ಸೊರಟೂರಿನಿಂದ ಲಕ್ಕುಂಡಿಯವರೆಗೆ ಓಡಿಸಿರುವುದು ಈ ನಾಡಿನ ಒಂದು ಮಹತ್ವದ ಚಾರಿತ್ರಿಕ ಘಟನೆಯಾಗಿದೆ. ಇಲ್ಲಿನ ಬಲದೇವ ಜಿನಾಲಯ ಕಲ್ಯಾಣ ಚಾಲುಕ್ಯರ ಕಾಲದಲ್ಲಿ ನಿರ್ಮಾಣವಾಗಿದ್ದು ಈಗ ದುಸ್ಥಿತಿಯಲ್ಲಿದೆ. ಒಂದು ಕಾಲದಲ್ಲಿ ಯುದ್ಧಭೂಮಿಯಾಗಿದ್ದ ಈ ಪ್ರದೇಶ ಇಂದು ಧಾರ್ಮಿಕ ಹಾಗೂ ಸಾಂಸ್ಕೃತಿಕ ಬೀಡಾಗಿ ಅಭಿವೃದ್ಧಿಹೊಂದುತ್ತಿದೆ. ಜೈನ ಪರಂಪರೆಯ ಕೇಂದ್ರವಾಗಿ ಪ್ರಾಮುಖ್ಯತೆಯನ್ನು ಪಡೆದಿದ್ದು ಇಲ್ಲಿಯೇ ೧೭-೧೮ನೆಯ ಶತಮಾನದಲ್ಲಿ ನಿರ್ಮಾಣವಾದ ಶಾಂತಿನಾಥ ಬಸದಿಯಿದೆ. ಇದನ್ನು ಹೊಸದಾಗಿ ನಿರ್ಮಿಸಲಾಗಿದೆ. ಜೈನ ಧರ್ಮಿಯರೆಲ್ಲರೂ ಸಾಮರಸ್ಯದಿಂದ ಇಲ್ಲಿ ಉತ್ಸವವನ್ನು ಮಾಡುತ್ತಾ ಸಾಗುತ್ತಿದ್ದಾರೆ.

ಇಲ್ಲಿರುವ ಹಾಳು ಬಸದಿಯ ಬಳಿಯ ಕಲ್ಯಾಣ ಚಾಲುಕ್ಯರ ೨ನೆಯ ಸೋಮೇಶ್ವರನ ಕ್ರಿ.ಶ. ೧೦೭೧ರ[೧೭] ಶಾಸನವು ದಂಡನಾಯಕ ಬಲದೇವನು ಸೂರಸ್ಥಗಣ ಚಿತ್ರಕೂಟಾ ನ್ಯಾಯದ ಸಾಧ್ವಿ ಹುಳಿಯಬ್ಬೆಕೆಯ ಕಾಲು ತೊಳೆದು ಬಲದೇವ ಜಿನಾಲಯಕ್ಕೆ ದಾನ ನೀಡಿದನೆಂದು ಉಲ್ಲೇಖಿಸಿದೆ. ಇನ್ನೊಂದು ಶಾಸನವು ನರೇಂದ್ರಸೇನನ ಶಿಷ್ಯೆ ಪಮ್ಮಿಗೌಡತಿಯ ನಿಷೀಧಿಯೆಂದು ಉಲ್ಲೇಖಿಸಿದೆ.

ಹೀಗೆ ಪ್ರಾಚೀನ ಕಾಲದಿಂದ ಇಂದಿನವರೆಗೂ ಜೈನಧರ್ಮದ ಪ್ರಮುಖ ಸ್ಥಳವಾಗಿ ಪ್ರಾಮುಖ್ಯತೆ ಪಡೆದಿರುವ ಈ ಪ್ರದೇಶ ಅಭಿವೃದ್ಧಿಯ ಕನಸು ಹೊತ್ತು ಕಾಣುತ್ತಿದೆ. ಆ ಕನಸನ್ನು ಅಲ್ಲಿನ ಜನಪ್ರತಿನಿಧಿಗಳು ಜನ ಸಾಮಾನ್ಯರು, ಜೈನ ಧರ್ಮೀಯರು, ಯಾವ ರೀತಿಯ ಸಹಕಾರ ನೀಡುತ್ತಾರೆ ಎಂಬುದು ಭವಿಷ್ಯದ ಪ್ರಶ್ನೆ.

---

೧೬. SII XI-i III ಕ್ರಿ.ಶ. ೧೦೭೧ರ ಸೊರಟೂರ ಶಾಸನ.

೧೭. SII XI-i III ಕ್ರಿ.ಶ. ೧೦೭೧ರ ಸೊರಟೂರ ಶಾಸನ.

ಗದುಗಿನಲ್ಲಿಯೂ ಕಲ್ಯಾಣಿ ಚಾಲುಕ್ಯರ ಕಾಲದ ಜೈನ ಬಸದಿಯೊಂದಿತ್ತು. ಕ್ರಿ.ಶ. ೧೧ನೆಯ ಶತಮಾನದ ಶಾಸನವೊಂದರಲ್ಲಿ ಚಂದ್ರಭೂಷಣ ಮುನಿಯು ಸಲ್ಲೇಖನ ವ್ರತದಿಂದ ಸಮಾಧಿಮರಣ ಪಡೆದರೆಂದು ಉಲ್ಲೇಖಿಸಲಾಗಿದೆ. ೧೫ನೆಯ ಶತಮಾನದ ಶಾಸನವೊಂದರಲ್ಲಿ ಮಹಾದೇವ ಮಂತ್ರಿ ಗದುಗಿನ ಬಸದಿಯನ್ನು ಜಿರ್ಣೋದ್ಧಾರ ಮಾಡಿಸಿದನೆಂದು ಹೇಳಲಾಗಿದೆ. ಗದಗ ತಾಲೂಕಿನ ಚಿಕ್ಕಹಂದಿಗೋಳದ ಒಂದು ಶಾಸನದಲ್ಲಿ ಕ್ರಿ.ಶ. ೧೧೭೪ರಲ್ಲಿ ಬಾಹುಬಲಿ ಪಂಡಿತ ದೇವ ಮಾಡಿಸಿದ ಜೈನ ಬಸದಿಗೆ ಕೆಲವು ಶ್ರಾವಕರು ನೀಡಿದ ದಾನಗಳ ವಿವರಗಳಿವೆ. ಕೋಟುಮಚಗಿಯಲ್ಲಿ ಕಲ್ಯಾಣಿ ಚಾಲುಕ್ಯರ ಕಾಲದಲ್ಲಿ ನಿರ್ಮಾಣವಾದ ಜೈನ ಬಸದಿಯ ಅವಶೇಷಗಳಿವೆ. ಕಣಗಿನಹಾಳದಲ್ಲಿ ಕಲ್ಯಾಣಿ ಚಾಲುಕ್ಯರ ಕಾಲದ ಧರಣೇಂದು ಯಕ್ಷನ ಶಿಲ್ಪ ದೊರೆತಿದೆ. ಗಾವರವಾಡದಲ್ಲಿ ಕಲ್ಯಾಣಿ ಚಾಲುಕ್ಯರ ೨ನೆಯ ಜಯಸಿಂಹನ ಕಾಲದಲ್ಲಿ ನಿರ್ಮಾಣವಾದ ಬಸದಿಯ ಬಗ್ಗೆ ಶಾಸನಗಳಲ್ಲಿ ಉಲ್ಲೇಖವಿದೆ. ಹೀಗೆ ಗದಗ ತಾಲೂಕು ಪ್ರಾಚೀನ ಕರ್ನಾಟಕದ ಪ್ರಮುಖ ಜೈನ ಕೇಂದ್ರಗಳ ಆಗರವಾಗಿತ್ತೆಂದು ಹೇಳಬಹುದು. ಆಧುನಿಕವಾಗಿ ಗದಗ, ಹರ್ತಿ ಗ್ರಾಮಗಳಲ್ಲಿ ಜೈನ ಧರ್ಮಿಯರು ಆಧುನಿಕ ಜೈನ ಜಿನಾಲಯಗಳನ್ನು ನಿರ್ಮಿಸಿದ್ದಾರೆ. ಹೊಸೂರಿನಲ್ಲಿ ಸಿಕ್ಕ ಕಲ್ಯಾಣದ ಚಾಲುಕ್ಯರ ಕಾಲದ ಶಾಸನವು 'ಆಯಿತಗಾವುಂಡ' ನೆಂಬುವನು ಬಸದಿಯನ್ನು (ಕ್ರಿ.ಶ. ೧೦೩೦) ಕಟ್ಟಿಸಿದನು[೧೮] ಎಂದು ಉಲ್ಲೇಖಿಸಿದೆ. ಇಂದು ಇದು ಈಶ್ವರ ದೇವಾಲಯವಾಗಿ ಪರಿವರ್ತಿತವಾಗಿದೆ.

**೮. ಬಸ್ತಿಗುಡಿ – ಕೋಟುಮಚಗಿ :**

ಗದಗಿನ ಉತ್ತರಕ್ಕೆ ಇರುವ ಗ್ರಾಮವು ಪ್ರಾಚೀನ ಕಾಲದಲ್ಲಿ ಹಲವಾರು ರಾಜಪ್ರಭುತ್ವದ ಆಳ್ವಿಕೆಗೆ ಒಳಪಟ್ಟಿತ್ತು. ಇಲ್ಲಿ ಕಲ್ಯಾಣದ ಚಾಲುಕ್ಯರ ಆಡಳಿತಾವಧಿಯಲ್ಲಿ ನಿರ್ಮಿಸಲಾದ ಜಿನಾಲಯವಿದೆ. ಇಂದು ಬಸದಿಯು ಗರ್ಭಗೃಹ ಮಾತ್ರ ಉಳಿದಿದ್ದು ಉಳಿದ ಮೂಲ ಭಾಗಗಳು ನಾಶವಾಗಿವೆ. ಚೌಕಾಕಾರವಾಗಿರುವ ಗರ್ಭಗೃಹದಲ್ಲಿ ಚಾಲುಕ್ಯ ಶೈಲಿಯ ಪಾರ್ಶ್ವನಾಥನ ಸುಂದರವಾದ ಮೂರ್ತಿಶಿಲ್ಪವಿದೆ. ಬಸದಿಯಲ್ಲಿ ಕ್ರಿ.ಶ. ೧೬ನೆಯ ಶತಮಾನದಲ್ಲಿ ವಿಜಯನಗರ ಸಾಮ್ರಾಜ್ಯದ ಸದಾಶಿವರಾಯನ ಆಳ್ವಿಕೆಗೆ ಒಳಪಟ್ಟಿತ್ತು. ಎಂಬುದನ್ನು ಶಾಸನವು ತಿಳಿಸುತ್ತಾ ಈ ಗ್ರಾಮಕ್ಕೆ "ಸದಾಶಿವರಾಯ ಸಮುದ್ರ" ಎಂಬ ಹೆಸರಿತ್ತೆಂದು ದಾಖಲಿಸಿದೆ.[೧೯] ಇಲ್ಲಿನ ಸೋಮೇಶ್ವರ ದೇವಾಲಯದ ಬಳಿ ದೊರೆತಿರುವ ೩ನೆಯ ಜಗದೇಕ ಮಲ್ಲನ ಶಾಸನವು ಉಮ್ಮಚಗಿ ಗ್ರಾಮವು ಒಂದು ಅಗ್ರಹಾರವಾಗಿತ್ತೆಂದು ತಿಳಿಸುತ್ತದೆ.

ಗಾವುರವಾಡದ ಈಶ್ವರ ಗುಡಿಯಲ್ಲಿ ಈಶ್ವರನ ಲಿಂಗವಿದ್ದು ಅದರ ಪಕ್ಕದಲ್ಲಿ ಪಾರ್ಶ್ವನಾಥ, ನಾರಾಯಣ ಮತ್ತು ನಾಗರ ಶಿಲ್ಪಗಳಿವೆ. ಇಲ್ಲಿನ ವೀರನಾರಾಯಣ ಗುಡಿಯಲ್ಲಿನ ಶಾಸನವೊಂದು ಕಲ್ಯಾಣ ಚಾಲುಕ್ಯರ ೩ನೆಯ ಸೋಮೇಶ್ವರನ ಕಾಲದ್ದು. ಕ್ರಿ.ಶ. ೧೦೭೧ರಲ್ಲಿ ಮಹಾಮಂಡಲೇಶ್ವರ ಲಕ್ಷ್ಮೀರಸನು ಅಣ್ಣಿಗೇರಿಯ

೧೮. SII ಸಂಪುಟ–೧೧–೧ ಸಂಖ್ಯೆ–೬೫ ಕ್ರಿ.ಶ. ೧೦೨೮–೨೯ರ ಹೊಸೂರು ಶಾಸನ ಪು. ೫೫–೫೭

೧೯. SII-XV Vol. 696.

ಜಿನಾಲಯಕ್ಕೆ ಪೂರ್ವದತ್ತಿಯ ಪುನರ್ಜೀರಣ ಮಾಡಿದ ವಿವರವಿದೆ.[೨೦] ಅದೇ ರೀತಿ ಕಲಚೂರಿಗಳ ಸೋಮದೇವನ ಕಾಲದ ಶಾಸನವೊಂದು ಚಿಕ್ಕಹಂದಿಗೋಳದ ಜಿನಾಲಯಕ್ಕೆ ಭೂದಾನ ನೀಡಿದ ವಿವರವನ್ನು ನೀಡುತ್ತದೆ. ಗದಗಿನಿಂದ ಪೂರ್ವಕ್ಕಿರುವ ಹಾತಲಗೇರಿಯಲ್ಲಿ ಪ್ರಾಚೀನ ದೇವಾಲಯವನ್ನು ಮರುನಿರ್ಮಿಸಲಾಗಿದೆ. ಇಂದು ವೆಂಕಟೇಶ್ವರ  ದೇವಸ್ಥಾನವಾಗಿರುವ ಅದು ಗರ್ಭಗೃಹ ಹಾಗೂ ಅಲ್ಲಿರುವ ಸಿಂಹಲಾಂಛನ ಪೀಠವನ್ನು ಶೋಧಿಸಿದರೆ ಇದೊಂದು ಪ್ರಾಚೀನ ಅವಶ್ಯವಾಗಿದೆ. ಅಷ್ಟೇ ಅಲ್ಲದೆ ಗದುಗಿನ ಪಶ್ಚಿಮಕ್ಕಿರುವ ಕಳಸಾಪೂರದಲ್ಲಿಯೂ ಸಹ ಜೈನ ಪರಂಪರೆಗೆ ಸಂಬಂಧಿಸಿದ ಶಿಲ್ಪಗಳು, ಶಾಸನಗಳು, ಬಸದಿಯ ಅವಶೇಷಗಳು ಪತ್ತೆಯಾಗಿದ್ದು ಗದಗಿನ ಸುತ್ತಮುತ್ತಲೂ ಜೈನ ಪರಂಪರೆಯ ಪ್ರಭಾವ ಕಂಡು ಬರುತ್ತದೆ. ಗದಗು ಅದರ ಸುತ್ತಮುತ್ತಲಿನ ಪ್ರದೇಶಗಳಲ್ಲಿ ಉತ್ಖನನ ಕಾರ್ಯ ಏರ್ಪಟಲ್ಲಿ ಇನ್ನು ಹೆಚ್ಚಿನ ಬೆಳಕನ್ನು ಜೈನ ಪರಂಪರೆಯ ಮೇಲೆ ಚೆಲ್ಲಬಹುದು.

ಹೀಗೆ ಗದಗ ತಾಲೂಕು ಜೈನ ಪರಂಪರೆಯ ಯಾಪನೀಯ ಪಂಥದ ಪ್ರಮುಖ ಕೇಂದ್ರವಾಗಿ ಪ್ರಾಮುಖ್ಯತೆಯನ್ನು ಪಡೆದುಕೊಂಡಿದೆ. ಪ್ರಾಚೀನ ಕಾಲದ ಬಸದಿಗಳು ಮೂರ್ತಿಶಿಲ್ಪಗಳ ಜೊತೆಗೆ ಕರ್ನಾಟಕಕ್ಕೆ ಮಾದರಿಯಾದ ಒಂದು ಜೈನಮಠ ತಾಲೂಕಿನ ಹೊಸೂರು ಗ್ರಾಮದಲ್ಲಿತ್ತು. ಕೇರೂರು ಗ್ರಾಮದಲ್ಲಿ ಯಾಪನೀಯ ಪಂಥದ ಒಂದು ಗಣವಿತ್ತು. ಎಂಬುದು ವಿಶೇಷವಾಗಿದೆ. ಇನ್ನೂ ಈ ತಾಲೂಕಿನ ಜೈನ ಕೇಂದ್ರಗಳ ಸುತ್ತಮುತ್ತ ಸಂಶೋಧನೆ ಕಾರ್ಯ, ಉತ್ಖನನ ಕಾರ್ಯ ಏರ್ಪಟ್ಟರೆ ಜೈನ ಧರ್ಮದ ಪ್ರಭಾವವನ್ನು ಕುರಿತು ತಿಳಿಯಬಹುದಾಗಿದೆ. ಗದಗ ಲಕ್ಕುಂಡಿ, ಮುಳಗುಂದ, ಹೊಸೂರು, ಸೊರಟೂರು ಗ್ರಾಮಗಳು ಯಾಪನೀಯ ಪಂಥದ ಅಭಿವೃದ್ಧಿಗೆ ಅಪೂರ್ವವಾದ ಕೊಡುಗೆಗಳನ್ನು ನೀಡಿವೆ. ಈ ಪ್ರದೇಶಗಳ ಅಭಿವೃದ್ಧಿಯು ನಮ್ಮೆಲ್ಲರ ಜವಾಬ್ದಾರಿಯಾಗಿದ್ದು ಅದನ್ನು ಸಂರಕ್ಷಣೆ ಮಾಡಿಕೊಂಡು ಹೋಗುವ ನಿಟ್ಟಿನಲ್ಲಿ ಕಾರ್ಯಪ್ರವರ್ತರಾಗಬೇಕು.

ಗದಗ ಜಿಲ್ಲೆಯ ವ್ಯಾಪ್ತಿಗೆ ಬಂದ ೫ ತಾಲೂಕುಗಳ ಪೈಕಿ ಶಿರಹಟ್ಟಿ ತಾಲೂಕು ಒಂದು. ಬಹಳಷ್ಟು ಐತಿಹಾಸಿಕ ಪರಂಪರೆಯನ್ನು ಹೊಂದಿದ ಮತ್ತು ಹಿಂದೂ ಮುಸ್ಲಿಂ ಭಾವೈಕ್ಯತೆಗೆ ಹೆಸರಾದ ನಾಡು ಶಿರಹಟ್ಟಿ ತಾಲೂಕಿನಲ್ಲಿ ಬರುವ ಲಕ್ಷ್ಮೇಶ್ವರ, ಛಬ್ಬಿ, ಬೆಳ್ಳಟ್ಟಿ ಇನ್ನಿತರ ಗ್ರಾಮಗಳಲ್ಲಿ ಜೈನ ಧರ್ಮದ ಪ್ರಭಾವವಿದೆ. 'ಶಿರಹಪುರ'ವೆಂದು ದಾಖಲಾಗಿರುವ ಈಗೀನ ಶಿರಹಟ್ಟಿಯಲ್ಲಿ ಜೈನ ಧರ್ಮದ ಕುರುಹುಗಳು ಯಾವುವು ಪತ್ತೆಯಾಗಿಲ್ಲ. ಆದರೆ ಫಕೀರೇಶ್ವರ ಮಠ ಹಿಂದೂ-ಮುಸ್ಲಿಂ ಭಾವೈಕ್ಯದ ಕೊಂಡಿಯನ್ನು ಬೆಸೆದ ಮಹತ್ವದ ಸ್ಥಳವಾಗಿದೆ. ಪುಲಿಗೆರೆ-೩೦೦ರ ರಾಜಧಾನಿಯಾದ ಲಕ್ಷ್ಮೇಶ್ವರವು ಯಾಪನೀಯ ಪಂಥದ ಪ್ರಮುಖ ಸ್ಥಳವಾಗಿತ್ತು. ಎಂಬುದಕ್ಕೆ ಶಾಸನಗಳು ಉಲ್ಲೇಖಿಸಿವೆ.[೨೧] ಲಕ್ಷ್ಮೇಶ್ವರದ ಶಂಕ ಜಿನಾಲಯ, ಧವಳ ಜಿನಾಲಯ, ಮರುದೇವ ಬಸದಿ ಗೊಗ್ಗಿಯ ಬಸದಿ ಆನೆಸಜ್ಜೆ ಬಸದಿ ಶಾಂತಿನಾಥ ಬಸದಿ ಶ್ರೀ ವಿಜಯ ಬಸದಿ ಮುಂತಾದವುಗಳು ಶಾಸನಗಳಲ್ಲಿ ಉಲ್ಲೇಖಿಸಲ್ಪಟ್ಟಿವೆ.

ಇಮ್ಮಡಿ ಪುಲಕೇಶಿಯ (ಕ್ರಿ.ಶ.೬೦೯-೬೪೨) ಕಾಲದಲ್ಲಿ ಸೇಂದ್ರಕ ವಂಶದ ದುರ್ಗಶಕ್ತಿಯು ಇಂದಿನ

---

೨೦. SII ೧೧-೧ ಸಂಖ್ಯೆ-೧ ಕ್ರಿ.ಶ. ೧೦೭೧ರ ಸೊರಟೂರು ಶಾಸನ (SII XX-47)

೨೧. SII ೧೧-೧ ಸಂಪುಟ ೨೦, ೫೨, ೧೦೭೭-೭೮ರ ಲಕ್ಷ್ಮೇಶ್ವರ ಶಾಸನ, ಪು. ೬೪-೬೫.

ಹುಬ್ಬಳ್ಳಿ ಪ್ರಾಂತದಲ್ಲಿ ಆಡಳಿತ ನಡೆಸುತ್ತಿದ್ದಾಗ ಇವನು ಪುಲಗೇರಿಯ ಶಂಖ ಬಸದಿಗೆ "೫೦೦ ನಿವರ್ತನಭೂಮಿಯನ್ನು ದಾನ ಮಾಡಿದ ವಿವರವಿದೆ. ವಿನಯಾದಿತ್ಯನು (ಕ್ರಿ.ಶ. ೬೮೧–೯೮) ಇದೇ ಜಿನಾಲಯಕ್ಕೆ 'ಹಡಗಿಲೆ' ಎಂಬ ಗ್ರಾಮವನ್ನು ದಾನ ನೀಡಿದ ವಿಷಯವು ಮತ್ತೊಂದು ಶಾಸನದಲ್ಲಿ ಉಲ್ಲೇಖಗೊಂಡಿದೆ. ಕುಂಕುಮದೇವಿಯು ಪುಲಿಗೆರೆಯಲ್ಲಿ ಕಟ್ಟಿಸಿದ ಅನೆಸಜ್ಜೆ ಬಸದಿಗೆ 'ಗುಡಗೇರಿ' ಗ್ರಾಮವನ್ನು ವಿಜಯಾದಿತ್ಯನು ದಾನ ನೀಡಿದ ಉಲ್ಲೇಖವಿದೆ.[೨೨] ಶಂಖ ಬಸದಿಯ ಪರಿಸರದ ಜಿನಭಟ್ಟಾರಕ ಬಸದಿಗೆ 'ಸಂಬೋಳಲ್ (ಶ್ಯಾಬಾಳ) ಗ್ರಾಮವನ್ನು ನೀಡಿದನೆಂದು ಹಾಗೂ ವಿಜಯದೇವ ಪಂಡಿತನೆಂಬ ಜೈನ ಗುರುವಿಗೆ 'ಕದ್ದಾಮ' ಎಂಬ ಗ್ರಾಮವನ್ನು ಅರಸನು ನೀಡಿದನೆಂದು ಶಾಸನದಿಂದ ತಿಳಿದು ಬರುತ್ತದೆ. ವಿಕ್ರಮಾದಿತ್ಯನ ಉತ್ತರಾಧಿಕಾರಿ ೨ನೆಯ ಕೀರ್ತಿವರ್ಮನು (ಕ್ರಿ.ಶ. ೭೪೪–೫೧) ಪುಲಿಗೆರೆಯ ಧವಳ ಜಿನಾಲಯಕ್ಕೆ '೫೦ ಮತ್ತರು' ಭೂಮಿಯನ್ನು ದಾನ ನೀಡಿದನೆಂದು ಶಾಸನ ತಿಳಿಸುತ್ತದೆ.

ಬೀಜಸೆಟ್ಟಿಯೆಂಬ ದಂಡನಾಯಕನ ಮಗಳು ರಾಜಲದೇವಿ ಕ್ರಿ.ಶ. ೧೨೪೭ರಲ್ಲಿ ಶ್ರೀ ವಿಜಯ ಬಸದಿಯನ್ನು ಜೀರ್ಣೋದ್ಧಾರ ಮಾಡಿ ದಾನ ನೀಡಿದಳೆಂದು ಲಕ್ಷ್ಮೇಶ್ವರದ ಶಾಸನಗಳು ದಾಖಲಿಸಿವೆ. ೧೪೧೨ರಲ್ಲಿ ವಿಜಯನಗರದ ಅರಸ ಹರಿಹರನ ಕಾಲದ ಆಳ್ವಿಕೆಯ ಒಂದು ಭಾಗ ಪುಲಿಗೇರಿಯಾಗಿತ್ತು. ಶಂಖ ಬಸದಿಯ ಎಡಗೊಡೆಯಲ್ಲಿ ಗಂಗ ಅರಸು ಮನೆತನದ ೨ನೆಯ ಮಾರಸಿಂಹನ ಕ್ರಿ.ಶ. ೯೬೮–೬೯ರ ಶಾಸನವು ಶಂಖ ಬಸದಿಗೆ 'ಮೊಳಗೆರೆ ನಿಗ್ಗಾಲ' ಗ್ರಾಮ ನೀಡಿದುದನ್ನು ತಿಳಿಸುತ್ತದೆ. ಇದೇ ಅರಸನ ಮತ್ತೊಂದು ಶಾಸನ ಬಸದಿಯ ಎಡಗೊಡೆಯಲ್ಲಿದೆ. ಇದು ಗಂಗ ಕಂದರ್ಪನು ಜಿನಾಲಯಕ್ಕಾಗಿ ಜಯದೇವ ಪಂಡಿತನಿಗೆ ದಾನ ನೀಡಿದ ವಿಷಯವನ್ನು ಉಲ್ಲೇಖಿಸುತ್ತದೆ. ಬಸ್ತಿಬಣದ ಬ್ರಹ್ಮದೇವರ ಗುಡಿಯ ಬಳಿಯ ಶಾಸನದಲ್ಲಿ ಜಿನಾಲಯಕ್ಕೆ ದಾನ ನೀಡಿದ ವಿಷಯವಿದೆ. ಬಸದಿಯ ಕಂಬದಲ್ಲಿರುವ ಶಾಸನವು ವಿಜಯ ನಗರ ಅರಸ ೧ನೆಯ ದೇವರಾಯನ ಕಾಲಕ್ಕೆ ಸೇರಿದ್ದಾಗಿದೆ. ಬಸದಿಯ ಆಚಾರ್ಯರನ್ನು ಕುರಿತು ಉಲ್ಲೇಖಿಸುತ್ತದೆ.

ಲಕ್ಷ್ಮೇಶ್ವರದ ಶಂಖ ಬಸದಿಯಲ್ಲಿ ಆದಿ ಕವಿ ಪಂಪನು 'ಆದಿಪುರಾಣ'ವನ್ನು ರಚಿಸಿದನೆಂದು ಪ್ರತೀತವಿದೆ. ಲಕ್ಷ್ಮೇಶ್ವರದ ಹಳೆಯ ತಾಲೂಕು ಕಚೇರಿಯ ಹಿಂದಿರುವ ಕ್ರಿ.ಶ. ೧೧೩೮ರ[೨೩] ಶಾಸನದಲ್ಲಿ ಶಂಖಬಸದಿಯ ಜೈನ ಮತ್ತು ಸೋಮನಾಥ ದೇವಾಲಯದ ಶೈವ ಸಮುದಾಯದ ನಡುವಿನ ಕಲಹ ಅಥವಾ ವ್ಯಾಜ್ಯವನ್ನು ಜೈನರ ಪರವಾಗಿ ನಿರ್ಣಯಿಸಿದ ಉಲ್ಲೇಖವಿದೆ.

ಪ್ರಾಚೀನ ಕರ್ನಾಟಕದಲ್ಲಿ ಪ್ರಬಲವಾಗಿದ್ದ ಎರಡು ಭಿನ್ನ ಪಂಥಗಳಲ್ಲಿ ವ್ಯಾಜ್ಯಗಳು ನಡೆದು ಒಂದು ಕೋಮಿನ ಪರವಾಗಿ ನ್ಯಾಯ ನಿರ್ಣಯವಾಗಿರುವುದು ಚರ್ಚೆಯ ಸಂಗತಿಯಾಗಿದೆ. ಲಕ್ಷ್ಮೇಶ್ವರದ ಸೋಮನಾಥ

---

೨೨. KI Vol. I, No. 14. ಕ್ರಿ.ಶ. ೬೮೩ರ ವಿನಯಾದಿತ್ಯನ ಕಾಲದ ಲಕ್ಷ್ಮೇಶ್ವರದ ಶಾಸನಗಳು.

೨೩. SII Vol. XX Page 282-84.

ದೇವಾಲಯದಲ್ಲಿದ್ದ ಜೈನ ಮೂರ್ತಿಯನ್ನು ಭಗ್ನಗೊಳಿಸಿ ಶಿವನ ಮೂರ್ತಿಯನ್ನು ಆದಯ್ಯನು ಪ್ರತಿಷ್ಠಾಪಿಸಿದನೆಂದು ಹರಿಹರನ ಆದಯ್ಯನ ರಗಳೆ, ಪಾಲ್ಕುರಿಕೆ ಸೋಮನಾಥನ, "ಪಂಡಿತರಾಧ್ಯ ಚರಿತ್ರಂ" ಭೀಮಕವಿಯ "ಬಸವ ಪುರಾಣ" ಮತ್ತು "ವೀರಶೈವಾಮೃತ ಪುರಾಣ" ಲಕ್ಕಣ್ಣ ದಂಡೇಶನ "ಶಿವತತ್ವಚಿಂತಾಮಣಿ", ರಾಘವಾಂಕನ "ಸೋಮನಾಥ ಚರಿತ" ಎಂಬ ಮುಂತಾದ ನಡುಗನ್ನಡ ಸಾಹಿತ್ಯ ಕೃತಿಗಳಲ್ಲಿ ಪ್ರಸ್ತಾಪಿಸಲಾಗಿದೆ. ಹೊರತು ಯಾವುದೇ ಶಾಸನಗಳ ಆಧಾರವಿಲ್ಲ, ಮೂಲತಃ ಜೈನಬಸದಿಯಾಗಿದ್ದ ಈಗೀನ ಸೋಮೇಶ್ವರ ದೇವಾಲಯ ಪ್ರಾಚೀನ ಕಾಲದ ಶಾಸನಗಳು ನೀಡುವ ಆಧಾರದಲ್ಲಿ ಸುರಹೊನ್ನ ಬಸದಿಯಾಗಿತ್ತು. ರಾಜಕೀಯ ಹಾಗೂ ಸ್ಥಳೀಯ ಅನ್ಯಮತದ ಪ್ರಭಾವದಿಂದ ಅಲ್ಲಿ ಇಂದು ಜೈನಶಿಲ್ಪಿ ಅಥವಾ ಜಿನಬಿಂಬ ಜೈನಧರ್ಮಕ್ಕೆ ಸಂಬಂಧಿಸಿದ ಕುರುಹುಗಳ ಇಲ್ಲ ಆದರೆ ಅದಯ್ಯನು ಸೌರಾಷ್ಟ್ರದಿಂದ ಪುಲಿಗೆರೆಗೆ ಬಂದು ಇಲ್ಲಿಯ ವ್ಯಾಪಾರಿ ಜೈನ ಪಾರಿಶೆಟ್ಟಿಯ ಮಗಳ ಪದ್ಮವತಿಯನ್ನು ಮೋಹಿಸಿ ಮದುವೆಯಾದ ಮೇಲೆ ಸೌರಾಷ್ಟ್ರದ ಸೋಮೇಶ್ವರನನ್ನು ಪುಲಿಗೇರಿಗೆ ತಂದು ಪ್ರತಿಷ್ಟಾಪಿಸಿದನೆಂದು ಸಾಹಿತ್ಯಿಕ ಕೃತಿಗಳಲ್ಲಿ ಮಾತ್ರ ಪ್ರಸ್ತಾಪವಿದೆ.[೨೪]

ಪ್ರಾಚೀನ ಕರ್ನಾಟಕದಲ್ಲಿ ಶೈವ ಮತ್ತು ಜೈನ ಸಮುದಾಯದವರ ನಡುವೆ ಮತೀಯ ಸಂಘರ್ಷಗಳು ಆಗಾಗ ನಡೆಯುತ್ತಿದ್ದವು. ಆ ಧರ್ಮಿಯರು ಹೊಂದಿದ್ದ ಬಲಗಳ ಮೇಲೆ ನಿರ್ಣಯಗಳು ಆಗುತ್ತಿದ್ದವು. ಎಂಬುದು ಜೈನರು ಸುರಹೊನ್ನ ಬಸದಿಯನ್ನು ಕಳೆದುಕೊಂಡಿದ್ದೆ ಸಾಕ್ಷಿ ಎನಿಸುತ್ತದೆ.

ಹೀಗೆ ಪುಲಿಗೆರೆಯು ಒಂದು ಪ್ರಸಿದ್ಧ ಜೈನ ಧರ್ಮದ ಕೇಂದ್ರವಾಗಿ ಬೆಳೆದು ಇಂದಿಗೂ ಸಹ ಜೈನ ಧರ್ಮ ಪವಿತ್ರ ಕೇಂದ್ರವೆನಿಸಿದೆ. ಇಲ್ಲಿರುವ ಶಂಖ ಬಸದಿ ಹಾಗೂ ಅನಂತನಾಥ ಬಸದಿಗಳು ಸುಸ್ಥಿತಿಯಲ್ಲಿದ್ದು ಜೈನ ಮತ್ತು ಜೈನೇತರ ಧರ್ಮಿಯರ ಸಾಮರಸ್ಯ ಜೀವನಕ್ಕೆ ಮಾದರಿಯಾಗಿ ನಿಂತಿವೆ. ಇಲ್ಲಿರುವ ಅನೆಸಜ್ಜೆ ಬಸದಿ ಶ್ರೀ ವಿಜಯ ಬಸದಿ ಮರುದೇವಿ ಬಸದಿ ಪೆರ್ಮಾಡಿ ಬಸದಿ ಶಾಂತಿನಾಥ ಬಸದಿ ಮುಕ್ಕರ ಬಸದಿ ಸುರಹೊನ್ನಯ ಬಸದಿ ಹೀಗೆ ಹಲವಾರು ಬಸದಿಗಳ ಉಲ್ಲೇಖ ಶಾಸನಗಳಲ್ಲಿ ಇದ್ದರೂ ಅವುಗಳಲ್ಲಿ ಕೆಲವು ನಾಶವಾಗಿವೆ. ಕೆಲವು ಜೀರ್ಣಾವಸ್ಥೆಯಲ್ಲಿವೆ. ಇನ್ನೂ ಕೆಲವು ಇದ್ದು ಇಲ್ಲದಂತಿವೆ, ಯಾವುದೇ ಕುರುಹುಗಳು ಪತ್ತೆಯಾಗಿಲ್ಲ.

**೯. ಶಂಖ ಜಿನಾಲಯ ಲಕ್ಷ್ಮೇಶ್ವರ :**

ಗದಗ ಜಿಲ್ಲೆಯ ಶಿರಹಟ್ಟಿ ತಾಲೂಕಿನಲ್ಲಿರುವ ಲಕ್ಷ್ಮೇಶ್ವರವು ಪ್ರಾಚೀನ ಕಾಲದಲ್ಲಿ ಪುಲಿಗೇರೆ-೩೦೦ರ ರಾಜಧಾನಿಯಾಗಿ ಜೈನ ಧರ್ಮದ ಪ್ರಮುಖ ಕೇಂದ್ರವಾಗಿ ಮೆರೆದ ಕೀರ್ತಿ ಈ ಪಟ್ಟಣಕ್ಕೆ ಇದೆ. ಗದಗಿನಿಂದ ೩೬ಕಿ.ಮೀ. ದಕ್ಷಿಣಕ್ಕೆ ಶಿರಹಟ್ಟಿಯಿಂದ ೧೬ ಕಿ.ಮೀ. ನೈರುತ್ಯಕ್ಕಿರುವ ಈ ಗ್ರಾಮ ಪುಲಿಗೇರಿ, ಹುಲಿಗೆರೆ, ಪುಲಿಕನಗರ ಎಂದು ಶಾಸನೋಕ್ತವಾದ ಇಂದಿನ ಲಕ್ಷ್ಮೇಶ್ವರಕ್ಕೆ 'ಲಕ್ಷ್ಮರಸ' ಎಂಬ ಅರಸನು ನಿರ್ಮಿಸಿದ ಲಕ್ಷ್ಮಣೇಶ್ವರ ದೇವಾಲಯದ

೨೪. ಡಾ. ಎಂ. ಎಂ. ಕಲಬುರ್ಗಿ-ಶಾಸನಗಳಲ್ಲಿ ಶಿವಶರಣರು

ಪ್ರಸಿದ್ಧತೆಯಿಂದ ಲಕ್ಷ್ಮೇಶ್ವರ ಎಂಬ ಹೆಸರು ಪ್ರಾಪ್ತವಾಯಿತು. ಇಲ್ಲಿ ಜೈನ, ಶೈವ ಹಾಗೂ ವೈಷ್ಣವ ಧರ್ಮದ ಪ್ರಭಾವವಿರುವದರಿಂದ ಐತಿಹಾಸಿಕ ಸ್ಮಾರಕಗಳ ಬೀಡು ಇದಾಗಿದೆ. ಇಲ್ಲಿರುವ ಶಂಖನಾಥ ಬಸದಿಯು ಪ್ರಮುಖವಾದದ್ದು.

ಬದಾಮಿ ಚಾಲುಕ್ಯರ ಕಾಲಕ್ಕೂ ಮೊದಲೇ ನಿರ್ಮಾಣವಾಗಿರಬಹುದಾದ ಶಂಖ ಬಸದಿಯು ಗರ್ಭಗೃಹ, ನವರಂಗ ಹಾಗೂ ವಿಶಾಲವಾದ ಮುಖಮಂಟಪ ಹೊಂದಿದೆ. ಗರ್ಭಗೃಹವು ಚೌಕಾಕಾರದ ಸ್ಥಳ ವಿನ್ಯಾಸ ಹೊಂದಿದ್ದು ಪ್ರಾಚೀನ ಲಕ್ಷಣವುಳ್ಳ ಜೈನ ಪಾಣಿ ಪೀಠದ ಮೇಲೆ ಧ್ಯಾನ ಮುದ್ರೆಯಲ್ಲಿ ಆಸೀನನಾದ ನೇಮಿನಾಥ ತೀರ್ಥಂಕರ ವಿಗ್ರಹವನ್ನು ಇತ್ತೀಚೆಗೆ ೧೯೮೭ರಲ್ಲಿ ಪ್ರತಿಷ್ಠಾಪಿಸಲಾಗಿದೆ. ಗರ್ಭಗೃಹದ ಬಾಗಿಲವಾಡದ ಇಕ್ಕೆಲಗಳಲ್ಲಿ ಜ್ವಾಲಾಮಾಲಿನಿ ಹಾಗೂ ಇತರ ಯಕ್ಷ-ಯಕ್ಷಣಿಯರ ನಂತರದ ಕಾಲದ ಚಿತ್ರಗಳಿವೆ. ನವರಂಗದಲ್ಲಿ ಎರಡು ಕೊಠಡಿಗಳಿದ್ದು ಬಲಭಾಗದ ಕೊಠಡಿಯಲ್ಲಿ ಧರಣೇಂದ್ರ ಹಾಗೂ ಪದ್ಮಾವತಿ ವಿಗ್ರಹಗಳನ್ನು ಚಾಲುಕ್ಯ ಶೈಲಿಯ ಪಾಣಿಪೀಠದ ಮೇಲೆ ಪ್ರತಿಷ್ಠಾಪಿಸಲಾಗಿದೆ. ಬಸದಿಯ ಮಹಾದ್ವಾರವು ಚಾಲುಕ್ಯ ಶೈಲಿಯ ವಿಫುಲವಾದ ಅಲಂಕಾರವನ್ನು ಹೊಂದಿದ್ದು ಇಕ್ಕಲುಗಳಲ್ಲಿ ಜಾಲಾಂಧ್ರಗಳಿವೆ. ಲಲಾಟದಲ್ಲಿ ಚಾಲುಕ್ಯ ಶೈಲಿಯ ಮುಕ್ಕೊಡೆಯಿರುವ ಜಿನ ಬಿಂಬವಿದೆ. ಲಕ್ಷ್ಮೇಶ್ವರದ ಅತ್ಯಂತ ಪ್ರಾಚೀನ ಹಾಗೂ ಪ್ರಭಾವಿ ಬಸದಿ ಶಂಖ ಬಸದಿಯಾಗಿದೆ.

ಈ ಬಸದಿಯಲ್ಲಿ ಶಾಂತಿನಾಥನ ಪ್ರತಿಷ್ಠಾಪನೆಯಾಗಿರಬಹುದೆಂದು ಸುಲಭವಾಗಿ ಊಹೆ ಮಾಡಬಹುದು. ಶಾಂತಿನಾಥನ ಲಾಂಛನವಾದ ಶಂಖದಿಂದ ಬಸದಿಯ ಹೆಸರು ಶಂಖ ಬಸದಿಯಾಯಿತು. ಈ ಬಸದಿಯ ಅನ್ವರ್ಥ ನಾಮಗಳಾಗಿ 'ಜಿನ ಭಟ್ಟಾರಕ ಜಿನಾಲಯ'ವೆಂದು ಒಂದು ಶಾಸನದಲ್ಲಿ ಕರೆದರೆ ಇನ್ನೊಂದು ಶಾಸನದಲ್ಲಿ "ಶಂಖದ ಬಸ್ತಿ"ಯೆಂದು ಮತ್ತೊಂದು ಶಾಸನದಲ್ಲಿ ಶಂಖದ ಬಸ್ತಿ ಎಂದು ಕರೆಯಲಾಗಿದೆ. ಶಂಖ ಬಸದಿಯ ಶಾಂತಿನಾಥನಲ್ಲದೇ ಲಕ್ಷ್ಮೇಶ್ವರದ ಚತುರ್ಮುಖ ಜಿನಾಲಯದ ಶಾಂತಿನಾಥನ ಉಲ್ಲೇಖ ಬರುವುದು. ಈ ಉಲ್ಲೇಖಗಳು ಒಂದೇ ದೇವಾಲಯಕ್ಕಾಗಿದ್ದವೋ ಇಲ್ಲವೋ ತಿಳಿಯದು. ಶಂಖ ಬಸದಿಯ ಚತುರ್ಮುಖ ಬಸದಿಯಾಗಿರಲಿಕ್ಕಿಲ್ಲವೆನಿಸಲು ಕಾರಣಗಳ ಕೊರತೆ ಇರುವದರಿಂದ ಈ ನಗರದಲ್ಲಿ ಎರಡು ಶಾಂತಿನಾಥನ ಮಂದಿರಗಳು ಇದ್ದವೆಂದು ತಿಳಿಯಬಹುದು. ಈ ದೇವಾಲಯ ಮೂಲಸಂಘ ದೇವಗಣಕ್ಕೆ ಸೇರಿತ್ತು.

ಶಂಖಬಸದಿಯಲ್ಲದೇ ಹಲವಾರು ದೇವಾಲಯಗಳು ನಗರದ ವಿವಿಧ ಭಾಗಗಳಲ್ಲಿದ್ದವು. ಎಂಬುದನ್ನು ಶಾಸನಗಳಿಂದ ತಿಳಿಯಬಹುದು. ೮ನೆಯ ಶತಮಾನದ ಆದಿಭಾಗದೊಳಗಾಗಿ ಧವಳ ಜಿನಾಲಯ ನಿರ್ಮಾಣವಾಗಿತ್ತು. ಇದು ಶಂಖ ಬಸದಿಯ ಪರಿಸರದಲ್ಲಿದ್ದಂತೆ ತಿಳಿಯುತ್ತದೆ. ೧೦ನೆಯ ಶತಮಾನದ ಮಧ್ಯದೊಳಗಾಗಿ ಗಜ ಚೈತ್ಯಾಲಯ, ಮುಕ್ಕರ ಬಸದಿ, ರಾಯರಾಚಮಲ್ಲಬಸದಿ, ಶ್ರೀ ವಿಜಯ ಬಸದಿ, ಗಂಗ ಕನ್ದರ್ಪ ಬಸದಿಗಳನ್ನು ಸ್ಥಾಪಿಸಲಾಗಿತ್ತು. ಗಂಗಕನ್ದರ್ಪ ಬಸದಿಯನ್ನು ಗಂಗಪೆರ್ಮಾಡಿ ಚೈತ್ಯಾಲಯವೆಂದೂ ಗಜ್ಜ ಕನ್ದರ್ಪ ಭೂಪಾಳ ಜಿನೇಂದ್ರ ಮಂದಿರವೆಂದೂ ಶಾಸನದಲ್ಲಿ ಕರೆಯಲಾಗಿದೆ. ಕ್ರಿ.ಶ. ೧೦೭೪ರಲ್ಲಿ ಮಹಾಸಾಮಂತ ಜಯಕೇಶಿ

ಕಾಲದ ಜೈನಬಸದಿಯಾಗಿರುವ ಸಾಧ್ಯತೆಗಳಿವೆ. ಆದ್ದರಿಂದ ಸಂಶೋಧನೆ ನೋಡುತ್ತಂ ಪೆರ್ಮಾಡಿಯ ಬಸದಿಗೆ ಬಂದು ಈ ಜೈನ ವಸತಿ ಪುರವನ್ನು ಪುನ ನಿರ್ಮಾಣ ಮಾಡಿದನೆಂದು ವಿವರಿಸಲಾಗಿದೆ. ಇಲ್ಲಿಯ ಪೆರ್ಮಾಡಿ, ಬಸದಿ, ಗಂಗಪೆರ್ಮಾಡಿ ಅಥವಾ ಗಜ್ಜಪನ್ದಿರ್ಪ್ಪ ಭೂಪಾಳ ಜಿನಮಂದಿರ ಒಂದೇ ಎಂದು ಸುಲಭವಾಗಿ ಊಹೆ ಮಾಡಬಹುದು. ೧೦ನೆಯ ಶತಮಾನದ ಶಾಸನದಲ್ಲಿಯ ಗಜಚೈತ್ಯಾಲಯವು ೧೧ನೆಯ ಶತಮಾನದ ಮತ್ತೊಂದು ಶಾಸನದಲ್ಲಿ ಹೆಸರಿಸಿದ ಆನೆಸಜ್ಜೆಯ ಬಸದಿ ಒಂದೇ ಆಗಿರಲು ಸಾಧ್ಯ.

ಈ ಬಸದಿಗಳಲ್ಲದೇ ೧೧೩೨ರ ಸುಮಾರಿಗೆ ಗೊಗ್ಗಿಯ ಬಸದಿ ಎಂಬ ಮತ್ತೊಂದು ದೇವಾಲಯ ನಿರ್ಮಾಣವಾಗಿತ್ತು. ಆಚಾರ್ಯರಾದ ಇಂದ್ರಕೀರ್ತಿ ಪಂಡಿತರು ಹೆಗ್ಗಡೆ ಮಲ್ಲಯಣ್ಣನು ಇನ್ನುಳಿದ ಪ್ರತಿಷ್ಠಿತರು ಈ ಬಸದಿಯ ಪರಿಸರದಲ್ಲಿ ಮನೆಯನ್ನು ಕಟ್ಟಲು ಹಲವು ಕಟ್ಟಳೆಗಳನ್ನು ಮತ್ತು ದೇವಾಲಯಕ್ಕೆ ಅವರು ಕೊಟ್ಟ ದತ್ತಿಯ ಬಗ್ಗೆ ವಿವರಗಳು ತಿಳಿದು ಬಂದಿವೆ. ೧೨೫೫ರಲ್ಲಿ ಈ ದೇವಾಲಯವು ಉಚ್ಛ್ರಾಯ ಸ್ಥಿತಿಯಲ್ಲಿತ್ತು. ಯಾದವ ರಾಮದೇವರ ಕಾಲದಲ್ಲಿ ಹೇಮದೇವರು ಈ ಬಸದಿಯ ಆಚಾರ್ಯರಾಗಿದ್ದು ಅವರು ಚತುರ್ಮುಖ ಬಸದಿಯ ಶಾಂತಿನಾಥ ದೇವರಿಗೆ ಬಿಟ್ಟ ದತ್ತಿಯಲ್ಲಿ ಭಾಗಿಗಳಾಗಿದ್ದರು.

೧೦ನೆಯ ಶತಮಾನದಲ್ಲಿ ಅದಕ್ಕಿಂತ ಪೂರ್ವದಲ್ಲಿ ಸ್ಥಾಪಿತವಾದ ಶ್ರೀ ವಿಜಯ ಬಸದಿಯು (೯೬೮–೬೯) ೧೨೪೭ರಲ್ಲಿ ಜೀರ್ಣವಾದಂತೆ ತೋರುವುದು. ಮಹಾಪ್ರಧಾನಿ ಬೀಚಿರಾಜರ ಪುತ್ರಿ ರಾಜಲಾದೇವಿ "ನಿಜಗುರೂಪದೇಶದಿಂ" ಈ ದೇವಾಲಯವನ್ನು ಪೊಸತಾಗೆ ಮಾಡಿಸಿ ಅದಕ್ಕೆ ದಾನ ಮಾಡಿದ ಉಲ್ಲೇಖ ಶಾಸನಗಳಲ್ಲಿದೆ.[೨೫] ೧೩ನೆಯ ಶತಮಾನದ ಅಂತ್ಯದೊಳಗಾಗಿ ಚತುರ್ಮುಖ ಬಸದಿಯನ್ನು ಕಟ್ಟಿಸಿ ಶಾಂತಿನಾಥನನ್ನು ಪ್ರತಿಷ್ಠಾಪಿಸಲಾಗಿತ್ತು. ಈ ಬಸದಿಯೂ ಸೌರಾಷ್ಟ್ರಗಣ, ಚಿತ್ರಕೂಟಾನ್ವಯಕ್ಕೆ ಸೇರಿತ್ತು.

### ೧೦. ಅನಂತನಾಥ ಬಸದಿ – ಲಕ್ಷ್ಮೇಶ್ವರ :

ಲಕ್ಷ್ಮೇಶ್ವರದಲ್ಲಿರುವ ಇನ್ನೊಂದು ಪ್ರಮುಖ ಬಸದಿ ಎಂದರೆ ಊರಿನ ಮಧ್ಯದಲ್ಲಿರುವ ಅನಂತನಾಥ ಬಸದಿಯು ತ್ರಿಕೂಟಾಚಲವಾಗಿದ್ದು ಚಾಲುಕ್ಯ ಶೈಲಿಯ ಸುಂದರ ವಾಸ್ತುಶಿಲ್ಪವಾಗಿದೆ. ಇದರಲ್ಲಿ ಮೂರು ಗರ್ಭಗೃಹಗಳು, ಮೂರು ಅಂತರಾಳಗಳ ಮಧ್ಯದಲ್ಲಿ ನವರಂಗ ಹಾಗೂ ಮುಂಭಾಗದಲ್ಲಿ ವಿಶಾಲವಾದ ಮುಖಮಂಟಪವಿದೆ. ಮೂಲ ಗರ್ಭಗೃಹದಲ್ಲಿ ಕಲ್ಯಾಣದ ಚಾಲುಕ್ಯರ ಶೈಲಿಯ ಪಾಣಿಪೀಠದ ಮೇಲೆ ಸ್ಥಾನಿಕ ಅನಂತನಾಥ ತೀರ್ಥಂಕರರ ವಿಗ್ರಹವಿದ್ದು ಹಿಂಭಾಗದಲ್ಲಿ ಸಾಧಾರಣವಾದ ಪ್ರಭಾವಳಿಯ ಮೇಲ್ಭಾಗದಲ್ಲಿ ಮುಕ್ಕೊಡೆ ಇದೆ. ಎಡಭಾಗದಲ್ಲಿ ಗರ್ಭಗೃಹದಲ್ಲಿ ಚಾಲುಕ್ಯ ಪಾಣಿಪೀಠದ ಮೇಲೆ ಚಂದ್ರಪ್ರಭ ತೀರ್ಥಂಕರರ ವಿಗ್ರಹವಿದ್ದು ಹಿಂಬಾಗದಲ್ಲಿ ಮರಕತೋರಣದಿಂದ ಅಲಂಕೃತವಾದ ಪ್ರಭಾವಳಿ ಇದೆ. ಬಲಭಾಗದ ಗರ್ಭಗೃಹದಲ್ಲಿ

---

೨೫. ಧಾರವಾಡ ಜಿಲ್ಲಾ ಗ್ಯಾಝೆಟಿಯರ್, ಪು. ೫೪, SII-XV, No. 66.

ಚಾಲುಕ್ಯ ಶೈಲಿಯ ಪಾರ್ಶ್ವನಾಥನ ಮೂರ್ತಿಯಿದ್ದು ಹಿಂಭಾಗದಲ್ಲಿ ವಿಪುಲವಾದ ಅಲಂಕಾರವಿರುವ ನಾಗಪ್ರಭಾವಳಿಯಿದೆ. ಇಲ್ಲಿಯ ಎಲ್ಲ ಅಂತರಾಳಗಳ ಬಾಗಿಲು ವಾಡಗಳೂ ಅಲಂಕೃತವಾಗಿದ್ದು ಇಕ್ಕೆಲುಗಳಲ್ಲಿ ಜಾಲಾಂಧ್ರಗಳನ್ನು ಹೊಂದಿವೆ. ಈ ಬಸದಿಯಲ್ಲಿ ಅನೇಕ ಜೈನ ತೀರ್ಥಂಕರರ ಕಂಚಿನ ಪ್ರತಿಮೆಗಳಿವೆ.

ಅನಂತ ಸ್ವಾಮಿ ಬಸದಿಯು ಕ್ರಿ.ಶ. ೧೨೫೦ರಲ್ಲಿ[೨೬] ಈ ಬಸದಿಯ ನಿರ್ಮಾಣಗೊಂಡಿದ್ದು ಈ ಭಾಗದ ಜೈನರು ಅನಂತ ಹುಣ್ಣಿಮೆಯಂದು ಈ ಬಸದಿಗೆ ಪೂಜೆ ಸಲ್ಲಿಸುತ್ತಾರೆ. ನವರಂಗದಲ್ಲಿ ಸುಂದರ ಆಕರ್ಷಕ ಕಂಬಗಳಿವೆ. ಎಡಭಾಗದಲ್ಲಿ ಬ್ರಹ್ಮೇಂದ್ರ ಮತ್ತು ಬಲಭಾಗದಲ್ಲಿ ಪದ್ಮಾವತಿ ಯಕ್ಷಿಯ ವಿಗ್ರಹಗಳನ್ನು ಸ್ಥಾಪಿಸಲಾಗಿದೆ. ಇತ್ತೀಚೆಗೆ ಸಂಗಮರಿ ಕಲ್ಲಿನ ಮಹಾವೀರ, ಪಾರ್ಶ್ವನಾಥ ಹಾಗೂ ಇತರ ತೀರ್ಥಂಕರರ ವಿಗ್ರಹಗಳನ್ನು ಸ್ಥಾಪಿಸಲಾಗಿದೆ.

## ೧೧. ಪ್ರಥಮೋಪದೇಶ ತೀರ್ಥಂಕರನ ಶಿಲ್ಪ – ಲಕ್ಷ್ಮೇಶ್ವರ :

ಪುಲಿಗೆರೆ-೩೦೦ರ ಆಡಳಿತ ಪ್ರಾಂತದ ರಾಜಧಾನಿಯಾಗಿದ್ದ ಲಕ್ಷ್ಮೇಶ್ವರವು ಸಮಕಾಲೀನ ವಿಭಿನ್ನ ಧರ್ಮಗಳ ಪೈಪೋಟಿ ಕೇಂದ್ರವಾಗಿದ್ದು ಈ ನಗರವು ೧೩ನೆಯ ಶತಮಾನದವರೆಗೆ ಪ್ರಸಿದ್ಧ ಜೈನ ಕೇಂದ್ರವಾಗಿ ಮೆರೆದಿದೆ. ಈ ನಗರದಲ್ಲಿ ದೊರೆತ ಪ್ರಥಮೋಪದೇಶ ತೀರ್ಥಂಕರನ ಶಿಲ್ಪವನ್ನು ಗದಗ ನಗರದಲ್ಲಿರುವ ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯ ಇಲಾಖೆಯ ವಸ್ತು ಸಂಗ್ರಹಾಲಯದಲ್ಲಿ ತಂದಿಡಲಾಗಿದೆ. ಪ್ರತಿಮಾ ಲಕ್ಷಣಗಳು ಮತ್ತು ಧಾರ್ಮಿಕ ಇತಿಹಾಸದ ಅಧ್ಯಯನದ ದೃಷ್ಟಿಯಿಂದ ಅಪರೂಪವಾಗಿರುವ ಈ ಶಿಲ್ಪದ ಲಕ್ಷಣಗಳು ಹಾಗೂ ಇದರ ಪಾದಪೀಠದ ಮೇಲಿರುವ ಅಪ್ರಕಟಿತ ಶಾಸನದ ಪಾಠ, ಸಾರಾಂಶ, ಮಹತ್ವವನ್ನು ಕುರಿತು ಈ ಮುಂದೆ ವಿವರಿಸಲಾಗಿದೆ.

ಕ್ರಿ.ಶ. ೧೩ನೆಯ ಶತಮಾನದ ಈ ಶಿಲ್ಪವು ೧೦೩ ಸೇಂ.ಮೀ. ಎತ್ತರ ಮತ್ತು ೬೩ ಸೇಂ.ಮೀ. ಅಗಲವಾಗಿದೆ. ಇದು ಕಪ್ಪು ಮಿಶ್ರಿತ ನೀಲಿಛಾಯೆಯ ಬಳಪದ ಶಿಲೆಯಲ್ಲಿ ಕಂಡರಿಸಲ್ಪಟ್ಟಿದೆ. ಸಿಂಹಪೀಠದ ಮೇಲೆ ಪರ್ಯಂಕಾಸನದಲ್ಲಿ ಆಸೀನವಾಗಿರುವ ತೀರ್ಥಂಕರನು ಧ್ಯಾನಮುದ್ರೆಯಲ್ಲಿದ್ದಾನೆ. ಈತನ ಶಿರದ ಹಿಂಬದಿಯಲ್ಲಿ ಪ್ರಭಾಮಂಡಲವಿದ್ದು ಮೇಲ್ಭಾಗದಲ್ಲಿ ರತ್ನತ್ರಯದ ಪ್ರತೀಕವಾದ ಮುಕ್ಕೊಡೆಯಿದೆ. ಪಾರ್ಶ್ವಗಳಲ್ಲಿ ಇಬ್ಬರು ದ್ವಿಭುಜ ಚಾಮರಧರರು. ಒಂದು ಕೈಯಲ್ಲಿ ಚಾಮರ ಮತ್ತೊಂದು ಕೈಯಲ್ಲಿ ಬೀಜ ಪೂರವನ್ನು ಹಿಡಿದುಕೊಂಡು ದ್ವಿಭಂಗಿಯಲ್ಲಿ ನಿಂತಿದ್ದಾರೆ. ಇವರು ಕೀರಿಟ, ಮುಕುಟ, ಕರ್ಣಕುಂಡಲ, ಕಂಠಹಾರ, ಮಣಿಸರ, ತಾಳಬಂದಿ, ಕಟಿವಸ್ತ್ರ ಮೊದಲಾದ ವಸ್ತ್ರಾಭರಣಗಳನ್ನು ಧರಿಸಿದ್ದಾರೆ. ತೀರ್ಥಂಕರನ ಶಿರದ ಹಿಂಭಾಗ ಮತ್ತು ಮೇಲ್ಭಾಗದಲ್ಲಿ ಅರಳುತ್ತಿರುವ ಮೊಗ್ಗುಗಳ ಚೈತ್ಯವೃಕ್ಷ, ಜಯಕೇಶಿಯು 'ಶ್ರೀಶಂಖ ತೀರ್ತ್ವದಿ ಜೈನ ಮಂದಿರಂಗಳು ವನ್ದನಾಭಕ್ತಿಪೂರ್ವಕಂ ನೋಡುತ್ತಂ' ಪುಷ್ಪವೃಷ್ಠಿ, ದಿವ್ಯಧ್ವನಿ, ಚಾಮರ, ಸಿಂಹಾಸನ, ಪ್ರಭಾಮಂಡಲ, ದುಂದುಭಿ, ಮುಕ್ಕೊಡೆ, ಶೋಭಿತವಾಗಿರುವ ಈ ಶಿಲ್ಪವು ಪ್ರಸ್ತುತ ತೀರ್ಥಂಕರನು ಕೇವಲ ಜ್ಞಾನದ ತರುವಾಯ ಸಮವಸರಣ

---

೨೬. ಕ್ರಿ.ಶ. ೧೨೫೦ರ ಲಕ್ಷ್ಮೇಶ್ವರ ಶಾಸನ.

ಮಂಟಪದಲ್ಲಿ ಆಸೀನನಾಗಿ ಸಕಲ ಜೀವಿಗಳನ್ನುದ್ದೇಶಿಸಿ ಪ್ರಥಮೋಪದೇಶದಲ್ಲಿ ನಿರತನಾಗಿರುವ ಪರಿಕಲ್ಪನೆಯಲ್ಲಿ ಮೂಡಿ ಬಂದಿದೆ. ಸಿಂಹಪೀಠದ ಮುಮ್ಮುಖದಲ್ಲಿರುವ, ಸಿಂಹಗಳ ಮತ್ತು ಇದರ ಪಾರ್ಶ್ವಗಳಲ್ಲಿರುವ ಆನೆಗಳು, ತೀರ್ಥಂಕರನ ಅಂಗೋಪಾಂಗಗಳು ಹಾಗೂ ಅರಳುತ್ತಿರುವ ಚೈತ್ಯವೃಕ್ಷವನ್ನು ನೈಜವಾಗಿ ತೋರಿಸಲು ಅಂದಿನ ಶಿಲ್ಪಿಯ ಪ್ರಯತ್ನ ಯಶಸ್ವಿಯಾಗಿದೆ.

ಪ್ರಸ್ತುತ ತೀರ್ಥಂಕರನು ಆಸೀನವಾಗಿರುವ ಸಿಂಹ ಪೀಠದ ಪಟ್ಟಿಕೆಯ ಮೇಲೆ ಒಂದು ಸಾಲಿನ ಕನ್ನಡ ಲಿಪಿ ಮತ್ತು ಶಾಸನವಿದೆ. ಇದು ಜೈನ ಧರ್ಮದಲ್ಲಿ ಅಂದು ಪ್ರಚಲಿತದಲ್ಲಿದ್ದ ಮೂಲಸಂಘ ಮತ್ತು ದೇವಗಣ ಪರಂಪರೆಯನ್ನು ಉಲ್ಲೇಖಿಸಿದೆ.

ಹೀಗೆ ಪ್ರಸಿದ್ಧ ಜೈನ ಕೇಂದ್ರವಾಗಿದ್ದ ಲಕ್ಷ್ಮೇಶ್ವರದಲ್ಲಿ ಅರಸರು, ರಾಣಿಯರು, ಆಡಳಿತಾಧಿಕಾರಿಗಳು ಶ್ರಾವಕರು, ಜೈನಾಭಿಮಾನಿಗಳು ಜೈನ ಧರ್ಮದ ತತ್ವ ಸಿದ್ಧಾಂತಗಳು ಮುನಿಗಳು ಮತ್ತು ಭಟ್ಟಾಕರ ಉಪದೇಶಗಳಿಂದ ಪ್ರೇರಿತರಾಗಿ ಅನೇಕ ಜಿನಾಲಯಗಳನ್ನು ನಿರ್ಮಿಸಿ ಅವುಗಳ ಜೀರ್ಣೋದ್ಧಾರ, ಪೂಜೆ, ಪುರಸ್ಕಾರ ಮುನಿಗಳ ಆಹಾರ ದಾನ, ಧಾರ್ಮಿಕ ಮತ್ತು ಸಾಮಾಜಿಕ ಚಟುವಟಿಕೆಗೆ ಉದಾರವಾಗಿ ದಾನ ದತ್ತಿಗಳನ್ನು ಕೊಡಮಾಡಿದ್ದಾರೆ. ಇಂದು ಶಂಖ ಜಿನಾಲಯ ಮತ್ತು ಅನಂತನಾಥ ಜಿನಾಲಯ ಎರಡೇ ಲಕ್ಷ್ಮೇಶ್ವರದಲ್ಲಿ ಉಳಿದು ಬಂದಿವೆ. ಉಳಿದವುಗಳು ಯಾವುದೇ ಒಂದು ಕಾಲಘಟ್ಟದಲ್ಲಿ ಜರುಗಿದ ಧಾರ್ಮಿಕ, ಸಾಮಾಜಿಕ ಮತ್ತು ರಾಜಕೀಯ ಘರ್ಷಣೆಗಳಲ್ಲಿ ಹಾಗೂ ಪ್ರಾಕೃತಿಕ ವಿಕೋಪಗಳಿಂದ ಸಮೂಲ ನಾಶವಾಗಿವೆ. ಇಲ್ಲಿ ಯಾಪನೀಯ ಮತ್ತು ಮೂಲಸಂಘ ಎರಡೂ ಪರಂಪರೆಗಳ ಮುನಿಗಳು ಧರ್ಮಪ್ರಸಾರ ಕೈಗೊಂಡಿದ್ದಾರೆ. ಈ ನಿಟ್ಟಿನಲ್ಲಿ ಪ್ರಸ್ತುತ ಪ್ರಥಮೋಪದೇಶ ತೀರ್ಥಂಕರನ ಶಿಲ್ಪ ಮತ್ತು ಇದರ ಪಾದ ಪೀಠದ ಮೇಲಿರುವ ಶಾಸನ ಸಮಕಾಲೀನ ಧಾರ್ಮಿಕ ವ್ಯವಸ್ಥೆ ಮತ್ತು ವಾಸ್ತು-ಶಿಲ್ಪಗಳ ಅಧ್ಯಯನದಲ್ಲಿ ಅಪರೂಪದ ಆಕರಗಳಾಗಿವೆ.

## ೧೨. ಜೈನ ತೀರ್ಥಂಕರರ ಮೂರ್ತಿ ಶಿಲ್ಪಗಳು - ಛಬ್ಬಿ :

ಶಿರಹಟ್ಟಿಯಿಂದ ದಕ್ಷಿಣಕ್ಕೆ ೧೦ಕಿ.ಮೀ. ಅಂತರದಲ್ಲಿರುವ ಛಬ್ಬಿ ಗ್ರಾಮವು ಇಂದು ಶಿರಹಟ್ಟಿ ತಾಲೂಕಿನ ಒಂದು ಗ್ರಾಮ. ಅಂದು ಇದು ಪುಲಿಗೆರೆ-೩೦೦ ವ್ಯಾಪ್ತಿಗೆ ಒಳಪಟ್ಟ ಪ್ರದೇಶವಾದ್ದರಿಂದ ಇದು ಒಂದು ಜೈನ ಧರ್ಮದ ಪ್ರಭಾವವಿರುವ ಸ್ಥಳವಾಗಿತ್ತು ಎಂಬುವುದನ್ನು ಇಲ್ಲಿ ಲಭ್ಯವಾಗುವ ಮೂರ್ತಿ ಶಿಲ್ಪಗಳಿಂದ ಕಂಡುಕೊಳ್ಳಬಹುದಾಗಿದೆ. ಶಿರಹಟ್ಟಿ-ಬೆಳ್ಳಟ್ಟಿ ರಸ್ತೆಯ ಎಡಬದಿಯ ನಿವೇಶನದಲ್ಲಿ ಜೈನ ತೀರ್ಥಂಕರರ ಮೂರ್ತಿ ಶಿಲ್ಪಗಳು ಮೂಕ ಸಾಕ್ಷಿಯಾಗಿ ಮೌನದಿಂದ ಹಾಗೆ ಬಿದ್ದಿವೆ. ಅವುಗಳ ಸಂರಕ್ಷಣೆಯೂ ಮಾಡಿಲ್ಲ. ಈ ಮೂರ್ತಿಶಿಲ್ಪಗಳನ್ನು ಬಿಟ್ಟರೆ ಪ್ರಸ್ತುತ ಈ ಗ್ರಾಮದಲ್ಲಿ ಜೈನ ಧರ್ಮದ ಯಾವುದೇ ಕುರುಹುಗಳು ಇಲ್ಲಿ ಸಿಕ್ಕಿಲ್ಲ. ಆದರೆ ಹೆಚ್ಚಿನ ಅಧ್ಯಯನ ಕೈಗೊಂಡರೆ ಈ ಪ್ರದೇಶದ ಬಗ್ಗೆ ಇಲ್ಲಿರುವ ಜೈನ ಪರಂಪರೆಯ ಪ್ರಭಾವವನ್ನು

ಕಂಡುಕೊಳ್ಳಬಹುದಾಗಿದೆ. ಸದ್ಯ ಅನಾಥವಾಗಿ ಬಿದ್ದಿರುವ ಆ ಜೈನ ತೀರ್ಥಂಕರ ಮೂರ್ತಿ ಶಿಲ್ಪಗಳನ್ನು ವಸ್ತು ಸಂಗ್ರಹಾಲಯಕ್ಕಾದರೂ ತಂದು ಹೆಚ್ಚಿನ ಅಧ್ಯಯನವನ್ನು ಕೈಗೊಳ್ಳುವುದಕ್ಕೆ ಸಂಬಂಧ ಪಟ್ಟ ಇಲಾಖೆ ಕಾಳಜಿ ವಹಿಸಬೇಕಾಗಿದೆ.

**೧೩. ಗಣದ ಬಸದಿ – ಬೆಳ್ಳಟ್ಟಿ :**

ಶಿರಹಟ್ಟಿಯಿಂದ ದಕ್ಷಿಣಕ್ಕೆ ೨೦ ಕಿ.ಮೀ. ದೂರದಲ್ಲಿರುವ ಈ ಗ್ರಾಮದಲ್ಲಿ ಕ್ರಿ.ಶ. ೯೯೦ರಲ್ಲಿ ರಚನೆಯಾದ ಶಾಸನವು ಉಪಲಬ್ಧವಾಗಿದ್ದು ಅತ್ಯಂತ ಪ್ರಾಚೀನ. ಈ ಜೊಗಿಬಂಡಿಯ ಶಾಸನವು[೨೭] ಅಂದು ಪರ್ಗ್ಗಡೆ ಅಮ್ಮವರ್ಮನ ಆಡಳಿತಕ್ಕೆ ಒಳಪಟ್ಟ ಪ್ರದೇಶವು ಜೈನ ಪರಂಪರೆಯ ಕೇಂದ್ರವಾಗಿತ್ತು. ಎಂಬುದಕ್ಕೆ ಇವನೇ ನಿರ್ಮಿಸಿದ ಬೆಳ್ಳಟ್ಟಿ ಗ್ರಾಮದ ಗುಡ್ಡದ ಬಳಿ ಇರುವ 'ಗಣದ ಬಸದಿಯೇ ಸಾಕ್ಷಿಯಾಗಿದೆ. ಇಂದು ಈ ಬಸದಿ ಸಂಪೂರ್ಣವಾಗಿ ನವೀಕರಿಸಿ ಕಲಾವಿದರಿಂದ ಈ ಬಸದಿಯಲ್ಲಿ ಪ್ರಾಚೀನ ಕುರುಹುಗಳು ಯಾವುವು ಉಳಿದಿಲ್ಲ. ಈ ಬಸದಿಯ ಮುಂಭಾಗದಲ್ಲಿ ಮತ್ತು ಈ ಗ್ರಾಮದಲ್ಲಿ ಕೆಲವು ತೀರ್ಥಂಕರರ ಮೂರ್ತಿ ಶಿಲ್ಪಗಳು ಲಭ್ಯವಾಗಿವೆ. ಇವುಗಳ ಕುರಿತು ಅಧ್ಯಯನ ಕೈಗೊಂಡರೆ ಇನ್ನಷ್ಟು ಮಾಹಿತಿ ಲಭ್ಯವಾಗಬಹುದು ಹಾಗೂ ಈ ಪ್ರದೇಶದಲ್ಲಿ ಜೈನ ಧರ್ಮದ ಪ್ರಭಾವದ ಕಡೆ ಬೆಳಕನ್ನು ಚೆಲ್ಲಲು ಸಹಾಯಕವಾಗುತ್ತದೆ. ಈಗಣ ಬಸದಿ ಯಾಪನೀಯ ಶಾಖೆಯಗಣ.

ಶಿರಹಟ್ಟಿ ತಾಲೂಕಿನಲ್ಲಿ ೯೨ ಶಾಸನಗಳು ಸಿಕ್ಕಿವೆ. ಆದರೆ ಇನ್ನೂ ೩೭ ಶಾಸನಗಳು ಅಪ್ರಕಟಿತ ಶಾಸನಗಳಾಗಿರುವುದರಿಂದ ಆ ಶಾಸನಗಳ ಅಧ್ಯಯನ ನಡೆದರೆ ಈ ಪ್ರದೇಶದಲ್ಲಿ ಇನ್ನಷ್ಟು ಜೈನ ಧರ್ಮದ ಪ್ರಭಾವವಿರುವ ಹಾಗೂ ಜೈನ ಬಸದಿಗಳ ಬಗ್ಗೆ ತಿಳಿದುಕೊಳ್ಳಬಹುದಾಗಿದೆ. ವಿದ್ವಾಂಸರ ಕಣ್ಣಿಗೆ ಕಾಣದೇ ಇರುವ ಅನೇಕ ಶಾಸನಗಳು ಇದ್ದು ಸರಿಯಾಗಿ ಕ್ಷೇತ್ರಕಾರ್ಯ ಮಾಡುವ ಮೂಲಕ ಅವುಗಳನ್ನು ಶೋಧಿಸಿ ಪಡಿಯಚ್ಚು ತೆಗೆದು ಓದಿ ಪ್ರಕಟಿಸುವ ಕಾರ್ಯ ಆಗಬೇಕಾಗಿದೆ.

ಗದಗ ಜಿಲ್ಲೆಯ ಮುಂಡರಗಿ ತಾಲೂಕಿನಲ್ಲಿರುವ ೫೩ಹಳ್ಳಿಗಳಲ್ಲಿ ೬೯ ಶಾಸನಗಳು ಉಪಲಬ್ಧವಾಗಿದ್ದು, ೫೨ ಶಾಸನಗಳು ಪ್ರಕಟಣೆಗೊಂಡಿವೆ. ಹಾಗೂ ೧೭ ಅಪ್ರಕಟಿತ ಶಾಸನಗಳಿವೆ. ಪ್ರಕಟಿತ ಶಾಸನಗಳಲ್ಲಿ ಜೈನ ಪರಂಪರೆಗೆ ಸಂಬಂಧಿಸಿದಂತೆ ಡೋಣಿ, ಮುಂಡರಗಿ, ಡಂಬಳ, ಕಲಕೇರಿ, ಶಿಂಗಟಾಲೂರು ಕ್ಷೇತ್ರ, ಮೇವುಂಡಿ ಗ್ರಾಮಗಳಲ್ಲಿ ಜೈನ ಧರ್ಮದ ಪ್ರಭಾವವಿರುವ ಅಂಶಗಳು ಪತ್ತೆಯಾಗಿವೆ. ಇನ್ನೂ ಅಪ್ರಕಟಿತ ಶಾಸನಗಳಿಂದ ಇನ್ನಷ್ಟು ಮಾಹಿತಿಯನ್ನು ತಿಳಿಯಲು ಸಾಧ್ಯವಾಗುತ್ತದೆ.

ಈ ತಾಲೂಕಿನ ಡಂಬಳ ಗ್ರಾಮವು ಮಾಸವಾಡಿ–೧೪೦ರ ಪ್ರಮುಖ ಸ್ಥಳವಾಗಿದ್ದರಿಂದ ಇಲ್ಲಿ ಬೌದ್ಧ ಮತ್ತು ಶೈವ ಧರ್ಮದ ಪ್ರಭಾವವಿದ್ದುದರಿಂದ ಜೈನ ಧರ್ಮದ ಕುರುಹು ಅಷ್ಟಾಗಿ ಕಂಡು ಬರುವುದಿಲ್ಲ. ಜೈನ

---

೨೭. ಶಾಸನ ಸಂಖ್ಯೆ ೮. ವರದಿ ವರ್ಷ (KRI) ೧೯೫೩–೫೪. ಸಂಖ್ಯೆ–೨೦೪. ಕ್ರಿ.ಶ. ೯೯೦. ಬೆಳ್ಳಟ್ಟಿ ಶಾಸನ.

ಬಸದಿಗಳ ಉಲ್ಲೇಖ ಶಾಸನಗಳಲ್ಲಿ[೨೮] ಇದ್ದರೂ ಇಂದು ಅಂಥಹ ಯಾವುದೇ ಅವಶೇಷಗಳು ಕಂಡು ಬರುವುದಿಲ್ಲ. ಆದರೆ ಕಂಡು ಬಂದಿರುವ ಕೆಲವು ಸ್ಥಳಗಳ ವಿವರಣೆಯನ್ನು ಈ ಭಾಗದಲ್ಲಿ ಕೈಗೊಳ್ಳಲಾಗಿದೆ. ಇಲ್ಲಿ ಪ್ರಮುಖವಾಗಿ ಡೋಣಿ, ಮುಂಡರಗಿ, ಕಲಕೇರಿ ಗ್ರಾಮಗಳಲ್ಲಿ ಕೆಲವು ಪ್ರಾಚೀನ ಜೈನ ಧರ್ಮದ ಅವಶೇಷಗಳು ಸ್ಮಾರಕಗಳು ಪತ್ತೆಯಾಗಿವೆ.[೨೯]

### ೧೪. ಪಾರ್ಶ್ವನಾಥ ಬಸದಿ – ಡೋಣಿ

ಮುಂಡರಗಿಯಿಂದ ಪಶ್ಚಿಮಕ್ಕಿರುವ ಈ ಗ್ರಾಮದಲ್ಲಿ ಮೂರು ಶಾಸನಗಳು[೩೦] ಸಿಕ್ಕಿದ್ದು ಅವು ಜೈನ ಬಸದಿಗೆ ಸಂಬಂಧಪಟ್ಟ ಉಲ್ಲೇಖಗಳನ್ನು ನೀಡುತ್ತವೆ. ಯಾಪನೀಯ ಸಂಘ ಮತ್ತು ವೃಕ್ಷಮೂಲಗಣದ ಚಾರುಕೀರ್ತಿ ಪಂಡಿತರಿಗೆ ಸ್ಥಳೀಯನಾದ ಸೋವಿಸೆಟ್ಟಿಯು ತಾನು ಕಟ್ಟಿಸಿದ ಜೈನ ದೇವಾಲಯಕ್ಕೆ ಭೂಮಿದಾನ ಮಾಡಿದ ಸಂಗತಿಯಿದೆ. ಅಲ್ಲದೆ ೬೦ ಮಹಾರಾಜನರು ಇದೇ ಬಸದಿಗೆ ಭೂಮಿ ಹಾಗೂ ನಿವೇಶನವನ್ನು ದಾನ ಮಾಡಿದ ವಿವರವಿದೆ. ಕ್ರಿ.ಶ. ೧೨೬೬ರ ತೇದಿಯುಳ್ಳ ಶಾಸನವು ತಿಪ್ಪರಾಜನು ಕರ್ನಾಟಕ ಮಂಡಲವನ್ನಾಳುವಾಗ ಶ್ರೀಕರಣದ ಬೊಪ್ಪಣ್ಣನಿಂದ ಕಾಣೂರಗಣದ ಮರುದೇವಿಯು ಅವ್ವೆಯ ಬಸದಿಗೆ ಪಾರ್ಶ್ವನಾಥ ವಿಗ್ರಹದಾನ ಮಾಡಿರುವ ಸಂಗತಿ ತಿಳಿದು ಬರುತ್ತದೆ.

ಶಾಸನಗಳಲ್ಲಿ ಇಷ್ಟೆಲ್ಲಾ ವಿವರಗಳು ಬಸದಿಯ ಬಗ್ಗೆ ಉಲ್ಲೇಖವಿದ್ದರೂ ಸದ್ಯ ಈ ಗ್ರಾಮದಲ್ಲಿ ಅಂಥಹ ಯಾವ ಜೈನ ದೇವಾಲಯ ಕಂಡು ಬಂದಿಲ್ಲ ಆದರೆ ಈ ಬಸದಿಯು ಬಹುಶಃ ಸಿದ್ಧೇಶ್ವರ ದೇವಾಲಯದ ಆವರಣದಲ್ಲಿ ಅಥವಾ ಹಳ್ಳದ ಆಚೆ ಪ್ರದೇಶದಲ್ಲಿ ಇದ್ದಿರಬಹುದೆಂಬ ಸಂಶಯ ವ್ಯಕ್ತವಾಗುತ್ತದೆ.

### ೧೫. ಜೈನ ಬಸದಿ ಹಾಗೂ ಮೂರ್ತಿಯ ಅವಶೇಷಗಳು – ಡಂಬಳ :

ಡಂಬಳವು ಮುಂಡರಗಿ ತಾಲೂಕಿನ ಎರಡನೆಯ ದೊಡ್ಡ ಗ್ರಾಮವಾಗಿದ್ದು ಗದುಗಿಗೆ ಹೋಗುವ ಮಾರ್ಗದಲ್ಲಿ ೨೦ ಕಿ.ಮೀ. ಅಂತರದಲ್ಲಿದೆ. ಈ ಡಂಬಳವು ಕ್ರಿ.ಶ.ದ ಆರಂಭದಲ್ಲಿಯೇ ಪ್ರಸಿದ್ಧಿಯನ್ನು ಹೊಂದಿ ಜೈನ ಬೌದ್ಧ ಧರ್ಮಗಳಿಗೆ ಆಸ್ರಯ ಸ್ಥಾನವಾಗಿತ್ತು. ಹಲವಾರು ರಾಜ ಪ್ರಭುತ್ವದ ಆಳ್ವಿಕೆಗೆ ಒಳಪಟ್ಟ ಪ್ರದೇಶ ಮಾಸವಾಡಿ–೧೪೦ರ ರಾಜಧಾನಿಯಾಗಿತ್ತು. ಈ ಗ್ರಾಮದ ಪಶ್ಚಿಮ ಭಾಗದಲ್ಲಿ ಶಿಥಿಲವಾದ ಹಳೆಯ ಕೋಟೆಯೊಂದರಲ್ಲಿ ಜೈನ ಬಸದಿ ಹಾಗೂ ಮೂರ್ತಿಶಿಲ್ಪದ ಅವಶೇಷಗಳು ಕಂಡು ಬಂದಿವೆ. ಆದ್ದರಿಂದ ಇಲ್ಲಿ ಒಂದು ಬಸದಿ ಪ್ರಾಚೀನ ಕಾಲದಲ್ಲಿ ಕಾಲಾನಂತರ ಇಲ್ಲಿನ ರಾಜಕೀಯ ಹಾಗೂ ಧಾರ್ಮಿಕ, ಸಾಂಸ್ಕೃತಿಕ ವಲಯದಲ್ಲಿ ಉಂಟಾದ

---

೨೮. ಮಹಾಲಿಂಗ ಯಾಳಗಿ (ಸಂ.) 'ಮುಂಡರಗಿ ನಾಡ ದರ್ಶನ' ಪು. ೧೨.

೨೯. ಧಾರವಾಡ ಜಿಲ್ಲಾ ಶಾಸನ ಸೂಚಿ ಸಂ. ೮, ಪು. ೪೦, SII-XV, No. 568, 269.

೩೦. ಧಾರವಾಡ ಜಿಲ್ಲಾ ಶಾಸನ ಸೂಚಿ ಸಂ. ೨೬, ೨೮, ೩೧, ಪು. ೪೧, SII-XI, No. 140, 572, 614.

ವೈಪರಿತ್ಯದಿಂದಾಗಿ ಇಂದು ಯಾವುದೇ ರೀತಿಯ ಅಂಶಗಳ ಅಲ್ಲಿ ಇಲ್ಲ, ಕೇವಲ ಅವಶೇಷಗಳು ನೋಡಲು ಸಿಗುತ್ತವೆ. ಆದರೆ ಇನ್ನೂ ಹೆಚ್ಚಿನ ಅಧ್ಯಯನ ಕೈಗೊಂಡರೆ ಅಲ್ಲಿ ಜೈನ ಧರ್ಮದ ಪ್ರಭಾವವನ್ನು ತಿಳಿಯಬಹುದಾಗಿದೆ.

### ೧೬. ಜೈನ ತೀರ್ಥಂಕರರ ವಿಗ್ರಹಗಳು ಹಾಗೂ ಪಾದಗಟ್ಟಿಗಳು – ಮೇವುಂಡಿ :

ಮುಂಡರಗಿ ತಾಲೂಕಿನಲ್ಲಿರುವ ಈ ಗ್ರಾಮವು ರಾಷ್ಟ್ರಕೂಟ ೨ನೆಯ ಕೃಷ್ಣನ ಕಾಲದ ಮೇವುಂಡಿ ಶಾಸನವೊಂದು ಕುಪ್ಪಯರಸನು ಕೋಗಳಿ–೧೦೦, ಮಾಸವಾಡಿ–೧೪೦, ಪುಲಿಗೆರೆ–೩೦೦ ಈ ಭಾಗಗಳನ್ನು ಆಳುತ್ತಿದ್ದಾಗ ಆ ಕಾಲದಲ್ಲಿ ಮೇವುಂಡಿ ಉಪರಾಜಧಾನಿಯಾಗುವ ಸೌಭಾಗ್ಯ ಪಡೆದಿತ್ತು. ಶಿಲಾಶಾಸನಗಳಲ್ಲಿ ಮೇಲ್ಪಡಿ ಎಂದು ಕರೆಯಿಸಿಕೊಂಡ ಈ ಗ್ರಾಮದಲ್ಲಿ ಜೈನ ತೀರ್ಥಂಕರರ ವಿಗ್ರಹಗಳು ಹಾಗೂ ಪಾದಗಟ್ಟಿಗಳು ಇಂದಿಗೂ ನಮಗೆ ನೋಡಲು ಸಿಗುತ್ತವೆ. ಆದ್ದರಿಂದ ಈ ಭಾಗದಲ್ಲಿ ಜೈನ ಧರ್ಮದ ಪ್ರಭಾವ ಈ ಪ್ರದೇಶದಲ್ಲಿತ್ತು ಎಂಬುದು ತಿಳಿಯುತ್ತದೆ.

ಮುಂಡರಗಿ ತಾಲೂಕಿನಲ್ಲಿ ಇಂದು ಒಂದೂ ಸುಸ್ಥಿತಿಯಲ್ಲಿರುವ ಜೈನ ಬಸದಿಗಳ ನೋಡಲು ಸಿಗುವುದಿಲ್ಲ. ಆದರೆ ಶಾಸನೋಕ್ತವಾಗಿ ಹಲವಾರು ಬಸದಿಗಳಿದ್ದವೆಂದು ತಿಳಿಯುತ್ತದೆ. ಆದರೆ ಅವುಗಳ ಅಳಿದುಉಳಿದ ಅವಶೇಷಗಳು ಮಾತ್ರ ಕಾಣಬಹುದು. ಇನ್ನು ಅಪ್ರಕಟಿತ ಶಾಸನಗಳ ಅಧ್ಯಯನದಿಂದ ಈ ಪ್ರದೇಶದಲ್ಲಿ ಜೈನ ಧರ್ಮದ ಪ್ರಭಾವಗಳನ್ನು ತಿಳಿಯಲು ಸಹಾಯಕವಾಗಬಹುದು. ಈ ಪ್ರದೇಶದ ಕೆಲವು ಗ್ರಾಮಗಳಲ್ಲಿರುವ ಜೈನ ಬಸದಿ ಮೂರ್ತಿಶಿಲ್ಪಿಗಳ ಅವಶೇಷಗಳಿಂದ ಇಲ್ಲಿ ಯಾಪನೀಯ ಪಂಥದ ಪ್ರಭಾವವಿತ್ತು ಎಂಬುದನ್ನು ತಿಳಿಯಬಹುದು. ಡಂಬಳದ ಅಳಿದು ಉಳಿದ ಬಸದಿಯ ಎರಡು ಪಾರ್ಶ್ವದ ಮೇಲಿರುವ ಶಾಸನವು ಈ ಪ್ರದೇಶದ ಜೈನರು ಸಾಮರಸ್ಯ ಬದುಕನ್ನು ಸಾಗಿಸಿಕೊಂಡು ಹೋಗುತ್ತಿದ್ದರೆಂಬುದು ಈ ಶಾಸನಗಳಿಂದ ತಿಳಿದು ಬರುತ್ತದೆ.

ಕುಂತಳ ಪ್ರದೇಶಕ್ಕೆ ತಿಲಕ ಪ್ರಾಯವಾದ ಬೆಳ್ವೊಲ–೩೦೦ ನಾಡಿನ ಪ್ರಸಿದ್ಧವಾದ ೧೮ ಅಗ್ರಹಾರಗಳಲ್ಲಿ ಒಂದಾದ ನರಗುಂದ ಇಂದು ಗದಗ ಜಿಲ್ಲೆಯ ತಾಲೂಕು ಸ್ಥಳವಾಗಿದೆ. ಗದಗ ಜಿಲ್ಲೆಯ ಅತಿ ಚಿಕ್ಕ ತಾಲೂಕು ಕೂಡಾ ಇದು. ಮೂರ್ತಿ ಚಿಕ್ಕದಾದರೂ ಕೀರ್ತಿ ದೊಡ್ಡದು. ಈ ತಾಲೂಕಿನಲ್ಲಿ ೩೯ ಹಳ್ಳಿಗಳಿವೆ. ೧೮ ಶಾಸನಗಳು ಉಪಲಬ್ಧವಾಗಿದ್ದು ಪ್ರಕಟಿತವಾಗಿವೆ. "ಧಾತ್ರಿಯೊಳು ನರಗುಂದ ಕ್ಷೇತ್ರ ಇರುವುದೆಂದು ಶಾಸ್ತ್ರ ತೆಗೆದು ಸಾರಿ ಹೇಳುವನು" ಎಂದು ಅನೇಕ ಕವಿ ಪುಂಗವರು ಈ ನಾಡಿನ ಧರ್ಮಕ್ಷೇತ್ರಗಳನ್ನು ಬಾಯ್ತುಂಬ ಕೊಂಡಾಡಿದ್ದಾರೆ. "ಹೆತ್ತ ತಾಯಿ ಹೊತ್ತ ಭೂಮಿ ಸ್ವರ್ಗಕ್ಕಿಂತ ಶ್ರೇಷ್ಠ" ಹಾಗಾಗಿ ಇವುಗಳ ಸಲುವಾಗಿ ನರಗುಂದ ಜನತೆ ಮೊದಲಿಂದಲೂ ಹೋರಾಡುತ್ತಲೇ ಬಂದಿದ್ದಾರೆ. ಇಲ್ಲಿ ಉಪಲಬ್ಧವಾದ ಶಾಸನಗಳ ಉಲ್ಲೇಖದಂತೆ ಜೈನಧರ್ಮವು ಪ್ರಬಲವಾಗಿ ಬೆಳೆದು ಬಂದಿತ್ತು. ಕಾಲಾನಂತರ ಜೈನ ಸ್ಮಾರಕಗಳು ಮರೆಯಾಗಿ ಇಂದು ಕೇವಲ ಅವಶೇಷಗಳು ಮಾತ್ರ ಇವೆ.

## ೧೭. ಜೈನ ಬಸದಿ – ಕೊಣ್ಣೂರು :

ಮೊದಲು 'ಕಣ್ಣನೂರು' ಎಂದು ಕರೆಯಲ್ಪಡುತ್ತಿದ್ದ ಈಗಿನ ಕೊಣ್ಣೂರು ಕಣ್ವ ಋಷಿಗಳ ತಪೋಭೂಮಿ, ಮಲಪ್ರಭೆಯ ದಡದಲ್ಲಿರುವ ಕೊಣ್ಣೂರು ನರಗುಂದ ತಾಲೂಕಿನ ದೊಡ್ಡ ಊರುಗಳಲ್ಲಿ ಇದೂ ಒಂದು. ಇಲ್ಲಿ ಕೆಲವು ವೈಶಿಷ್ಟ್ಯಪೂರ್ಣವಾದ ದೇವಾಲಯಗಳಿವೆ. ಕ್ರಿ.ಶ. ೮೬೦ರಲ್ಲಿ ಬಂಕೆಯರಸ ಕಟ್ಟಿಸಿದ ಈಗಿನ ಪರಮೇಶ್ವರ (ಉಮಾಮಹೇಶ್ವರ) ದೇವಾಲಯ ಮೂಲತಃ ಜೈನಬಸದಿ, ತೀರ ಸರಳವಾದ ದ್ವಾರಬಂಧಿಯನ್ನು ಹೊಂದಿದ ಈ ದೇವಾಲಯದ ಪೀಠದ ಮೇಲೆ ಶಿವಲಿಂಗವಿದೆ. ಅದರಂತೆ ತೀರ್ಥಂಕರನ ಪೀಠದ ಅವಶೇಷವೂ ಇದೆ. ಇದು ಗರ್ಭಗುಡಿ, ಅಂತರಾಳ, ಸಭಾಮಂಟಪ ಹಾಗೂ ಮುಖಮಂಟಪಗಳನ್ನು ಹೊಂದಿದೆ. ಕರ್ನಾಟಕದಲ್ಲಿಯೇ ನಕ್ಷತ್ರಾಕಾರದ ತಳವಿನ್ಯಾಸವಿರುವ ಅತ್ಯಂತ ಪ್ರಾಚೀನ ದೇವಾಲಯ ಎಂಬ ಹೆಗ್ಗಳಿಕೆಗೆ ಪಾತ್ರವಾದ ಈ ದೇವಾಲಯ ರಾಷ್ಟ್ರಕೂಟರ ಕಾಲದಲ್ಲಿ ಮೂಲತಃ ಪಾರ್ಶ್ವನಾಥ ಬಸದಿಯಾಗಿದ್ದು ಈ ಬಸದಿಗೆ ರಾಷ್ಟ್ರಕೂಟರ ಅರಸ ೧ನೆಯ ಅಮೋಘವರ್ಷನು ಗ್ರಾಮವನ್ನು ದಾನ ಮಾಡಿದ ಉಲ್ಲೇಖ ಶಾಸನವು ತಿಳಿಸುತ್ತದೆ.[೩೧]

## ೧೮. ಜೈನ ಬಸದಿ – ಸೋಮಾಪುರ :

ನರಗುಂದ ತಾಲೂಕಿನ ಸೋಮಾಪುರ ಗ್ರಾಮದಲ್ಲಿ ಒಂದು ಜೈನ ಬಸದಿ ಯಿತ್ತು. ಅದಕ್ಕೆ ಕಲ್ಯಾಣದ ಚಾಲುಕ್ಯರ ೨ನೆಯ ಸೋಮೇಶ್ವರನ ಕ್ರಿ.ಶ. ೧೦೭೫ರ ಶಾಸನವು ಸೆಟ್ಟಿಯೊಬ್ಬನು ಬಸದಿಗೆ ನೀಡಿದ ಭೂದಾನವನ್ನು ಉಲ್ಲೇಖಿಸುತ್ತದೆ.[೩೨] ಆದರೆ ಇಂದು ಅಲ್ಲಿ ಅವಶೇಷವಾಗಿರುವ ಬಸದಿಯು ಜೀರ್ಣಾವಸ್ಥೆಯಲ್ಲಿದೆ. ಬಸದಿಯ ಜೀರ್ಣೋದ್ಧಾರ ಮಾಡಬೇಕಾಗಿದೆ.

ನರಗುಂದದಲ್ಲಿಯೂ ಒಂದು ಬಸದಿಯ ಉಲ್ಲೇಖ ಶಾಸನದಲ್ಲಿ ಉಲ್ಲೇಖಿಸಿದ್ದರೂ ಎಲ್ಲಿದೆ ಎಂಬುದು ಸ್ಪಷ್ಟವಾಗಿಲ್ಲದ ಕಾರಣ ಕ್ಷೇತ್ರಕಾರ್ಯ ಸಂಶೋಧನೆಯ ಮೂಲಕ ಅದರ ಮಾಹಿತಿ ಹೊರಹೊಮ್ಮಬಹುದು. ಆದ್ದರಿಂದ ಈ ಭಾಗದ ಜನತೆ 'ಕಣ್ಣೀರ ಕುಡಿದು ತಣ್ಣೀರ ನೆರೆಯುತ್ತಿರುವ ಸಾಮರಸ್ಯ ಬದುಕಿನ ಚಿತ್ರಣ ಕಂಡುಬರುತ್ತದೆ. ಈ ಪ್ರದೇಶಗಳಲ್ಲಿ ಇನ್ನಷ್ಟು ಸಂಶೋಧನಾಕಾರ್ಯ ನಡೆಸಿದರೆ ಈ ಭಾಗದಲ್ಲಿ ಜೈನ ಪರಂಪರೆ ಹಾಗೂ ಸ್ಮಾರಕಗಳನ್ನು ಕಂಡುಕೊಳ್ಳಲು ಉಪಯುಕ್ತವಾಗಬಹುದು.

ರೋಣ ತಾಲೂಕು ಗದಗ ಜಿಲ್ಲೆಯಲ್ಲಿಯೇ ಹೆಚ್ಚು ಹಳ್ಳಿಗಳನ್ನು (೯೪) ಹೊಂದಿರುವ ತಾಲೂಕಾಗಿದೆ. ಈ ತಾಲೂಕಿಗೆ ಸಾವಿರಾರು ವರ್ಷಗಳ ಇತಿಹಾಸ ಇದೆ. ಪ್ರಾಚೀನ ಕಾಲದಲ್ಲಿ 'ದ್ರೋಣಪುರ'ವೆಂದು ಕರೆಸಿಕೊಂಡ ರೋಣವು ಇಂದು ತಾಲೂಕು ಕೇಂದ್ರವಾಗಿ ಪ್ರಸಿದ್ಧಿಯನ್ನು ಪಡೆದಿದೆ. ಹಲವಾರು ರಾಜಮನೆತನಗಳ ಆಳ್ವಿಕೆಗೆ

---

೩೧. ಧಾರವಾಡ ಜಿಲ್ಲಾ ಶಾಸನ ಸೂಚಿ ಸಂ. ೨೩, ಪು. ೨೫, ೩೮, EI VI.

೩೨. ಧಾರವಾಡ ಜಿಲ್ಲಾ ಶಾಸನ ಸೂಚಿ ಸಂ. ೧೪, ಪು. ೨೩, KIV, No. 10.

ಒಳಪಟ್ಟ ಈ ಪ್ರದೇಶವು ಜೈನ ಧರ್ಮದ ಪ್ರಭಾವಕ್ಕೆ ಒಳಗಾಗಿ ಹಲವಾರು ಬಸದಿಗಳು, ಜೈನ ಸ್ಮಾರಕಗಳ ಬೀಡಾಗಿತ್ತು. ಎಂಬುದು ತಿಳಿದು ಬರುತ್ತದೆ. ಇದು ಪುಲಿಗೆರೆ-೩೦೦ರ ಆಡಳಿತ ವಿಭಾಗಕ್ಕೆ ಸೇರಿದ ಪ್ರದೇಶವಾಗಿದ್ದು ಒಂದು ಪ್ರಮುಖ ಅಗ್ರಹಾರವಾಗಿ ಪ್ರಸಿದ್ಧಿಯನ್ನು ಪಡೆದಿತ್ತು.

ಶಾಂತಿಯುತ ಸಹಬಾಳ್ವೆ ನಡೆಸುತ್ತಿದ್ದ ವಿವಿಧ ಧರ್ಮಿಯರಲ್ಲಿ ಶೀಮಾಪಾಸಕರೇ ಅಧಿಕರಾಗಿದ್ದುದನ್ನು ರೋಣ ತಾಲೂಕಿನ ಶಾಸನಗಳು ಸ್ಪಷ್ಟ ಪಡಿಸುತ್ತವೆ. ಬೌದ್ಧಧರ್ಮಕ್ಕೆ ಸಂಬಂಧಿಸಿದ ಒಂದು ಶಾಸನವೂ ರೋಣ ತಾಲೂಕಿನಲ್ಲಿ ಇದುವರೆಗೆ ದೊರೆತಿಲ್ಲ. ಜಕ್ಕಲಿ ಮತ್ತು ನರೇಗಲ್ಲುಗಳಲ್ಲಿ ಮಾತ್ರ ಜೈನ ಧರ್ಮಕ್ಕೆ ಸಂಬಂಧಿಸಿದ ಶಾಸನಗಳು ದೊರೆತಿವೆ.

### ೧೯. ಜೈನ ಬಸದಿ – ಜಕ್ಕಲಿ

ರೋಣ ತಲೂಕಿನ ಪ್ರಮುಖ ಗ್ರಾಮ ಜಕ್ಕಲಿಯು ಪ್ರಾಚೀನ ಕಾಲದಲ್ಲಿ ಜೈನ ಧರ್ಮದ ಪ್ರಭಾವಕ್ಕೆ ಒಳಗಾಗಿ ಇಲ್ಲಿ ಒಂದು ಬಸದಿಯಿತ್ತು. ಅದಕ್ಕೆ ಕಲ್ಯಾಣದ ಚಾಲುಕ್ಯರ ಪ್ರಸಿದ್ಧ ಅರಸ ೬ನೆಯ ವಿಕ್ರಮಾದಿತ್ಯನ ಕ್ರಿ.ಶ. ೧೦೭೭ರ ಶಾಸನವು ಈ ಬಸದಿಯ ಜಿರ್ಣೋದ್ಧಾರಕ್ಕಾಗಿ ದಾನ ನೀಡಿದ ಉಲ್ಲೇಖವಿದೆ. ಆದರೆ ಪ್ರಾಚೀನ ಬಸದಿಯ ಯಾವುದೇ ಕುರುಹುಗಳು ಇಂದು ಈ ಗ್ರಾಮದಲ್ಲಿ ಪತ್ತೆಯಾಗಿಲ್ಲ. ಆದರೆ ಶಾಸನದಲ್ಲಿ ಉಲ್ಲೇಖಿತಗೊಂಡ ಜೈನ ಬಸದಿಯು ಎಲ್ಲಿತ್ತು. ಎಂಬುದನ್ನು ಶೋಧೀಸಿ ಅದಕ್ಕೆ ಸಂಬಂಧಿಸಿದಂತೆ ಇನ್ನಷ್ಟು ಅಂಶಗಳನ್ನು ಬೆಳಕಿಗೆ ತರಬೇಕಾಗಿದೆ. ಈ ಶಾಸನದಲ್ಲಿ ಜಿನಾಲಯ, ಜೀನೇಂದ್ರ ಎಂಬ ಉಲ್ಲೇಖ ಬರುತ್ತದೆ.

### ೨೦. ಜೈನ ಬಸದಿ – ನರೇಗಲ್ಲು :

ಇಂದು ರೋಣ ತಾಲೂಕಿನ ಒಂದು ಗ್ರಾಮವಾಗಿರುವ ನರೇಗಲ್ಲು ಪ್ರಾಚೀನ ಕಾಲದಲ್ಲಿ ಬೆಳ್ವೊಲ-೩೦೦ರ ಉಪವಿಭಾಗ ನೆರೆಯಂಗಲ್-೧೨ರ ಕೇಂದ್ರವಾಗಿತ್ತು. ರಾಷ್ಟ್ರಕೂಟ ೩ನೆಯ ಕೃಷ್ಣ ಕಾಲದ ಕ್ರಿ.ಶ. ೯೫೦ರ ಒಂದು ಶಾಸನ[೩೩] ನರೇಗಲ್ಲ ಚಾವಡಿಯ ಮುಂದಿದ್ದು ಅದರಲ್ಲಿ ಕೃಷ್ಣನ ಪಾದಪದ್ಮೋಪಜೀವಿ ಭೂತಯ್ಯ ಪೆರ್ಮಾಡಿಯು ಗಂಗವಾಡಿಯನ್ನಾಳುತ್ತಿದ್ದಾಗ ಅವನ ವಲ್ಲಭೆ (ಪದ್ಮಬ್ಬರಸಿ) ಜೈನ ಬಸದಿ, ದಾನಶಾಲೆ ಮಾಡಿಸಿ ದಂತೆಯೂ ಆ ಸಂದರ್ಭದಲ್ಲಿ ಗುಣಚಂದ್ರ ಪಂಡಿತರೆಂಬ ಜೈನಾಚಾರ್ಯನಿಗೆ ಮಾರಸಿಂಗಯ್ಯನೆಂಬುವನು ಕೆರೆಯನ್ನು ದಾನ ಮಾಡಿದಂತೆಯೂ ತಿಳಿದು ಬರುತ್ತದೆ. ಗುಣಚಂದ್ರ ಪಂಡಿತನ ಗುರುಪರಂಪರೆಯೂ ಶಾಸನದಲ್ಲಿದೆ. ಆದರೆ ಪ್ರಾಚೀನ ಈ ಜೈನ ಬಸದಿ ಹಲವಾರು ಮಾರ್ಪಾಡುಗಳಿಗೊಳಗಾಗಿ ಶಿವ ದೇವಾಲಯವಾಗಿ ಪರಿವರ್ತನೆಯಾಗಿದೆ. ಉದ್ದವಾದ ಪೀಠದಲ್ಲಿ ೨೪ ರಂದ್ರಗಳಿದ್ದು ಪ್ರತಿ ರಂಧ್ರಗಳಲ್ಲಿ ತೀರ್ಥಂಕರ ಶಿಲ್ಪಗಳನ್ನು

---

೩೩. ಧಾರವಾಡ ಜಿಲ್ಲಾ ಶಾಸನ ಸೂಚಿ ಸಂ. ೪೫, ಪು. ೧೭, SII-XI, No. 38.

ಸ್ಥಾಪಿಸಲಾಗಿತ್ತು ಎಂಬುದು ಗಮನಿಸಬೇಕಾದ ವಿಷಯ. ಮುಖ್ಯ ಗರ್ಭಗೃಹದಲ್ಲಿ ಒಂದು ಜಿನಮೂರ್ತಿಯನ್ನು ಪ್ರತಿಷ್ಠಾಪಿಸಿ ಮಹಾಮಂಟಪದಲ್ಲಿರುವ ಆಯತಾಕಾರದ ಗರ್ಭಗೃಹಗಳೆರಡರಲ್ಲಿ ಚತುರ್ವಿಂಶತಿ ಜಿನರ ವಿಗ್ರಹಗಳನ್ನು ಸ್ಥಾಪಿಸಲಾಗಿದೆ. ಆದರೆ ಅದರಲ್ಲಿರುವ ಯಾವ ಶಿಲ್ಪಗಳು ಇವತ್ತು ಇಲ್ಲದಾಗಿವೆ.

ಚಾಲುಕ್ಯ ಚಕ್ರವರ್ತಿ ಜಗದೇಕ ಮಲ್ಲನ ಕಾಲದ ಇನ್ನೊಂದು ಶಾಸನ ನರೇಗಲ್ಲಿನಲ್ಲಿದ್ದು ತುಂಬಾ ತ್ರುಟಿತವಾದ ಜಿನಾಲಯವೊಂದಕ್ಕೆ ಕೊಟ್ಟ ದಾನವನ್ನು ಈ ಶಾಸನವು ತಿಳಿಸುತ್ತದೆ.

### ೨೧. ಪಾರ್ಶ್ವನಾಥ ಬಸದಿ – ರೋಣ :

ಗದಗ ಜಿಲ್ಲೆಯ ತಾಲೂಕ ಕೇಂದ್ರವಾಗಿರುವ ರೋಣದಲ್ಲಿ ಪ್ರಾಚೀನ ಬಸದಿಯನ್ನು ದುರಸ್ತಿ ಮಾಡಿ ಮೂಲ ದೇವಾಲಯ ಪೂರ್ವಾಭಿಮುಖವಾಗಿದ್ದು ಅದನ್ನು ನವೀಕರಿಸಿ ಈಗ ದಕ್ಷಿಣದಲ್ಲಿ ಪ್ರವೇಶ ನಿರ್ಮಿಸಲಾಗಿದೆ. ಬಸದಿಯು ಗರ್ಭಗೃಹ ಹಾಗೂ ನವೀಕರಣಗಳನ್ನು ಹೊಂದಿರುವುದು ಗರ್ಭಗೃಹದಲ್ಲಿ ಜಿನ(ಪಾರ್ಶ್ವನಾಥ) ಶಿಲ್ಪವಿದೆ. ಸುಮಾರು ೨ ರಿಂದ ೩ ಅಡಿ ಎತ್ತರವಾಗಿರುವ ಈ ಶಿಲ್ಪವು ಸಮಭಂಗಿಯಲ್ಲಿದೆ. (ನಿಂತ) ಶಿಲ್ಪದ ತಲೆಯ ಹಿಂಭಾಗದಲ್ಲಿ ಪ್ರಭಾವಳಿಯಿದೆ. ಗರ್ಭಗೃಹದ ಬಾಗಿಲವಾಡವು ಪಂಚ ಶಾಖೆಗಳಿಂದ ಕೂಡಿದೆ.

ಸವಡಿಯಲ್ಲಿರುವ ಬ್ರಹ್ಮದೇವರ ಗುಡಿಯ ನವರಂಗದಲ್ಲಿ ಪಾರ್ಶ್ವನಾಥನ ಶಿಲ್ಪವಿದೆ. ಎರಿಬ್ಯಾಲೇರಿಯ ರಾಮಲಿಂಗನ ಗುಡಿಯ ಸಮೀಪದಲ್ಲಿ ಕೆಲವು ಭಗ್ನವಶೇಷಗಳನ್ನು ಇಡಲಾಗಿದೆ. ಅವುಗಳಲ್ಲಿ ಗುಂಗುರು ಕೂದಲಿನ ಒಂದು ಜಿನಶಿಲ್ಪವು ಇದೆ. ಇದನ್ನು ಮಹಾವೀರನ ಶಿಲ್ಪವಾಗಿರಬಹುದು ಎಂದು ತಜ್ಞರು ಗುರುತಿಸಿದ್ದಾರೆ. ಕೊಡಗನೂರು ಬಸವಣ್ಣನ ಪ್ರಾಚೀನ ದೇವಾಲಯದ ಮುಂಭಾಗದಲ್ಲಿ ಸಮಭಂಗಿಯಲ್ಲಿರುವ ಪಾರ್ಶ್ವನಾಥನ ಶಿಲ್ಪವಿದೆ.

ಹೀಗೆ ರೋಣ ತಾಲೂಕಿನಲ್ಲಿರುವ ಜೈನ ಬಸದಿ ಹಾಗೂ ಅವಶೇಷಗಳನ್ನು ಗುರುತಿಸಬಹುದು. ಇನ್ನಷ್ಟು ಕ್ಷೇತ್ರಕಾರ್ಯ ಹಾಗೂ ಸಂಶೋಧನೆಯಿಂದ ಈ ಪ್ರದೇಶದಲ್ಲಿರುವ ಜೈನ ಸ್ಮಾರಕಗಳನ್ನು ಪತ್ತೆ ಹಚ್ಚಲು ಸಹಾಯಕವಾಗಬಹುದು.

### ೪.೩. ಜೈನ ಮಠಗಳು :

'ಮಠ' ಎಂಬ ಪದ ಸಂಸ್ಕೃತ ಮೂಲದ್ದು 'ಮಠ' 'ಮಠತಿ' ಅಂದರೆ 'ವಾಸಿಸು' ಎಂದರ್ಥ. ಇಲ್ಲಿ ವಿದ್ಯಾರ್ಥಿಗಳ ಗುರುಗಳ ವಾಸಸ್ಥಾನ ಎಂದೇ ಬಳಕೆಯಾಗುತ್ತಾ ಬಂದಂತಿದೆ.[೩೪] ಹೀಗಾಗಿ ಮಠ-ಶಾಲೆ, ಕಾಲೇಜು, ವಿದ್ಯಾಕೇಂದ್ರ, ದೇವಾಲಯ ಎಂಬ ಅರ್ಥಗಳಿವೆ. ವಿಶೇಷವಾಗಿ ಪಾವಿತ್ರವನ್ನು ಕಾಪಾಡಿಕೊಂಡು ಬರುವ

---

೩೪. ಕರ್ನಾಟಕ ಜೈನ ಮಠಗಳು ಮತ್ತು ಕನ್ನಡ ಸಾಹಿತ್ಯ-ಡಾ. ಕೆ. ರವೀಂದ್ರನಾಥ, ಪು. ೩.

ಸ್ಥಳವೆಂದಿದ್ದರೂ ಮಠವೆಂದರೆ ಆಧ್ಯಾತ್ಮಿಕ 'ವಿದ್ಯಾಕೇಂದ್ರ' ಎಂಬುದು ಸರಿಯಾದ ಅರ್ಥವೆನಿಸುತ್ತದೆ.

ಜೈನ ಮುನಿಗಳೂ, ಭಟ್ಟಾರಕರೂ ವಾಸವಾಗಿರುವ ಸ್ಥಳಕ್ಕೆ ಮಠವೆಂದೆನ್ನುತ್ತಾರೆ. ಅವರ ಮಠದ ಆವರಣದಲ್ಲಿ ಪರಮ ಪವಿತ್ರರಾದ ೨೪ ತೀರ್ಥಂಕರರಲ್ಲಿ ಒಬ್ಬರ ಅಥವಾ ಒಬ್ಬರಿಗಿಂತ ಹೆಚ್ಚಿನ ತೀರ್ಥಂಕರರ ಹೆಸರಿನಲ್ಲಿ ದೇವಾಲಯ ಅದರಲ್ಲಿ ತೀರ್ಥಂಕರರ ವಿಗ್ರಹ ಸ್ಥಾಪಿತವಾಗಿರುತ್ತವೆ. ಮಠವಿಲ್ಲದೆ ಕೇವಲ ತೀರ್ಥಂಕರನ್ನೊಳಗೊಂಡು ದೇವಾಲಯ ರಚಿತವಾಗಿದ್ದರೆ ಅದಕ್ಕೆ ಬಸದಿಯೆಂದು ಕರೆಯುತ್ತಾರೆ. ಈ ಬಸದಿಯಲ್ಲಿ ಸಂಚಾರಿ ಮುನಿಗಳು ವಾಸ್ತವ್ಯ ಮಾಡುವುದುಂಟು. ಆದರೆ ಜೈನಮಠವು ಎಲ್ಲಿ ಸ್ಥಾಪಿತವಾಗಿರುತ್ತದೆಯೋ ಅಲ್ಲಿ ಬಸದಿ ಅಥವಾ ತೀರ್ಥಂಕರರಿಗೆ ಸಂಬಂಧಿಸಿದ ದೇವಾಲಯ ಸ್ಥಾಪಿತವಾಗಿರುತ್ತದೆ ಎಂಬುದನ್ನು ನಾವು ಲಕ್ಷದಲ್ಲಿಡಬೇಕು. ಮಠದ ಎಲ್ಲ ಚಟುವಟಿಕೆಗಳು ಈ ತೀರ್ಥಂಕರರ ಹೆಸರಿನಲ್ಲಿ ದೇವಸ್ಥಾನಗಳನ್ನು ಕಟ್ಟಿಸುವ ಹಾಗೂ ಅವರ ಮೂರ್ತಿಗಳನ್ನು ಸ್ಥಾಪಿಸುವ ಕಾರ್ಯ ಅತ್ಯಂತ ಪುಣ್ಯದ ಕಾರ್ಯವೆಂದು ಶ್ರಾವಕರು ಹಾಗೂ ಮುನಿಗಳ ನಂಬುಗೆ ಸಮಕಾಲೀನ ಜೈನರಲ್ಲಿ ಈ ನಂಬುಗೆ ಗಾಢವಾಗಿದೆ.

ಕ್ರಿ.ಶ. ಪೂರ್ವ ೨೯೭ರಲ್ಲಿ ಗುಣಭದ್ರಾಚಾರ್ಯ-ಚಂದ್ರಗುಪ್ತರಿಂದ ಕರ್ನಾಟಕದಲ್ಲಿ ಜೈನಧರ್ಮ ಪ್ರವೇಶಿಸಿ ಬಸದಿ-ಚೈತ್ಯಾಲಯಗಳು ನಿರ್ಮಾಣಗೊಂಡು ವಿದ್ಯಾ ಪ್ರಸಾರಕ್ಕೆ ಮುಂದಾದವು. ಕ್ರಿ.ಶ. ೬-೭ನೆಯ ಶತಮಾನದಲ್ಲಿ ಕನ್ನಡ ನಾಡಿನಲ್ಲಿ ಮಠಗಳು ಕಾಣಿಸಿಕೊಳ್ಳಲಾರಂಭಿಸಿದವು. ರಾಜಪ್ರಜೆಗಳಿಂದ ಪೋಷಿಸಿಕೊಂಡು ಬರುತ್ತಿದ್ದ ಮಠಗಳು ವಿದ್ಯಾರ್ಥಿ-ಶಿಕ್ಷಕರಿಗೆ ಊಟ-ವಸತಿ ಒದಗಿಸಿ ಶಿಕ್ಷಣ ನೀಡುತ್ತಿದ್ದವು. ವೇದಾಂತ-ಪುರಾಣ-ಇತಿಹಾಸ-ವ್ಯಾಕರಣ-ತತ್ತ್ವಶಾಸ್ತ್ರ, ಕಾವ್ಯ-ನಾಟಕ ಮತ್ತು ಸಂಗೀತಾಧ್ಯಾಯನ ಅಧ್ಯಾಪನಗಳು ಮಠಗಳಲ್ಲಿ ನಡೆಯುತ್ತಿದ್ದವು. ಶ್ರವಣಬೆಳಗೊಳ, ಹೊಂಬುಜ, ಮೂಡಬಿದಿರೆ, ಸಿಂಹನಗದ್ದೆ, ಧರ್ಮಸ್ಥಳ, ಕಾರ್ಕಳ, ಸವಡಿ, ಹೊಸೂರು, ಕೌರೂರುಗಣ ಮುಂತಾದ ಸ್ಥಳಗಳಲ್ಲಿ ಜೈನ ಮಠಗಳಿದ್ದವೆಂದು ತಿಳಿದು ಬರುತ್ತದೆ. ಕರ್ನಾಟಕದಲ್ಲಿ ಜೈನ ಮಠಗಳು ಸಂಖ್ಯಾದೃಷ್ಟಿಯಿಂದ ಕಡಿಮೆಯಿದ್ದರೂ ಧಾರ್ಮಿಕ ಸಾಹಿತ್ಯ ಪರಂಪರೆಯಲ್ಲಿ ಹಿರಿಯಮಠಗಳಾಗಿವೆ. ಈ ಮಠಗಳಂತೆ ಜೈನ ಬಸದಿ-ಚೈತ್ಯಾಲಯಗಳ ಸಾಹಿತ್ಯ-ಸಂಸ್ಕೃತಿಯ ಪ್ರಸಾರ-ನಿರ್ವಚನಗಳಲ್ಲಿ ಮಹತ್ವದ ಪಾತ್ರವೆನಿಸಿದೆ.

ನಾಡಿನಾದ್ಯಂತ ಜೈನ ಬಸದಿಗಳ ನಿರ್ಮಾಣ, ದಾನ, ದತ್ತಿ ನೀಡಿದ ಉಲ್ಲೇಖಗಳು ಶಾಸನಗಳಲ್ಲಿ ಹೇರಳವಾಗಿ ಸಿಗುತ್ತವೆ. ಜೈನ ಮಠಗಳ ಪ್ರಾಚೀನತೆಯನ್ನು ಕುರಿತಂತೆ ಗದಗ ಜಿಲ್ಲೆಯ ರೋಣ ತಾಲೂಕಿನ ಸವಡಿ ಗ್ರಾಮದ ಕ್ರಿ.ಶ. ೧೦೬೦ರ ಸೋಮೇಶ್ವರನ ದತ್ತಿ ಶಾಸನದಲ್ಲಿ "ಮಠದಲ್ಲಿ ಓದುವ ವಿದ್ಯಾರ್ಥಿಗಳಿಗೆ, ಓದಿಸುವ ಓಜರಿಗೆ ಅಗತ್ಯವಾದ ಊಟ-ಉಪಚಾರಗಳಿಗೆ ನಿಗದಿತವಾದ ದತ್ತಿಯ ಉಲ್ಲೇಖ ದೊರೆಯುತ್ತದೆ.[೩೫] (AEXV ಪು.೮೯) ಹಾಗೆಯೇ ಕದಂಬ ದೊರೆ ಬೊಪ್ಪದೇವನು ಜೈನಮಠವೊಂದರ ನಿರ್ವಹಣೆಗೆ ಭೂದಾನ ಮಾಡಿದ ಉಲ್ಲೇಖ ಚಿಕ್ಕ ಮಾಗಡಿ ಶಾಸನದಲ್ಲಿ ದೊರೆಯುತ್ತಿದೆ. (AKVIII ಶಿಕಾರಿಪುರ೧೯೭) ಸದ್ಯಕ್ಕೆ ಸವಡಿಯ ಜೈನ ಮಠವೇ ಕರ್ನಾಟಕದಲ್ಲಿ ಮೊದಲನೆಯದಾಗಿದೆಂದು ಊಹಿಸಬಹುದು.

---

೩೫. AE-XV, ಪು. ೮೯.

ಜೈನರು ಜಿನೋಪಾಸಕರು ಅವರ ಪ್ರಕಾರ ಜಿನನೆಂದರೆ ದೇವರಲ್ಲ ಎಲ್ಲವನ್ನು ಗೆದ್ದು ನಿಂತ ದೊಡ್ಡ ವ್ಯಕ್ತಿ, ಆದರ್ಶವ್ಯಕ್ತಿ. ಅವನು ಏರಿದ ಎತ್ತರವನ್ನು ನಾವೆಲ್ಲರೂ ಏರಬಹುದು ಎಂಬ ಸ್ವಾವಲಂಬನೆ ಹಾಗೂ ಸ್ವಂತದ ಆತ್ಮವನ್ನು ಅತಿಯಾಗಿ ನಂಬುವ ಮತ್ತು ಸಮರ್ಥಿಸಿಕೊಳ್ಳುವ ಧೋರಣೆ ಜೈನರದು. ಮಂದಿರಗಳು ದೇವರು ನೆಲೆಸಿರುವನೆಂದು ಭಾವಿಸಲಾಗಿರುವ ಪವಿತ್ರ ತಾಣಗಳು ಆದರೆ ಮಠಗಳು ಇವುಗಳಿಗಿಂತ ಸ್ವಲ್ಪ ಭಿನ್ನವೆಂದು ತೋರುತ್ತದೆ. ಯಾವುದೇ ಧರ್ಮದ ಆಡಳಿತದ ಕಾರ್ಯಾಲಯಗಳೆಂದು ನಾವು ಮಠಗಳನ್ನು ಗುರುತಿಸಬಹುದು. “ಅಡವಿಯಲ್ಲಿಯ ಆಶ್ರಮ ಬೇರೆ, ಊರಲ್ಲಿಯ ಮಠ ಬೇರೆ ಒಂದರ ಗುರಿ ಆತ್ಮ ಕಲ್ಯಾಣ, ಇನ್ನೊಂದರ ಗುರಿ ಆತ್ಮ ಕಲ್ಯಾಣದೊಂದಿಗೆ ಸಮಾಜಕಲ್ಯಾಣ ಹೀಗಾಗಿ ಮಠವೆನ್ನುವುದು ಧರ್ಮದೊಂದಿಗೆ ಸಮಾಜದ ಆರೋಗ್ಯಕ್ಕೆ ಅವಶ್ಯವಾಗಿರುವ ಶಿಕ್ಷಣ ಪ್ರಸಾರ, ಸಾಹಿತ್ಯ, ಸೃಷ್ಟಿ ನ್ಯಾಯ ಪರಿಪಾಲನೆ ಔಷದೋಪಚಾರ ವೃತ್ತಿ ವ್ಯವಸ್ಥೆ ಕಲಾಪೋಷಣೆ, ಸಂಸ್ಕೃತಿ ಸಂವರ್ಧನೆ ಇತ್ಯಾದಿ ಚಟುವಟಿಕೆಗಳಿಗೆ ಚ್ಯುತಿಬಾರದಂತೆ ನಡೆದುಕೊಳ್ಳುವ ಒಂದು ಸಾಮಾಜಿಕ ಸಂಸ್ಥೆ”[೩೬] (೬ನೆಯ ವಿಕ್ರಮಾದಿತ್ಯನ ಶಾಸನಗಳು : ಒಂದು ಅಧ್ಯಯನ. ಜಿ. ಎಂ. ನಾಗಯ್ಯ)

ಮೂಲತಃ ಜೈನ ಮುನಿಗಳಿಗೆ ಆಶ್ರಯಗಳಾಗಿ ಚಾತುರ್ಮಾಸಗಳ ವಸತಿಗಾಗಿ ನಿರ್ಮಿತವಾದ ಈ ಬಸದಿಗಳು ಮುಂದೆ ಧರ್ಮೀಯರ ಅಧ್ಯಯನ, ಅಧ್ಯಾಪನ, ವಾಚನ, ಲೇಖನ ಮತ್ತು ಧರ್ಮ ಶ್ರವಾಣದಿಗಳ ನೆಲೆಯಾಗಿ ರೂಪುಗೊಂಡು ಜೈನ ಸಮುದಾಯದ ಸರ್ವತೋಮುಖವಾದ ಅಭಿವೃದ್ಧಿ ಕಾರ್ಯಗಳಿಗೆ ಮಧ್ಯಬಿಂದುಗಳೆನಿಸಿದ್ದವು. ಜಿನಾಲಯ ಅಥವಾ ಜೈನ ಬಸದಿಗಳು ಕೇವಲ ಪೂಜಾಗೃಹಗಳಾಗಿರದೆ ಹಸ್ತಪ್ರತಿಗಳ ಲೇಖನಾಗರಗಳೂ ಆಗಿದ್ದವು. ಇಲ್ಲಿ ಜರುಗುತ್ತಲಿದ್ದ ಧಾರ್ಮಿಕ, ಸಾಮಾಜಿಕ, ಕಾರ್ಯಗಳಲ್ಲಿ ಕಾವ್ಯಶಾಸ್ತ್ರ ಸಿದ್ಧಾಂತ ಗ್ರಂಥಗಳ ವ್ಯವಸ್ಥಿತವಾದ ಹಸ್ತಪ್ರತಿ ಭಂಡಾರದ ನಿರ್ಮಾಣವು ಪ್ರಮುಖವಾದುದಾಗಿರಬೇಕು.

ಜಿನ ಉಪಾಸಕರ ವಸತಿಗಳೇ ಬಸದಿಗಳು ಇವು ಮುಂದೆ ಪೂಜಾವಿಧಿವಿಧಾನಗಳಿಂದ ದೇವಾಲಯವಾಗಿ ಸಾಮಾಜಿಕ, ಸಾಹಿತ್ಯಿಕ, ಕಾರ್ಯಗಳಿಂದ ಮಠಗಳಾಗಿ ಪ್ರಚಲಿತಕ್ಕೆ ಬಂದವು. ಇಂತಹ ಜೈನ ಬಸದಿಗಳಲ್ಲಿ ಸಾಹಿತ್ಯ–ಸೃಷ್ಟಿ–ಸಂರಕ್ಷಣೆ–ಪ್ರಸಾರದ ಕೆಲಸವಾಗಿರುವುದನ್ನು ಪ್ರಾಚೀನ ಕವಿಕೃತಿ–ಲಿಪಿಕಾರ ಪ್ರತಿಗಳಿಂದ ತಿಳಿಯಲು ಸಾಧ್ಯವಿದೆ ವಿಶೇಷವಾಗಿ ಹಸ್ತಪ್ರತಿ ಸಂಗ್ರಹ ಮತ್ತು ಸಂರಕ್ಷಣೆಯಲ್ಲಿ ಜೈನ ಮಠಗಳ ಪಾತ್ರ ಗಮನಾರ್ಹವಾದದ್ದು.

ಗದಗ ಪರಿಸರದಲ್ಲಿನ ಶಾಸನಗಳು ಬಸದಿಗಳಲ್ಲಿ ಧಾರ್ಮಿಕ ಕಾರ್ಯಗಳ ಜೊತೆಗೆ ಸಾಹಿತ್ಯಿಕ ಚಟುವಟಿಕೆಗಳನ್ನು ಕೈಗೊಂಡ ವಿವರಣೆಗಳನ್ನು ನೀಡುತ್ತವೆ.

ಆದಿಕವಿ ಪಂಪನು ತನ್ನ ಕಾವ್ಯಕೃತಿಯಾದ ಆದಿಪುರಾಣವನ್ನು ಪುಲಿಗೆರೆಯ ತಿರುಳುಗನ್ನಡದಲ್ಲಿ ಪುಲಿಗೆರೆಯ ಶಂಖ ಬಸದಿಯಲ್ಲಿ ಬರೆದಿದ್ದಾಗಿ ತಿಳಿಸುತ್ತಾನೆ. ಅದೇ ರೀತಿ ದಾನಚಿಂತಾಮಣಿ ಅತ್ತಿಮಬ್ಬೆ ಲಕ್ಕುಂಡಿಯೆಂಬ ಜೈನ ಕೇಂದ್ರದ ಮೂಲಕ ಮಾಡಿದ ಧಾರ್ಮಿಕ ಮತ್ತು ಸಾಹಿತ್ಯಿಕ ಸೇವೆ ಅನನ್ಯವಾದದ್ದು. ನಾಡಿನಲ್ಲೆಲ್ಲ ಹದಿನೈದು

---

೩೬. ಡಾ. ಜಿ. ಎಂ. ನಾಗಯ್ಯ–೬ನೇ ವಿಕ್ರಮಾದಿತ್ಯನ ಶಾಸನಗಳು–ಒಂದು ಅಧ್ಯಯನ.

ನೂರರಷ್ಟು ಜಿನಾಲಯಗಳನ್ನು ನಿರ್ಮಿಸಿದ್ದಲ್ಲದೇ ಆ ಜಿನಾಲಯಗಳಿಗೆ ಬಂಗಾರದ ತೀರ್ಥಂಕರ ವಿಗ್ರಹಗಳನ್ನು ಮಾಡಿಸಿದ ಧರ್ಮ ಶಿರೋಮಣಿಯಾಗಿದ್ದಾಳೆ. ತನ್ನ ತಂದೆಯು ಮೋಕ್ಷಕ್ಕೆ ಹೋಗಬೇಕೆಂಬ 'ಪರೋಕ್ಷ ವಿನಯ'ದಿಂದ ಮಾಡಿದ ಪೊನ್ನನ ಶಾಂತಿಪುರಾಣದ ಕೃತಿಯ ಸಾವಿರ ಪ್ರತಿಗಳನ್ನು ಬರೆಸಿ ಹಂಚಿದ್ದನ್ನು ಶಾಂತಿಪುರಾಣದಲ್ಲಿ ವಿವರಿಸಿದ್ದಾನೆ. ಹೀಗೆ ಒಂದು ಪ್ರಕಾಶನ ಸಂಸ್ಥೆಯಾಗಿ ಅತ್ತಿಮಬ್ಬೆ ಮಾಡಿದ ಈ ಸಾಹಿತ್ಯ ಸೇವೆ ಚರಿತ್ರಾರ್ಹವಾದದ್ದು.

ಈ ರೀತಿಯಾಗಿ ಸಮಾಜಕ್ಕೆ ಧರ್ಮಕ್ಕೆ ಸೇವೆ ಸಲ್ಲಿಸಿದ ಧಾರ್ಮಿಕ ಕೇಂದ್ರಗಳೆನಿಸಿದ ಬಸದಿ (ಮಠ)ಗಳು ಗದಗ ಪರಿಸರದಲ್ಲಿ ಸವಡಿ, ಮುಳಗುಂದ, ಗದಗ, ಲಕ್ಕುಂಡಿ ಸೊರಟೂರು, ಕೌರೂರು ಹಾಗೂ ಹೊಸೂರು ಗ್ರಾಮದಲ್ಲಿದ್ದ ಯಾಪನೀಯ ಪಂಥದ ಗಣ, ಗಚ್ಛಗಳು ಜೈನ ಮಠಗಳ ಸೇವೆ ಅಪಾರವಾಗಿದೆ.

ಜೈನ ಧರ್ಮದಲ್ಲಿ ಸಂಘ, ಗಣ, ಗಚ್ಛ, ಅನ್ವಯ, ಬಳಿ ಮೊದಲಾದ ಪಾರಿಭಾಷಿಕ ಶಬ್ದಗಳಿಗೆ ಸೂತ್ರಪ್ರಾಯವಾದ ವಿವರಣೆಗಳುಂಟು ಮೂವರು ಮುನಿಗಳು ಗುಂಪಿಗೆ ಗಣವೆಂದೂ ಏಳು ಜನ ಮುನಿಗಳ ಸಂಚಾರಿ ತಂಡಕ್ಕೆ ಗಚ್ಛವೆಂದೂ ಮುನಿ ಸಮುದಾಯದ ಒಕ್ಕೂಟಕ್ಕೆ ಸಂಘವೆಂದೂ ಹೇಳಿದೆ. ಗಚ್ಛವು ಮುನಿಯೊಬ್ಬನ ಮೇಲಾಳಿಕೆಯಲ್ಲಿ ಪರ್ಯಟನೆ ಕೈಗೊಳ್ಳುತ್ತಿದ್ದ ಮುನಿಗಳ ಸಮೂಹವಾಗಿತ್ತು. ಈ ಗಣ, ಗಚ್ಛ, ಮಠಗಳು ಜೈನ ಪರಂಪರೆಯನ್ನು ಗದಗ ಪರಿಸರದಲ್ಲಿ ಯಾವ ರೀತಿಯಾಗಿ ಬೆಳೆಸಿದವು ಎಂಬುದರ ವಿವರಣೆ ಈ ಅಧ್ಯಯನದ ಪ್ರಮುಖವಾದ ಅಂಶವಾಗಿದೆ.

## ೧. ಕೌರೂರು ಗಣ-ಗಚ್ಛ :

ಗದಗ ಜಿಲ್ಲೆಯ ಲಕ್ಕುಮಡಿ ಸಮೀಪದಲ್ಲಿರುವ ಕೌರೂರು ಪ್ರಾಚೀನ ಕಾಲದ ತೆಂಕಣ ಅಯ್ಯವೊಳೆ (ಆರ್ಯಪೊಳಲ್), ಕೌರೂರು ಪಟ್ಟಣವೆಂದು ಪ್ರಖ್ಯಾತವಾಗಿತ್ತು.[೩೭] ಯಾಪನೀಯ ಸಂಘದಲ್ಲಿ ಅಂತರ್ಗತವಾದ ಕೌಲೂರು ಗಚ್ಛವೂ ಸಹ ತುಂಬ ಪ್ರಸಿದ್ಧಿಯನ್ನು, ಮನ್ನಣೆಯನ್ನು ಗಳಿಸಿತ್ತೆಂದು ಶಾಸನಗಳು ಉಲ್ಲೇಖಿಸಿವೆ. ಲಕ್ಕುಂಡಿಗೆ ತುಸು ದೂರದಲ್ಲಿ ಇಂದಿಗೂ ಕೌಲೂರು ಎಂಬ ಹಳ್ಳಿಯಿದೆ. ಶಾಸನೋಕ್ತ ಕೌರೂರೇ ಈ ಕೌಲೂರು. ಈ ಗ್ರಾಮದಿಂದ ಪ್ರಾರಂಭವಾದ ಗಣ-ಗಚ್ಛವೇ ಕೌಲೂರುಗಣ, ಕೌಲೂರು ಗಚ್ಛ, ಬದಾಮಿ ಚಾಲುಕ್ಯರ ವೆಂಗಿಶಾಖೆಯ (ಕುಬ್ಜ) ವಿಷ್ಣುವರ್ಧನನ ಪಟ್ಟ ಮಹಿಷಿ ಅಯ್ಯಣ ಮಹಾದೇವಿಯು ವಿಜಯವಾಡದಲ್ಲಿದ್ದ (ವಿಜಯ ವಾಟಿಕಾ) ಬಸದಿ 'ನಡುಂಬಿ ವಸತಿ' ಎಂಬ ಜಿನಾಲಯಕ್ಕೆ ತೊಕನಾಟವಾಡ ವಿಷಯಾಂತರ್ಗತವಾದ ಮುಸಿನಿಕೊಂಡ ಗ್ರಾಮವನ್ನು ಅಲ್ಲಿಯ ಆಚಾರ್ಯರಾದ ಕೌಲೂರು ಗಣದ ಕಾಲಿಭದ್ರಾಚಾರ್ಯರಿಗೆ ದಾನವಿತ್ತಳೆಂದು ೮ನೆಯ ಶತಮಾನದ ಶಾಸನದಲ್ಲಿದೆ. (ಮದಾರಾಸು ಮ್ಯೂಸಿಯಂನಲ್ಲಿರುವ ಕ್ರಿ.ಶ.೭೬೨ರ ಶಾಸನ) ಕಲ್ಲಕಳಗುನಾಡು-೫೦೦ಕ್ಕೆ ನೆಲೆವೀಡು ಉಜ್ಜೆವೊಳಲು (ಆಂಧ್ರದ ಮೆಹಬೂಬ್‌ನಗರ ಜಿಲ್ಲೆ ತಾಲೂಕಿಗೆ ಸೇರಿದ ಉಜ್ಜಲಿ) ಕೊಟೆಯೊಳಗೆ

೩೭. ಹಂಪ ನಾಗರಾಜಯ್ಯ-ಯಾಪನೀಯ ಸಂಘ, ಪು. ೪೧.

ಚನ್ನಿಪಾರ್ಶ್ವಜಿನರ ಬದ್ದಿ ಜಿನಾಲಯಕ್ಕೆ ಕೌರೂರು ಗಚ್ಛದ ಇಂದ್ರಸೇನ ಪಂಡಿತರು ಆಚಾರ್ಯರಾಗಿದ್ದರು. (ಕ್ರಿ.ಶ. ೧೧೮೬ರ ಮೆಹಬೂಬ್‌ನಗರ ಶಾಸನ-೩೬) ಎಂದು ತಿಳಿಸುತ್ತದೆ. ಅತ್ತಿಮಬ್ಬೆಯ ಮಗ ಅಣ್ಣಿಗದೇವನು ಸಾಮಂತನಾಗಿ ಆಳಿದ ಮಾಸವಾಡಿ-೧೪೦ ಎಂಬ ಕಂಪಣದೊಳಗೆ ಸೇರಿದ ಊರಾಗಿತ್ತು. ಇದು. ಬನ್ನಿಕೊಪ್ಪ ರೈಲ್ವೇ ಸ್ಟೇಷನ್ನಿಗೆ ೧೫ ಕಿ.ಮೀ. ದೂರದಲ್ಲಿದೆ. ಕೌಲೂರು ಎಂಬುದನ್ನು ಸಂಸ್ಕೃತಕ್ಕೆ ಪರಿವರ್ತಿಸಿ 'ಕೌರವಪುರ' ಎಂದು ಒಂದು ಶಾಸನ ಹೆಸರಿಸಿದೆ. (ಕ್ರಿ.ಶ. ೧೧೭೭ರ ಶಾಸನ) ಕೌರೂರು ಗಚ್ಛವು ಸೂರಸ್ತಗಣಕ್ಕೆ ಸೇರಿತ್ತು. ದಾನಚಿಂತಾಮಣಿ ಅತ್ತಿಮಬ್ಬೆಯೂ ಆಕೆಯ ಮಗ ಪಡೆವಳ ಅಣ್ಣಿಗದೇವನೂ ಈ ಕೌರೂರು ಗುರು ಪರಂಪರೆಯ ಅರ್ಹನಂದಿ ಆಚಾರ್ಯರ ಶಿಷ್ಯರಾಗಿದ್ದರು.

ಹೀಗೆ ಕೌರೂರು ಗಣವು ಜೈನ ಧರ್ಮದ ಯಾಪನೀಯ ಸಂಘದ ಗಣ-ಗಚ್ಛವಾಗಿದ್ದು ಜೈನ ಪರಂಪರೆಯನ್ನು ಜನ ಜಾಗೃತಿಗೊಳಿಸುವಲ್ಲಿ ಮಠ-ಬಸದಿಗಳು ಇಂತಹ ಮುನಿಗಳ ಪರಿಶ್ರಮದ ಫಲಶ್ರುತಿಯಾಗಿವೆ.

## ೨. ಚಂದ್ರಿಕಾವಾಟಿ ಅನ್ವಯ :

ಗದಗ ತಾಲೂಕಿನ ಮುಳಗುಂದ ಗ್ರಾಮವು ಮುಳಗುಂದ ನಾಡು-೧೨ರ ಕೇಂದ್ರ ಸ್ಥಳವಾಗಿತ್ತು. ಇದು ಜೈನ ಮುನಿ ಸಂಘಗಳೂ ಅನ್ವಯಗಳೂ ಗಣಗಳೂ ಗಚ್ಛಗಳು ಪ್ರದೇಶದಲ್ಲಿ ಜೀವಂತವಾಗಿದ್ದವು. ಅವುಗಳಲ್ಲಿ ಚಂದ್ರಕಾವಾಟ ಎಂಬ ಅನ್ವಯವು ಪ್ರಬಲವಾಗಿದ್ದಿತು. ಚಂದ್ರಪ್ರಭ ತೀರ್ಥಂಕರರ ಬಸದಿಯು ಪ್ರಮುಖವಾಗಿದ್ದುದರಿಂದ ಚಂದ್ರಿಕಾವಾಟ ಎಂಬ ಹೆಸರೂ ಮುನಿಸಂಘವೂ ರೂಪಿತವಾಯಿತೆನ್ನಲಾಗಿದೆ.

ಚಂದ್ರಿಕಾವಾಟ ಅನ್ವಯದಲ್ಲಿಯೇ ಕಾರೆಯ ಗಣವೂ ಸೇನಾನ್ವಯವೂ ತಿಂತ್ರಣೀ ಗಚ್ಛವೂ ಸೇರಿವೆ. ಇಂಥಹ ಹಲವಾರು ಗಣ ಗಚ್ಛ, ಅನ್ವಯಗಳ ಕೇಂದ್ರಸ್ಥಳವಾಗಿದ್ದು ಸೌದತ್ತಿ, ಸೌದತ್ತಿ ಹಾಗೂ ಮುಳಗುಂದ ಬೆಳ್ವೊಲ-೩೦೦ರ ಪ್ರದೇಶದಲ್ಲಿ ಬರುವುದರಿಂದ ರಟ್ಟರ ಆಳ್ವಿಕೆಯ ಕಾಲದಲ್ಲಿ ಇಲ್ಲಿ ಜೈನ ಧರ್ಮವು ಉಚ್ಛ್ರಾಯ ಸ್ಥಿತಿಯಲ್ಲಿ ಬೆಳವಣಿಗೆಯಾಗಿತ್ತು ಎಂಬುದು ಶಾಸನಗಳ ಮೂಲಕ ತಿಳಿದು ಬರುತ್ತದೆ. ಮುಳಗುಂದದ ವೈಶ್ಯಕುಲದವರು (ಬಯಿಸಕುಲ) ಮೈಳಾಪತೀರ್ಥಕ್ಕೆ (ಸೌದತ್ತಿ) ದಾನದತ್ತಿಗಳನ್ನಿತ್ತು ಭಕ್ತರಾಗಿದ್ದರು.[೩೮] ಇಂಥಹ ವೈಶ್ಯ ಜಾತಿಯಲ್ಲಿ ಹುಟ್ಟಿದ ಚಂದ್ರರ್ಯನ ಮಗನಾದ ಬೇಕಾರ್ಯನು ಮುಳಗುಂದದಲ್ಲಿ ಉನ್ನತ ಜಿನಾಲಯವನ್ನು ಕ್ರಿ.ಶ. ೮೫೦ರಲ್ಲಿ ಕಟ್ಟಿಸಿದನು. ಬೇಕಾರ್ಯನ ಮಕ್ಕಳಾದ ನಾಗಾರ್ಯ ಮತ್ತು ಅರಸಾರ್ಯ. ಚಿಕ್ಕಮಗನಾದ ಅರಸಾರ್ಯನು ಜೈನ ನಯಶಾಸ್ತ್ರದಲ್ಲಿಯೂ ಆಗಮಶಾಸ್ತ್ರದಲ್ಲೂ ಕುಶಲನಾಗಿದ್ದು ಸಮ್ಯಕ್ತ್ವ ಚಿತ್ರನಾಗಿದ್ದನೆಂದು ಕ್ರಿ.ಶ. ೯೦೨ರ ಶಾಸನ ಹೇಳುತ್ತದೆ.

---

೩೮. ಜೆ. ಎಫ್. ಫ್ಲೀಟರು-ರಟ್ಟರ ಕಾಲದ ಶಾಸನಗಳು-೧೮೭೪-೧೯೦-೯೧.

ಅರಸಾರ್ಯನ ತಂದೆಯಿಂದ ನಿರ್ಮಿಸಲಾದ ಜಿನಾಲಯವು ಬೆಳ್ವೊಲದ ಮುಳಗುಂದದಲ್ಲಿದೆ. ಅದು ಚಂದ್ರಿಕಾವಾಟದ ಸೇನಾನ್ವಯಕ್ಕೆ ಸೇರಿತ್ತು. ಚಂದ್ರಪ್ರಭಜಿನರ ದೇವಾಲಯ ಮೂಲದ ಪರಂಪರೆಗೆ ಸೇರಿದ ಮುನಿಗಳು ಚಂದ್ರಿಕಾವಾಟ ಅನ್ವಯದವರೆಂದು ತಿಳಿಸಿದೆ.[೩೯]

ಮುಳಗುಂದ ಹಳೆಯ ಬಸದಿಗೆ ರಟ್ಟರ ರಾಜಧಾನಿ ಕನ್ನಿಭೋಭುಜನು ತನ್ನ ಕ್ಷೇತ್ರದಿಂದ ಎರಡು ಹುಣಸೆಯ ಮರಗಳ ನಡುವಣದ ಆರು ನಿವರ್ತನ ಭೂಮಿಯನ್ನು ದಾನವಾಗಿ ಇತ್ತನೆಂದು ಕ್ರಿ.ಶ. ೮೭೫ರ ಶಾಸನವು ತಿಳಿಸುತ್ತದೆ. ಚಂದ್ರಿಕಾ ಚಂದ್ರಪ್ರಭ ತೀರ್ಥಂಕರರ ಜಿನಾಲಯ ಇರುವ ಸ್ಥಳ ಚಂದ್ರಿಕಾವಾಟ. ಚಂದ್ರಪ್ರಭಜಿನರ ಶಾಸನವನ್ನು ಬೆಳೆಸಿ ಹಬ್ಬಿಸುವುದರಲ್ಲಿ ತೊಡಗಿದವರು ಚಂದ್ರಿಕಾವಾಟಿ ಅನ್ವಯಯದ ಮುನಿಗಳು ಆದ್ದರಿಂದ ಈ ಚಂದ್ರಕಾವಾಟ ಅನ್ವಯದ ಜೈನಯತಿ ಸಮುದಾಯಕ್ಕೆ ಉಗಮ ಸ್ಥಳ ಮುಳಗುಂದದ ಚಂದ್ರಪ್ರಭ ಜಿನಾಲಯ ಇದು ಒಂಬತ್ತನೆಯ ಶತಮಾನದ ನಡುಗಾಲದಲ್ಲಿ ಹುಟ್ಟಿತು ಅಲ್ಲಿಂದ ಮುಂದೆ ಈಪರಂಪರೆಗೆ ಸೇರಿದ ಭಟ್ಟಾರಕರ ಉಲ್ಲೇಖಗಳು ಶಾಸನಗಳಲ್ಲಿ ಸಿಗುತ್ತವೆ.[೪೦]




೩೯. ಅದೇ ಶಾಸನ.

೪೦. ಚಂದ್ರಿಕಾವಾಟ ಪರಂಪರೆಯ ವಂಶಾವಳಿಯನ್ನು ಹಂಪನಾ ಅವರು ತಮ್ಮ 'ಯಾಪನೀಯ ಸಂಘ' ಗ್ರಂಥದ ೪೮ನೇ ಪುಟದಲ್ಲಿ ಉಲ್ಲೇಖಿಸಿದ್ದಾರೆ.

**ಮಲ್ಲಿಷೇನ ಸೂರಿ (೧೦೫೦)**

(ಮಹಾಪುರಾಣ, ನಾಗಕುಮಾರ ಕಾವ್ಯ ತಾಂತ್ರಿಕ ಕೃತಿಗಳ ರಚನೆಕಾರ)

**ನರೇಂದ್ರಸೇನ (೯೬೦)**

ನಯಸೇನ-೧ (೧೦೫೦)

|

ನರೇಂದ್ರಸೇನ-೨ (೧೦೮೦)

|

ತ್ರೈವಿಧ್ಯ ಚಕ್ರೇಶ್ವರ

|

ನಯಸೇನ (೧೧೨೨)

(ಧರ್ಮಾಮೃತ ಕಾವ್ಯ ರಚನೆಕಾರ)

ಹೀಗೆ ಮುಳಗುಂದದಲ್ಲಿ ಮೂರು ಶತಮಾನಗಳ ಕಾಲ ಉಚ್ಛ್ರಾಯ ಸ್ಥಿತಿಯಲ್ಲಿದ್ದ ಚಂದ್ರಕಾವಾಟ ಅನ್ವಯವು ಮುಳಗುಂದ ಪರಿಸರದಲ್ಲಿ ಜೈನ ಪರಂಪರೆಯನ್ನು ಅಭಿವೃದ್ಧಿ ಪಡೆಸಿ ಅಪೂರ್ವವಾದ ಧಾರ್ಮಿಕ, ಸಾಮಾಜಿಕ, ಸಾಂಸ್ಕೃತಿಕ ಪರಿಸರವನ್ನು ನಿರ್ಮಿಸಿದ್ದರ ಕೀರ್ತಿಗೆ ಪಾತ್ರವಾಗಿದೆ. ೧೩ನೆಯ ಶತಮಾನದಲ್ಲಿ ಈ ಪರಿಸರದಲ್ಲಿ ಜೈನ ಧರ್ಮದ ಸ್ಥಿತಿ ಅವನತಿ ಕಡೆ ಮುಖ ಮಾಡಿದಾಗ ಇದರ ಚುಕ್ಕಾಡಿ ಹಿಡಿದ ನಯಸೇನನು ಆಗಿನ ಕಾಲದ ಸಾಮಾಜಿಕ ಧಾರ್ಮಿಕ ಸ್ಥಿತಿಯನ್ನು ಜನಸಾಮಾನ್ಯರ ಧೋರಣೆಗಳನ್ನು ವಿವಿಧ ಧರ್ಮಗಳ ಪ್ರಭಾವದಿಂದ ಜೈನ ಧರ್ಮವನ್ನು ಬೆಳೆಸಿದ ಕೀರ್ತಿಗೆ ನಯಸೇನನು ಆತನ ಕೃತಿ ಧರ್ಮಾಮೃತವು ಪಾತ್ರವಾಗಿದೆ. ಹೀಗೆ ಮುಳಗುಂದವು ಯಾಪನೀಯ ಪಂಥದ ಈ ಚಂದ್ರಕಾವಾಟ ಅನ್ವಯದ ಪ್ರಭಾವದಿಂದ ಈ ಭಾಗದಲ್ಲಿ ಪ್ರಸಿದ್ಧಿಯನ್ನು ಆ ಕಾಲದಲ್ಲಿ ಪಡೆದಿತ್ತು.

## ೩. ಸೂರಸ್ಥ (ಸ್ತ)ಗಣ – ಚಿತ್ರಕೂಟಾನ್ವಯ :

"ಭೂಭಾಗದೊಳ್ ಪಂಪುವೆತ್ತುದು ಸೂರಸ್ತಗಣಂ ಪ್ರಸಿದ್ಧಂ ಅಡಿಯೋಳ್ ಚಿತ್ರಕೂಟಾನ್ವಯಂ"[೪೧] (ಕ್ರಿ.ಶ. ೧೦೭೧ರ ಸೊರಟೂರು ಶಾಸನ) ಸೂರಸ್ತ (ಸ್ಥ) ಗಣವೂ ಕಾಣೂರು ಗಣವೂ ಒಂದೇ ಪರಂಪರೆಯ ರೆಂಬೆಗಳು ಇವೆರಡೂ ಸಹ ಯಾಪನೀಯ ಸಂಘದ ಪ್ರಬಲವೂ ಪ್ರಸಾರಾಧಿಕ್ಯವುಳ್ಳದೂ ಆದ ಗಣಗಳು. ಗಣ, ಅನ್ವಯಗಳು ಗದಗ ಜಿಲ್ಲೆಯ ಲಕ್ಕುಂಡಿ, ಸೊರಟೂರು, ಲಕ್ಷ್ಮೇಶ್ವರ ಕಲಕೇರಿ ಕೌರೂರು ಮುಳಗುಂದ ಗ್ರಾಮಗಳಲ್ಲಿ ಬಸದಿಗಳನ್ನು ನಿರ್ಮಿಸಿಕೊಂಡು ಅವುಗಳ ಮೂಲಕ ಜೈನ ಧರ್ಮದ ಪ್ರಸಾರ ಕಾರ್ಯವನ್ನು ಕೈಗೊಂಡಿದ್ದವು ಎಂಬುದು ಶಾಸನಗಳ

---

೪೧. ಕ್ರಿ.ಶ. ೧೦೭೧ರ ಸೊರಟೂರು ಶಾಸನ.

ಮೂಲಕ ತಿಳಿದು ಬರುತ್ತದೆ. ಕ್ರಿ.ಶ. ೧೦೭೧ರ ಸೊರಟೂರು ಶಾಸನವು ಸೊರಟೂರಿನಲ್ಲಿ ಚಿತ್ರಕೂಟಾನ್ವಯದ ಹುಳಿಯಬ್ಬಜ್ಜಿಕೆಯರು ಬಲದೇವ ಬಸದಿಯನ್ನು ನಿರ್ಮಿಸಿ ದಾನ ದತ್ತಿಗಳನ್ನು ನೀಡಿದ ಉಲ್ಲೇಖಗಳು ಸಿಗುತ್ತವೆ. ಇದೇ ಚಿತ್ರಕೂಟಾನ್ವಯದ ಅರ್ಹನಂದಿ ಪಂಡಿತರು ಲಕ್ಕುಂಡಿಯಲ್ಲಿ ಜೈನ ಧರ್ಮ ಪ್ರಸಾರದ ಹೊಣೆ ಹೊತ್ತುಕೊಂಡು ಅಮೋಘವಾದ ಸಾಮಾಜಿಕ ಕಾರ್ಯಗಳನ್ನು ಕೈಗೊಂಡಿದ್ದಿರ ಕುರಿತು ಕ್ರಿ.ಶ. ೧೦೦೭ರ ಲಕ್ಕುಂಡಿ ಶಾಸನ ಉಲ್ಲೇಖಿಸುತ್ತದೆ. ಮುಳಗುಂದದಲ್ಲಿ ಚಂದ್ರಿಕಾವಾಟಾನ್ವಯದ ಪ್ರಭಾವಗಳೂ ಹಾಗೂ ಗುರು ಪರಂಪರೆಯನ್ನು ಕ್ರಿ.ಶ. ೧೦೫೩ರ ಶಾಸನವು ತಿಳಿಸುತ್ತದೆ. ಕ್ರಿ.ಶ. ೧೦೭೭ರ ಲಕ್ಷ್ಮೇಶ್ವರ ಶಾಸನವು ಸೂರಸ್ಥಗಣದ ಸೇನಗಣ ಹಾಗೂ ಮೂಲಸಂಘದ ಪ್ರಭಾವವನ್ನು ದೃಢಪಡಿಸುತ್ತದೆ. ಕ್ರಿ.ಶ. ೧೦೭೪ರ ಲಕ್ಷ್ಮೇಶ್ವರ ಶಾಸನ ಬಲತ್ಕಾರಗಣ (ನಂದಿಸಂಘಕ್ಕೆ ಸೇರಿದ ಗಣ)ದ ಉಲ್ಲೇಖವನ್ನು ಮಾಡುತ್ತದೆ. ೧೨ನೆಯ ಶತಮಾನದ ಕಲಕೇರಿ ಶಾಸನವು ತಿಂತ್ರಿಗಚ್ಛದ ಪ್ರಭಾವ ಹಾಗೂ ಬಸದಿಗೆ ನೀಡಿದ ದಾನ ದತ್ತಿಗಳನ್ನು ತಿಳಿಸುತ್ತದೆ.

ಹೀಗೆ ಗದಗ ಪರಿಸರದಲ್ಲಿ ಯಾಪನೀಯ ಪಂಥದ ಗಣದಲ್ಲಿ ಅನ್ವಯಗಳು ಜೈನ ಧರ್ಮದ ಸಾರವನ್ನು ನಾಲ್ಕು ಶತಮಾನಗಳ ಕಾಲ ಬೆಳಸಿಕೊಂಡು ಬಂದ ಕೀರ್ತಿಗೆ ಪಾತ್ರವಾಗಿವೆ.

## ೪. ಯಾಪನೀಯ ಮಠಕೇಂದ್ರ – ಹೊಸೂರು :

ಗದಗ ಜಿಲ್ಲೆಯ ಮತ್ತು ತಾಲೂಕಿಗೆ ಸೇರಿದ ಹೊಸೂರು ಗ್ರಾಮವು ಮುಳಗುಂದ–೧೨ ಎಂಬ ಆಡಳಿತ ಘಟಕಕ್ಕೆ ಸೇರಿದ ಎಲೆಯ ಪೊಸವೂರು ಯಾಪನೀಯ ಸಂಘದ ಮುಖ್ಯ ಕೇಂದ್ರಗಳಲ್ಲೊಂದಾಗಿತ್ತು. ಇಲ್ಲಿ ಯಾಪನೀಯರ ಮಠವಿತ್ತು ಎಂಬುದು ಶಾಸನಗಳಿಂದ ತಿಳಿದು ಬರುತ್ತದೆ.

ಕಲ್ಯಾಣ ಚಾಲುಕ್ಯರ ಕಾಲದಲ್ಲಿ ಶ್ರೇಷ್ಠ ಆಚಾರ್ಯ ತ್ರೈವಿದ್ಯ ದೇವರ ಶಿಷ್ಯ ಪರಂಪರೆಯಲ್ಲಿ ಬಂದ ಜಯಕೀರ್ತಿ ದೇವ ಮುನಿಯು ಜೈನಾಗಮ ಸಾಗರವಾಗಿದ್ದರು. ಅವರ ಶಿಷ್ಯ ನಾಗಚಂದ್ರ ಮುನಿಯು ಜೈನ ಸಿದ್ಧಾಂತ ಪಾರಂಗರೂ ರಾಜಶ್ರೇಷ್ಠರಿಂದ ಪೂಜಿತರೂ ಆಗಿದ್ದರೂ ಅವರ ಶ್ರಾವಕ ಶಿಷ್ಯರಾದ ಆಯ್ದರಸರು ಈ ಪೊಸವೂರ ಗಾವುಂಡನಾಗಿದ್ದನು. ಚಾಲುಕ್ಯ ಚಕ್ರವರ್ತಿ ಜಗದೇಕಮಲ್ಲ ಜಯಸಿಂಹನು (೧೦೧೫–೪೨) ಆಳುತ್ತಿರುವಾಗ ದಂಡನಾಯಕ ಕೇಸವರಸನ ಮಗ ವಾವಣರಸನು ಎರಡನೂರು ಪ್ರಾಂತಕ್ಕೆ (ಪುಲಿಗೆರೆ–೩೦೦ ಮತ್ತು ಬೆಳ್ವೊಲ–೩೦೦) ಮುಖ್ಯಸ್ಥನಾಗಿದ್ದನು. ಪೂಸವೂರನ್ನು ವಾವಣರಸನ ಮಡದಿ ರೇವಕಬ್ಬರಸಿಯು ಆಳುತ್ತಿದ್ದಳು. ಆ ಅವಧಿಯಲ್ಲಿ ಮೊರಕಾಮ್ನಾಯ ತಿಳಿಕನಾದ ಪೊಸವೂರ ಆಯ್ದುಗಾವುಂಡನು ತನ್ನ ಮಡದಿ ಕಂಟಿಕಟ್ಟಿ ನೆನಪಿಗಾಗಿ ಪರೋಕ್ಷ ವಿನಯದಿಂದ ಒಂದು ಬಸದಿಯನ್ನು ಮಾಡಿಸಿದನು. ಆ ಬಸದಿಯನ್ನು ನಾಗಚಂದ್ರ ಸಿದ್ದಂತಿ ಯತಿಗಳಿಗೆ ಕಾಲುತೊಳೆದು ಒಪ್ಪಿಸಿದನು. ಬಸದಿಯ ಪೂಜಾದಿಗಳಿಗೆ ಅಡಕೆ ತೋಟ, ೨೪ ಮತ್ತರು ಹೊಲ ಬಿಟ್ಟುಕೊಟ್ಟನು. ಆಯ್ದುಗಾವುಂಡ ಕಂಚಿಕಬ್ಬೆಯರ ಓರಿಯ ಮಗನಾದ ಎಲರಾನ ಮಗ ಮೊಲೆಗನು ಕ್ರಿ.ಶ. ೧೦೨೮–೨೯ರಲ್ಲಿ

ಬೇರೆ ದಾನಗಳನ್ನು ಕೊಡಲಾದ ಸಮಯದಲ್ಲಿ ಈ ಶಾಸನವನ್ನು ಬರೆಸಿದನು.[೪೨] (ಕ್ರಿ.ಶ. ೧೦೨೮-೨೯ರ ಹೊಸೂರು ಶಾಸನ).

ಹೊಸೂರು ಗ್ರಾಮವು ಜಿನಗೃಹ, ವಿಷ್ಣುಗೇಹ, ಶಿವಾಲಯಗಳಿಂದ ಬೆಳಗಿದ ಸ್ಥಳ ಆಯ್ದಗಾವುಂಡನು ಮಾಡಿಸಿದ ಬಸದಿಯು ಯಾವುದು ಎಂಬುದನ್ನು ಸರಿಯಾಗಿ ಗುರುತಿಸಬೇಕು. ಆತನ ಮೊಮ್ಮಗ ಪೊಲಗನು ಬರೆಸಿ ಹಾಕಿಸಿದ ಶಿಲಾಶಾಸನ ಇರುವ ಕಲ್ಲು ಚಪ್ಪಡಿಯನ್ನು ಈಗ ಒಳಮಾಳಗೆಗೆ ಬಳಸಿರುವ ಊರೊಳಗಿನ ಶಿವಾಲಯವೂ ಅಥವಾ ಊರಿನ ಹೊರಗಡೆ ಇರುವ ಪರಿವರ್ತಿತ ಶಿವಾಲಯವೂ ಎಂಬ ಸಂದೇಹ ಸಹಜ. ಊರೊಳಗೆ ಹಾಲಿ ಇರುವ ಶಿವಾಲಯವನ್ನು ಪರಿವರ್ತಿತ ಬಸದಿಯೆಂದು ಹೇಳುವುದಕ್ಕೆ ಜಿನ ಶಾಸನದ ಕಲ್ಲು ಚಪ್ಪಡಿಗಳು ಆಧಾರಗಳಾಗಿವೆ. ಮೂಲತಃ ಜೈನ ಬಸದಿಯೆಂದು ಖಚಿತವಾಗಿ ಹೇಳಲು ಜಿನಾಲಯದ ವಾಸ್ತು ಮತ್ತು ಶಿಲ್ಪಗಳು ಪೂರಕ ಆಧಾರಗಳಾಗಿವೆ. ಈ ಪ್ರಾಚೀನ ಬಸದಿಯು ಗರ್ಭಗೃಹ ನವರಂಗ ಮತ್ತು ಮುಖಮಂಟಪಗಳಿಂದ ಕೂಡಿದೆ. ಗರ್ಭಗೃಹದಲ್ಲಿ ಈಗ ಜಿನಬಿಂಬದ ಸಿಂಹ ಪೀಠವನ್ನು ಬದಲಾಯಿಸಿಲ್ಲ. ಅದು ಹಾಗೆ ಉಳಿಸಿ ಗರ್ಭಗೃಹದಿಂದ ತೆಗೆದ ಜಿನಬಿಂಬವನ್ನು ಮುಖಮಂಟಪದಲ್ಲಿ ತಂದಿರಿಸಿದೆ. ಪದ್ಮಾಸನದಲ್ಲಿ ಕುಳಿತ ಜಿನರ ಈ ವಿಗ್ರಹದ ಬಲಭಾಗವು ಮುಕ್ಕಾಗಿದೆ. ಎಣ್ಣೆಯನ್ನು ಸುರಿದಿರುವುದರಿಂದ ಜಿನ ಬಿಂಬದ ಮುಖಲಕ್ಷಣವು ಮುಸುಕಾಗಿದೆ. ಮುಖಮಂಟಪದ ಕಂಬಗಳಿಗೆ ಬಳಿದಿರುವ ಬಣ್ಣ ಇತ್ತೀಚಿನ ಕಾಲದ್ದಾದರೂ ಕಂಬಗಳು ಪ್ರಾಚೀನವಾಗಿವೆ.

ಬಸದಿಯ ಬಲಗಡೆಗೆ ಬಸದಿಯ ಎರಡರಷ್ಟು ದೊಡ್ಡದಾದ ಹಳೆಯ ಕಟ್ಟಡವಿದೆ. ಅದರ ವಾಸ್ತು ವಿನ್ಯಾಸವೂ ಸುಂದರವಾಗಿದೆ. ಮುಂಭಾಗದ ಭಿತ್ತಿಗೆ ಎರಡೂ ಕಡೆ ಜಾಲಂದರಗಳಿವೆ. ಒಳಗಡೆ ವಿಶಾಲವಾದ ನಡುಮನೆಯಿದೆ. ದೇವಾಲಯಕ್ಕಿರುವ ಗರ್ಭಗೃಹವಿದೆ. ಗರ್ಭಗೃಹದಲ್ಲಿ ಪೂಜಾ ವಿಗ್ರಹವಿಲ್ಲ. ಮೂಲ ಸಿಂಹಪೀಠವಿದೆ. ಈ ಪ್ರಾಚೀನ ಸಿಂಹ ಪೀಠದಲ್ಲಿ ಚಕ್ರವಾಕ ಪಕ್ಷಿಯ ಹಾಗೆ ಕಾಣುವ ಲಾಂಛನವಿದೆ. ಅದು ಕುಕ್ಕುಟ ಸರ್ಪದ ಲಾಂಛನವಾಗಿರಲೂಬಹುದು. ಅದು ಚಕ್ರವಾಕ ಪಕ್ಷಿಯ ಲಾಂಛನವಾಗಿದ್ದಲ್ಲಿ ಅಲ್ಲಿಯ ಮೂಲ ನಾಯಕ ಮಲ್ಲಿನಾಥ ತೀರ್ಥಂಕರರೆಂದು ತಿಳಿಯಬಹುದು. ಹಾಗಲ್ಲದೆ ಅದು ಕುಕ್ಕುಟ ಸರ್ಪದ ಲಾಂಛನವಾಗಿದ್ದಲ್ಲಿ ಪದ್ಮಾವತೀ ದೇವಿಯ ಮೂರ್ತಿಯನ್ನು ಅಲ್ಲಿ ಪ್ರತಿಷ್ಠಾಪಿಸಲಾಗಿತ್ತೆಂದು ತಿಳಿಯಬಹುದು.

ಅದರಿಂದ ಈ ವಿಶಾಲವಾದ ಕಟ್ಟಡವು ಯಾಪನೀಯ ಮುನಿಗಳ ಮಠವಾಗಿತ್ತು. ಈ ಮಠದೊಳಗೂ ಒಂದು ಜಿನಾಲಯವಿತ್ತು. ಹೊರಗಡೆ ಬಸದಿ ಎಲ್ಲಾ ಜನರಿಗಾಗಿ ಇತ್ತು. ಯಾಪನೀಯ ಸಂಘಕ್ಕೆ ಸೇರಿದ ಸಂದರ್ಭದಲ್ಲಿ ಹಲವಾರು ಬಸದಿ/ಮಠಗಳ ಸಂಪರ್ಕವನ್ನು ಇದು ಸಮಕಾಲೀನ ಹೊಂದಿತ್ತು ಎಂಬುದು ತಿಳಿಯುತ್ತದೆ. ಇಂಥಹ ಹಲವಾರು ಮಠಗಳು, ಬಸದಿಗಳು ಕರ್ನಾಟಕದ ನಾನಾ ಭಾಗದಲ್ಲಿ ಇದ್ದವು ಅವುಗಳಲ್ಲಿ

---

೪೨. SII-ಸಂ. ೧೧-೧ ಸಂಖ್ಯೆ-೬೫ ಕ್ರಿ.ಶ. ೧೦೨೮-೨೯ರ ಹೊಸೂರು ಶಾಸನ, ಪು-೫೫-೫೭.

ಕೆಲವು ಬಸದಿಗಳು ಸಾಧಾರಣ ಸ್ಥಿತಿಯಲ್ಲಿ ಉಳಿದುಕೊಂಡು ಬಂದಿವೆ. ಆದರೆ ಈಗಲೂ ಉಳಿದು ಬಂದಿರುವ ಏಕೈಕ ಯಾಪನೀಯರ ಮಠವೆಂದರೆ ಹೊಸೂರಿನದು ಎಂಬುದು ಮಹತ್ವದ್ದಾಗಿದೆ.

ಹೀಗೆ ಜೈನ ಮಠಗಳು, ಬಸದಿಗಳು ಧರ್ಮ, ಜ್ಞಾನ ಧಾರ್ಮಿಕ, ನೀತಿ, ಶೀಲಗಳ ಬುನಾದಿಯ ಮೇಲೆ ಸಾಮಾಜಿಕ ಹಿತ, ಅಭಿವೃದ್ಧಿ ಅದರ ವ್ಯವಹಾರವು ಅಹಿಂಸಾತತ್ವವನ್ನು, ಸತ್ಯವನ್ನು, ತನ್ನದಲ್ಲದನ್ನು ಮುಟ್ಟದ ನೀತಿಯು ಆತ್ಮಚಿಂತನೆ ಮುಂತಾದವುಗಳನ್ನು ಅವಲಂಬಿಸಿಕೊಂಡು ಗದಗ ಪರಿಸರದಲ್ಲಿ ಶ್ರೀಮಂತವಾಗಿ ಬೆಳೆದಿದೆ.

ಗದಗ ಜಿಲ್ಲೆಯಲ್ಲಿ ಬೆಳೆದಿರುವ ಜೈನ ಧರ್ಮದ ಪರಂಪರೆಯು ಇಲ್ಲಿರುವ ಬಸದಿಗಳ ಹಾಗೂ ಜೈನ ಮಠಗಳು ಪ್ರಾಚೀನ ಕಾಲದಿಂದ ಇಂದಿನವರೆಗೂ ಉಳಿಸಿಕೊಂಡು ಬೆಳೆಸಿಕೊಂಡು ಬಂದಿವೆ. ಆಧುನಿಕವಾಗಿ ಬೇರೆ ಬೇರೆ ವೃತ್ತಿ, ಉದ್ಯೋಗ ವ್ಯಾಪಾರಾದಿಗಳಲ್ಲಿ ತೊಡಗಿರುವ ಈಗಿನವರು ತಮ್ಮವೇ ಆದ ಸಂಘ ಸಂಸ್ಥೆಗಳನ್ನು ಕಟ್ಟಿಕೊಂಡು ಬಸದಿಗಳ ನಿರ್ಮಾಣ ಕಾರ್ಯದಲ್ಲಿ ತಮ್ಮ ತಾವು ತೊಡಗಿಸಿಕೊಂಡಿದ್ದಾರೆ. ಆ ಮೂಲಕ ಇಂದು ಗದಗ, ಹರ್ತಿ, ಸೊರಟೂರು, ಲಕ್ಷ್ಮೇಶ್ವರ ಮುಂತಾದ ಸ್ಥಳಗಳಲ್ಲಿ ಆಧುನಿಕ ಬಸದಿಗಳ ನಿರ್ಮಾಣ ಕಾರ್ಯ ನಡೆಯುತ್ತಿದೆ. ಪ್ರಾಚೀನ ಕಾಲದಲ್ಲಿ ೮ನೆಯ ಶತಮಾನದಿಂದ ೧೩ನೆಯ ಶತಮಾನದವರೆಗಿನ ಕಾಲಾವಧಿಯ ನಿರ್ಮಾಣಗೊಂಡ ಬಸದಿಗಳು ಮುಂದೆ ಅವು ನಿರ್ನಾಮಗೊಳ್ಳಲು ಹಾಗೂ ರೂಪಾಂತರ ಹೊಂದಲು ಪ್ರಾರಂಭಿಸಿದವು. ಅದಕ್ಕೆ ಅನ್ಯಧರ್ಮಗಳ ಪ್ರಭಾವ ಹಾಗೂ ಜೈನಧರ್ಮವಲಯ ಅರಸು ಮನೆತನಗಳಾವು ಈ ಭಾಗದಲ್ಲಿ ಆಳದ ಕಾರಣ ಜೈನ ಧರ್ಮವು ತನ್ನ ಪ್ರಾಬಲ್ಯವನ್ನು ಕಳೆದುಕೊಂಡಿತು.

ಕರ್ನಾಟಕದಲ್ಲಿ ಮೊಟ್ಟಮೊದಲ ಜೈನ ಮಠವಿದ್ದ ಸ್ಥಳವಿರುವುದು. ಗದಗ ಜಿಲ್ಲೆಯಲ್ಲಿ ಜೈನ ಧರ್ಮಕ್ಕೆ, ಪರಂಪರೆಗೆ ಕೊಟ್ಟ ಪ್ರಾಮುಖ್ಯತೆಯನ್ನು ಅರಿಯಬಹುದು. ಇಂದಿಗೂ ಸಹ ಸುಸ್ಥಿತಿಯಲ್ಲಿರುವ ಹೊಸೂರು ಗ್ರಾಮದ ಯಾಪನೀಯ ಜೈನಮಠ ಕೇಂದ್ರವು ಜೈನ ಪರಂಪರೆಗೆ ಸಲ್ಲಿಸಿದ ಕೊಡುಗೆ ಅಪಾರವಾಗಿದೆ. ಹೀಗೆ ಜೈನಧರ್ಮವು ಗದಗ ಪರಿಸರದಲ್ಲಿ ಧಾರ್ಮಿಕ, ಸಾಮಾಜಿಕ ಹಾಗೂ ಆಧ್ಯಾತ್ಮಿಕ ಕ್ಷೇತ್ರಗಳಲ್ಲದೆ ವಾಸ್ತುಶಿಲ್ಪ ಮೂರ್ತಿಶಿಲ್ಪಗಳಿಗೂ ಗಣನೀಯವಾದ ಕೊಡುಗೆಯನ್ನು ಈ ಬಸದಿಗಳು ಹಾಗೂ ಜೈನಮಠಗಳು ಸಲ್ಲಿಸಿವೆ.

ಸಮಾಜದಲ್ಲಿ ಶಾಂತಿ–ಅಹಿಂಸೆಗಳು ನೆಲೆಯೂರಬೇಕೆಂಬ ಕಳಕಳಿ, ಧರ್ಮಪ್ರಸಾರ, ಪಾರಂಪರಿಕ ಆಚರಣೆ ಆಧುನಿಕತೆಗೆ ಸರಿಹೊಂದುವ ಧರ್ಮಾಚರಣೆಯನ್ನು ಪ್ರಗತಿಪರ ನಿಲುವುಗಳನ್ನು ತಾಳಿ ಅಹಿಂಸಾ ಬೋಧನೆ–ಶಾಂತಿ ಪರಿಪಾಲನೆ ಸಮಾಜ ರಕ್ಷಣೆ ಈ ಮೂರನ್ನು ಧಾರ್ಮಿಕತೆಯ ಹಿನ್ನೆಲೆಯಲ್ಲಿ ಮೈಗೂಡಿಸಿಕೊಂಡಿರುವ ಮೂರ್ತ ಸ್ವರೂಪಗಳಾಗಿವೆ ಈ ಜೈನ ಧರ್ಮದ ಸ್ಮಾರಕಗಳು.

***

# ಅಧ್ಯಾಯ – ೬
# ಗದಗ ಪರಿಸರದ ಜೈನ ಸಾಹಿತ್ಯ ಪರಂಪರೆ

೬.೧. ಪೀಠಿಕೆ

೬.೨. ಪ್ರಾಚೀನ ಪರಂಪರೆ

೬.೩. ಆಧುನಿಕ ಪರಂಪರೆ

# ಅಧ್ಯಾಯ ೬
# ಗದಗ ಪರಿಸರದ ಜೈನ ಸಾಹಿತ್ಯ ಪರಂಪರೆ

**೬.೧. ಪೀಠಿಕೆ :**

ಕನ್ನಡ ಸಾಹಿತ್ಯದಲ್ಲಿ ಸೃಜನ, ಸಂಪಾದನೆ ಹಾಗೂ ಸಂರಕ್ಷಣಾ ಇತಿಹಾಸ ಕಂಡುಬರುವ ಎರಡು ನೆಲೆಗಳೆಂದರೆ : ಒಂದು ಅರಮನೆ (ರಾಜಾಶ್ರಯ) ಇನ್ನೊಂದು ಗುರುಮನೆ (ಧರ್ಮಾಶ್ರಯ). "ಕವಿಗಳನ್ನಾಶ್ರಯಿಸಿ ರಾಜರು ಖ್ಯಾತಿ ಹೊಂದಿದರು : ರಾಜನ್ನಾಶ್ರಯಿಸಿ ಕವಿಗಳು ಪ್ರಸಿದ್ಧರಾದರು" ಎಂಬ ಕಾವ್ಯ ಮೀಮಾಂಸಕರ ಹೇಳಿಕೆಗಳಲ್ಲಿ ರಾಜರ ಮತ್ತು ಕವಿಗಳ ಪ್ರಾಯೋಗಿಕ ಸಂಬಂಧ ಹುಟ್ಟಿಕೊಂಡಿತು. ಈ ಅರಮನೆ-ಗುರುಮನೆಗಳ ಸಹವಾಸದಿಂದ ಸೃಷ್ಟಿಗೊಂಡಿರುವ ಪ್ರಾಚೀನ ಕನ್ನಡ ಸಾಹಿತ್ಯವು ಜೈನ ಕವಿಗಳ ಪ್ರತಿಭೆಯ ಗಂಗೋತ್ರಿಯಲ್ಲಿ ಕನ್ನಡ ಸಾಹಿತ್ಯವೆಂಬ ಗಂಗಾನದಿ ಉಗಮವಾಯಿತು. ಶಾಸನಗಳಲ್ಲಿ ಮೈದೂರಿ ಕ್ರಿ.ಶ. ಸುಮಾರು ೮ನೇ ಶತಮಾನದಿಂದೀಚೆಗೆ ಪೂರ್ಣರೂಪ ತಾಳಿ ಕನ್ನಡಿಗರ ಹೃದಯ ಮನ ಮಂದಿರದಲ್ಲಿ ಶಾಶ್ವತ ಸ್ಥಾನ ಪಡೆಯಿತು. ಜೈನ ಧರ್ಮೀಯರು ಕನ್ನಡವನ್ನು ಸಾಹಿತ್ಯದ ಭಾಷೆಯನ್ನಾಗಿ ಮಾಡಿದ ಕೀರ್ತಿಗೆ ಪಾತ್ರರಾಗಿದ್ದಾರೆ. "ರಾಜದ್ರಾಜಂ"[೧] ಎನಿಸಿದ ತಿರುಳ್ಗನ್ನಡ ಎಂದು ಆದಿಕವಿ ಪಂಪನಿಂದ ವರ್ಣಿತವಾದ ಭಾಷೆ ಗದಗ ಜಿಲ್ಲೆಯದು. ಸಂಸ್ಕೃತ, ಪ್ರಾಕೃತ ಮತ್ತು ಕನ್ನಡ ಭಾಷೆಗಳ ಮೇಲೆ ಸಂಪೂರ್ಣ ಹಿಡಿತವನ್ನು ಸಾಧಿಸಿದ್ದ ಜೈನ ಕವಿಗಳಿಗೆ ಆ ಕಾಲದ ರಾಜಾಶ್ರಯ ದೊರೆತಿದ್ದು ಆನೆಬಲದ ಶಕ್ತಿಯನ್ನು ದೊರಕಿಸಿಕೊಟ್ಟಂತೆ ಜೈನ ಕವಿಗಳು ತಾವು ನೆಲೆಸಿದ ಪ್ರದೇಶದ ಕುರಿತು ಅಪಾರವಾದ ಅಭಿಮಾನ, ಪ್ರೀತಿ ಮತ್ತು ಎಲ್ಲಕ್ಕೂ ಮಿಗಿಲಾಗಿ ನಿಷ್ಠೆಯನ್ನು ಹೊಂದಿದ್ದರು ಮಹಾಕವಿ ರನ್ನ ಲಕ್ಕುಂಡಿಯನ್ನು ಅತ್ತಿಮಬ್ಬೆಯನ್ನು ಸಾಹಿತ್ಯ ಲೋಕದಲ್ಲಿ ಚಿರಸ್ಥಾಯಿಯಾಗಿಸಿದ್ದಾನೆ. ಈ ಆದಿಕವಿ ಹಾಗೂ ಶಕ್ತಿ ಕವಿಗಳ ಸಹವಾಸದ ಜತೆಗೆ ಕುಮಾರವ್ಯಾಸ, ಚಾಮರಸ, ದುರ್ಗಸಿಂಹ ನಯಸೇನರನ್ನು ಹೊಂದಿದ ಭಾಗ್ಯ ಗದಗ ಜಿಲ್ಲೆಯದು.

---

೧. ಪಂಪ ಭಾರತ-೧೪, ಪದ್ಯ-೫೮.

ಗದಗ ಪರಿಸರದಲ್ಲಿ ಜೈನ ಧರ್ಮದ ಪ್ರಸಾರದಲ್ಲಿ ಜೈನ ಮುನಿಗಳು ಮತ್ತು ಕವಿಗಳ ಪಾತ್ರ ಹಿರಿದಾಗಿದೆ, ಮುನಿಗಳು ನಾಡಿನಾದ್ಯಂತ ಕಾಲ್ನಡಿಗೆಯ ಮೂಲಕ ವಿಹಾರ ಕೈಗೊಂಡು ಧರ್ಮ ಪ್ರಸಾರ ಮಾಡಿದರೆ ಜೈನ ಕವಿಗಳು ತಾವು ನೆಲೆಸಿದ ನೆಲದ ಭಾಷೆಯ ಮೂಲಕವೇ ಧರ್ಮಪ್ರಸಾರ ಮಾಡಿರುವುದು ಗಮನಾರ್ಹ. ಜಾಗತಿಕ ಸಾಹಿತ್ಯ 'ಧರ್ಮ-ಪ್ರೇಮ-ಯುದ್ಧ' ಈ ಮೂರು ಸ್ತರಗಳಲ್ಲಿ ನಿರ್ಮಿತವಾಗಿರುವುದನ್ನು ಕಾಣಬಹುದು. ಇದರರ್ಥ ಧರ್ಮಬಿಟ್ಟು ಸಾಹಿತ್ಯವಿಲ್ಲ. ಸಾಹಿತ್ಯಬಿಟ್ಟು ಧರ್ಮವಿಲ್ಲ' ಅಂತೆಯೇ 'ಧರ್ಮ-ಕಾವ್ಯಧರ್ಮ' ಎಂದು ಆದಿಕವಿ ಪಂಪ ಹೇಳಿರುವುದು ಔಚಿತ್ಯಪೂರ್ಣವಾಗಿದೆ. ಇಂಥ ಕಾವ್ಯಧರ್ಮ ಧರ್ಮದ ಆಶ್ರಯದಲ್ಲಿ ಸೃಷ್ಟಿಯಾಗಿ, ಸಂರಕ್ಷಣೆಗೊಂಡು ನಾಡಿನಾದ್ಯಂತ ಪರಿಚಲನೆಗೊಂಡು ಪ್ರಮುಖ ಪ್ರದೇಶಗಳಲ್ಲಿ ಗದಗ ಪರಿಸರದಲ್ಲಿ ನೆಲೆನಿಂತು ಸಾಹಿತ್ಯ ಕೃಷಿಯೊಂದಿಗೆ ಧರ್ಮ ಪ್ರಸಾರದಲ್ಲಿ ಪ್ರಮುಖ ಪಾತ್ರ ವಹಿಸಿದವರಲ್ಲಿ ಪಂಪ, ಪೊನ್ನ, ರನ್ನ, ಶ್ರೀಧರಾಚಾರ್ಯ, ಮಲ್ಲಿಷೇಣ, ನಯಸೇನ ಸೂರಿ, ನಯಸೇನ ಜೈನಕವಿಗಳು ಪ್ರಮುಖರಾಗಿದ್ದಾರೆ. ಕನ್ನಡ ಸಾಹಿತ್ಯ ಪರಂಪರೆಯಲ್ಲಿ ಗದಗ ಪರಿಸರದ ಸಾಹಿತ್ಯಿಕ ಕೊಡುಗೆ ಅಪಾರವಾಗಿದೆ. ಪ್ರಾಚೀನತೆಯಿಂದ ಇಂದಿನವರೆಗೆ ಈ ಪರಿಸರದ ಸಾಹಿತ್ಯಿಕ ಕೊಡುಗೆ ಅಪಾರವಾಗಿದೆ. ಪ್ರಾಚೀನತೆಯಿಂದ ಇಂದಿನವರೆಗೆ ಈ ಪರಿಸರದ ಭಾಷೆ, ಸಂಸ್ಕೃತಿಯ ಸೋಗಡನ್ನು ತಮ್ಮ ಕೃತಿಗಳಲ್ಲಿ ಕಂಡರಿಸಿದ್ದಾರೆ. ಪ್ರಸ್ತುತ ಅಧ್ಯಾಯವು ಗದಗ ಪರಿಸರವು ಕನ್ನಡ ಸಾಹಿತ್ಯ ವಾರದಿಗೆ ಸಲ್ಲಿಸಿದ ಸಾಹಿತ್ಯ ಕೃಷಿಯನ್ನು ಕುರಿತದ್ದಾಗಿದೆ. ಜೈನ, ಲಿಂಗಾಯತ, ಬ್ರಾಹ್ಮಣ, ಶೈವ ಇತರೆ ಧರ್ಮದ ಕವಿಗಳು ಈ ಪರಿಸರದಲ್ಲಿ ಸಾಹಿತ್ಯ ಕೃಷಿಯನ್ನು ಮಾಡಿದ್ದಾರೆ. ಆದರೆ ಈ ಅಧ್ಯಾಯವು ಜೈನ ಕವಿಗಳ ಹಾಗೂ ಕೃತಿಗಳನ್ನು ಕುರಿತು ಅಧ್ಯಯನವನ್ನು ಮಾಡಲಾಗಿದೆ.

ಪ್ರಸ್ತುತ ಈ ಅಧ್ಯಾಯವು ಎರಡು ವಿಭಾಗಗಳನ್ನು ಮಾಡಿಕೊಂಡು ಅಧ್ಯಯನ ಕೈಗೊಳ್ಳಲಾಗಿದೆ. ೧) ಪ್ರಾಚೀನ ಜೈನ ಸಾಹಿತ್ಯ ಪರಂಪರೆ ೨) ಆಧುನಿಕ ಜೈನ ಸಾಹಿತ್ಯ ಪರಂಪರೆಯ ಈ ಕವಿಗಳು ಪರಿಸರ ಮತ್ತು ಸಾಮಾಜಿಕ, ರಾಜಕೀಯ, ಧಾರ್ಮಿಕ ಸ್ಥಿತಿಗತಿಯನ್ನು ತಮ್ಮ ಕೃತಿಗಳಲ್ಲಿ ಚಿತ್ರಿಸಿದ ಬಗೆಯನ್ನು ಕುರಿತು ಚಿತ್ರಿಸಲಾಗಿದೆ. 'ಬೆಳ್ವೊಲ ಮುನ್ನೂರು' ಪ್ರದೇಶದ ಭಾಗವಾದ ಪುಲಿಗೆರೆಯ ತಿರುಳಗನ್ನಡದ ಭಾಷೆಯನ್ನು ಪಂಪನು ತನ್ನ ಕೃತಿಯಲ್ಲಿ ಕೃತಿ ರಚನೆಯಲ್ಲಿ ಬಳಸಿರುವುದು ಗದಗ ಜಿಲ್ಲೆಯ ಭಾಷೆಯ ಪ್ರಭಾವದ ಹಿರಿಮೆಯ ಸಂಕೇತವಾಗಿದೆ.

## ೬.೨. ಪ್ರಾಚೀನ ಜೈನ ಸಾಹಿತ್ಯ ಪರಂಪರೆ :

ಕನ್ನಡ ಸಾಹಿತ್ಯಕ್ಕೆ ಲೌಕಿಕ-ಅಲೌಕಿಕ ಕಾವ್ಯ ಪರಂಪರೆ ನಿರ್ಮಿಸಿದ ಆದಿಕವಿ, ಯುಗಪ್ರವರ್ತಕಕವಿ ಪಂಪನ ಜನ್ಮಸ್ಥಳ ಪ್ರಾಚೀನ ಗದಗ ಪರಿಸರದ ಅಣ್ಣಿಗೇರಿ, ತಿರುಳ್ಗನ್ನಡ ನಾಡಿನ ಪಟ್ಟಣವೆಂದು ಹೆಸರಾದ ಈ 'ರಾಜದ್ರಾಜಕಮೆನಿಸಿದ ಸಾಜದ ಪುಲಿಗೆರೆಯ ತಿರುಳ್ಗನ್ನಡದೊಳ್'[೨] ತನ್ನ ಕಾವ್ಯಗಳನ್ನು ಬರೆದುದಾಗಿ ಕನ್ನಡದ

೨. ಪಂಪ ಭಾರತ-೧೪, ಪದ್ಯ-೫೮.

ಆದಿಕವಿ ಪಂಪನು ಅಭಿಮಾನದಿಂದ ಹೇಳಿಕೊಂಡಿದ್ದಾನೆ. ಶಕ್ತಿಕವಿ ರನ್ನ ಕವಿಯ ಕರ್ಮಭೂಮಿ ಲಕ್ಕುಂಡಿಯಲ್ಲಿ 'ಅಜಿತನಾಥ ತೀರ್ಥಂಕರ'ರ ಚರಿತ್ರೆಯನ್ನು ಸೃಷ್ಟಿಸಿದ ನೆಲೆಬಿಡು ಈ ಗದಗ ಪರಿಸರದ್ದು. ಪೊನ್ನನ 'ಶಾಂತಿ ಪುರಾಣ'ವನ್ನು ಆಗಿನ ಕಾಲದಲ್ಲಿ ಸಾವಿರ ಪ್ರತಿಗಳನ್ನು ಮಾಡಿಸಿದ ದಾನ ಚಿಂತಾಮಣಿ ಅತ್ತಿಮಬ್ಬೆಯು ನೆಲೆಸಿದ ಪರಿಸರ ಗದಗ ಜಿಲ್ಲೆಯದ್ದು. ಜ್ಯೋತಿಷ್ಯ ಶಾಸ್ತ್ರಕ್ಕೆ ಸಂಬಂಧಿಸಿದ ಕನ್ನಡ ಸಾಹಿತ್ಯದ ಮೊದಲ ಕೃತಿ 'ಜಾತಕತಿಲಕ'ವನ್ನು ರಚಿಸಿದ ಕವಿ ಶ್ರೀಧರಾಚಾರ್ಯನ ಜನ್ಮಭೂಮಿ 'ನರಗುಂದ', ಶಾಸನ ಕವಿ ಮಲ್ಲಿಷೇಣನು ಕವಿಯಾಗಿ ಮುನಿಯಾಗಿ ಜೈನಧರ್ಮ ಪ್ರಸಾರ ಮಾಡಿದ ಸ್ಥಳ ಮುಳುಗುಂದ, ನಯಸೇನ ಸೂರಿ, ನಯಸೇನ ಎಂಬ ಕವಿಗಳು ಈ ಮುಳಗುಂದದಲ್ಲಿದ್ದ ಇತರ ಕವಿಗಳು. ಹೀಗೆ ಗದಗ ಪರಿಸರದಲ್ಲಿ ಪಂಪನಿಂದ ನಯಸೇನನವರೆಗೆ ಈ ಪರಿಸರದಲ್ಲಿ ಜನ್ಮತಾಳಿ, ಕರ್ಮಭೂಮಿಯನ್ನಾಗಿ ಮಾಡಿಕೊಂಡು ಈ ಪರಿಸರದಲ್ಲಿ ಜೈನ ಪರಂಪರೆಯನ್ನು ಬೆಳೆಸಿದ ಕೀರ್ತಿ, ಅದನ್ನು ಸಾಹಿತ್ಯಿಕ ಕೃತಿಗಳಲ್ಲಿ ಚಿರಸ್ಥಾಯಿಯಾಗುವಂತೆ ಕಟ್ಟಿಕೊಟ್ಟವರು ಆ ಕಾಲದ ಈ ಜೈನ ಕವಿಗಳು.

ಕನ್ನಡ ಸಾಹಿತ್ಯಕ್ಕೆ ದೇಶಿ ಮಾರ್ಗದ ಮೂಲಕ ಚಂಪೂ ಶೈಲಿಯಲ್ಲಿ ಕಾವ್ಯ ಕೃತಿಗಳನ್ನು ನಿರ್ಮಿಸಿ 'ಪ್ರದೇಶ ಹಾಗೂ ಪರಂಪರೆಯನ್ನು ಆ ಕಾಲದ ವೀರ ಮೌಲ್ಯಗಳೊಂದಿಗೆ ಈ ಕಾಲದ ಕೃತಿಗಳು ಆಧ್ಯಾತ್ಮಿಕ ಅಂಶಗಳು ಹಾಗೂ ಧಾರ್ಮಿಕಾಂಶಗಳನ್ನಷ್ಟೆ ಅಲ್ಲದೆ ವಿವಾಹ ವಿಧಿ, ಆಚಾರ-ವಿಚಾರ, ವ್ಯಾಪಾರ ವ್ಯವಹಾರ ಮೊದಲಾದ ಅಂಶಗಳ ಮೇಲೂ ಬೆಳಕನ್ನು ಚೆಲ್ಲುತ್ತವೆ. ಆ ದೃಷ್ಟಿಕೋನದಿಂದ ಗದಗ ಪರಿಸರದಲ್ಲಿ ಕಾವ್ಯಕೃತಿ ರಚನೆ ಮಾಡಿದ ಈ ಪ್ರಾಚೀನ ಜೈನ ಕವಿಗಳು ಹಾಗೂ ಕೃತಿಗಳಲ್ಲಿ ಮೂಡಿ ಬಂದಿರುವ ಆ ಕಾಲದ, ಸಾಂಸ್ಕೃತಿಕ ಲೋಕವನ್ನು ರಾಜಕೀಯ, ಸಾಮಾಜಿಕ, ಧಾರ್ಮಿಕ ಅಂಶಗಳನ್ನು ತಮ್ಮ ಕಾವ್ಯಗಳಲ್ಲಿ ಚಿತ್ರಿಸಿದ ಬಗೆಯನ್ನು ಈ ಅಧ್ಯಾಯದಲ್ಲಿ ವಿಶ್ಲೇಷಣೆಯನ್ನು ಕೈಗೊಳ್ಳಲಾಗಿದೆ. ಹಾಗೂ ಆ ಕಾಲದ ಜೈನರಲ್ಲದೆ ಜೈನೇತರ ಕವಿಗಳು ಹಾಗೂ ಕೃತಿಗಳನ್ನು ಗಮನಿಸಲಾಗಿದೆ.

ಕನ್ನಡ ಸಾಹಿತ್ಯದ ಆದಿಕವಿಯೆಂದು ಖ್ಯಾತನಾದ ಪಂಪನು ತನ್ನ ಕಾಲದಲ್ಲಿ ಪ್ರಾತಿನಿಧಿಕ ಕಾವ್ಯಗಳಾದ 'ಆದಿಪುರಾಣ' 'ವಿಕ್ರಮಾರ್ಜುನ ವಿಜಯ'ಗಳಂತಹ ಲೌಕಿಕ-ಅಲೌಕಿಕ ಕಾವ್ಯಗಳನ್ನು ರಚಿಸಿ ಆ ಯುಗದ ಆದಿ ಪುರುಷನೆನಿಸಿಕೊಂಡವನು. ಈತನು ಜನಿಸಿದ ಕಾಲ ೯೦೨. ಕೃತಿರಚನೆ ಕ್ರಮವಾಗಿ ೯೧೪ ಹಾಗೂ ೯೪೨ರಲ್ಲಿ ಜರುಗಿದವೆಂದು ತಿಳಿದು ಬರುತ್ತದೆ. ಜಿನವಲ್ಲಭನ ಗಂಗಾಧರಂ (ಕುರಿಕ್ಯಾಲ) ಶಾಸನದಲ್ಲಿ ಪಂಪನಿಗೆ ಜಿನವಲ್ಲಭನೆಂಬ ತಮ್ಮನೊಬ್ಬನಿದ್ದಂತೆಯೂ ಪಂಪನ ಮಾತಾಪಿತೃಗಳು ಅಬ್ಬಣಬ್ಬೆ, ಭೀಮಪ್ಪಯ್ಯರೆಂದೂ ತಿಳಿದು ಬರುತ್ತದೆ. ಅಲ್ಲದೆ ಪಂಪನ ತಾಯಿ ಅಬ್ಬಣಬ್ಬೆ ಅಣ್ಣಿಗೇರಿಯ ಜೋಯಿಸ ಸಿಂಘನ ಮೊಮ್ಮಗಳೆಂದೂ ಪಂಪನ ತಂದೆ ಭೀಮಪ್ಪಯ್ಯ ನಿಡುಂಗೊಡೆಯ ಅಭಿಮಾನಚಂದ್ರನ ಮೊಮ್ಮಗನೆಂದೂ ಆ ಶಾಸನದಲ್ಲಿ ಹೇಳಿದೆ. ಪಂಪನ ತಂದೆ ಬ್ರಾಹ್ಮಣ ಕುಲಕ್ಕೆ ಒಪ್ಪುವ ಧರ್ಮ ಎಂದರೆ ಜೈನ ಧರ್ಮವೇ ಎಂದು ನಂಬಿ ಆ ಧರ್ಮಕ್ಕೆ ಸೇರಿಕೊಂಡವನು. ಪಂಪನ ಪೂರ್ವಜರು ವೆಂಗಿ ಮಂಡಲದವರು, ತಾಯಿಯ ಕಡೆಯವರು ಬೆಳ್ವೊಲ ಪ್ರಾಂತದವರು ಇದು ಈಗೀನ ಧರವಾಡ ಜಿಲ್ಲೆ, ಗದಗ ಜಿಲ್ಲೆ, ಕೊಪ್ಪಳ ಜಿಲ್ಲೆ, ಹಾವೇರಿ ಜಿಲ್ಲೆಯ ಕೆಲವು ಭಾಗಗಳನ್ನೊಳಗೊಂಡಿದ್ದು

ಬೆಳ್ವೊಲ-೩೦೦ ಎಂದು ಶಾಸನಗಳಲ್ಲಿ ಉಲ್ಲೇಖಿಸಲ್ಪಟ್ಟಿದೆ. ಪಂಪನ ಪೂರ್ವಜರು ಪಿಂಗಿಪಳು ಎಂಬ ಗ್ರಾಮಕ್ಕೆ ಸೇರಿದವರೆಂದೂ ಕ್ರಮೇಣ ಜೀವನೋಪಾಯಕ್ಕಾಗಿ ಅವರು ಬೋದನದಲ್ಲಿ ನೆಲಸಬೇಕಾಯಿತೆಂದೂ ತಿಳಿದು ಬರುತ್ತದೆ. ಬೋಧನ ಚಾಳುಕ್ಯರ ಒಂದು ಶಾಖೆಗೆ ರಾಜಧಾನಿಯಾಗಿತ್ತು. ಇಮ್ಮಡಿ ೬೦ ಕೇಸರಿಯ ಹಾಗೂ ಆತನ ವಂಶದ ಹಿರಿಯರಲ್ಲಿ ಪ್ರಥಮನಾದ ಯುದ್ಧ ಮಲ್ಲನಿಂದ ಹಿಡಿದು ಅವರಿಗೆ ಬೋಧನ ರಾಜಧಾನಿ ಈ ಸಂಗತಿಯು ಶಾಸನಗಳಿಂದ ಹಿಡಿದು ಪಂಪನ ಪ್ರಶಸ್ತಿ ಕಾವ್ಯ 'ವಿಕ್ರಮಾರ್ಜುನ ವಿಜಯ'ಗಳಿಂದ ಖಚಿತವಾಗಿದೆ. ಕನ್ನಡ ನಾಡಿನ ಎಷ್ಟೋ ಭಾಗ ಈಗ ಆಂಧ್ರ, ಮಹಾರಾಷ್ಟ್ರಗಳ ಪರಿಸರದಲ್ಲಿ ಅಡಗಿಹೋಗಿವೆ. ಬೋಧನ ಈಗ ಆಂಧ್ರಪ್ರದೇಶ ನಿಜಾಮಾಬಾದ ಜಿಲ್ಲೆಯಲ್ಲಿ ಇದೆ ಹೆಸರಿನ ತಾಲ್ಲೂಕು ಸ್ಥಳವಾಗಿದೆ.

ಪಂಪನು ಕವಿಯಾದಂತೆ ಕಲಿಯೂ ಆಗಿದ್ದನು. ಎಂಬುದನ್ನು ಪಂಪಭಾರತವು ಧ್ವನಿಸುತ್ತದೆ. ಪಂಪನು ತನ್ನ ಹಿಂದಿನ ಕವಿಗಳಲ್ಲಿ ವ್ಯಾಸ ರನ್ನಲ್ಲದೆ ಮತ್ತಾವ ಕವಿಗಳನ್ನು ಸ್ಮರಿಸಿಲ್ಲ. ಈತನಿಗೆ ತನ್ನ ಕವಿತಾ ಶಕ್ತಿಯ ಬಗೆಗೆ ತುಂಬ ಆತ್ಮವಿಶ್ವಾಸ. 'ಸುಕವಿಜನ ಮನೋಮಾನಸೋತ್ತಂಸಹಂಸಂ' 'ಕವಿತಾಗುಣಾರ್ಣವಂ, 'ಸಂಸಾರ ಸಾರೋದಯಂ' 'ಸರಸ್ವತೀ ಮಣಿಹಾರಂ'[೩] ಎಂಬವು ಈತನ ಬಿರುದುಗಳು. ಪಂಪ ಬಾಳಿದುದು ಹತ್ತನೆಯ ಶತಮಾನದಲ್ಲಿ ಅದು ರಾಷ್ಟ್ರಕೂಟರ, ಚಾಳುಕ್ಯರ ಪ್ರಾಬಲ್ಯದ ಕಾಲ, ಕ್ಷಾತ್ರ ತೇಜಸ್ಸು ಪ್ರಜ್ವಲಿಸುತ್ತಿದ್ದ ಕಾಲ, ವೀರರ ಆದರ್ಶ, ಸಾಹಸ, ಛಲ, ಬಲ, ನನ್ನಿ, ಧರ್ಮ, ಚಾಗ, ಅಭಿಮಾನ, ಶೌಚ ಇವೆಲ್ಲವೂ ಪಂಪ ಬಾಳಿದ ಸಮಾಜದ ಮನೆಮಾತಾಗಿತ್ತು. ಚಾಲುಕ್ಯವಂಶದ ಎರಡನೆಯ ಅರಿಕೇಸರಿ ಪಂಪ ಕವಿಯ ಪೋಷಕ 'ಬೆಳಗುವೆನಿಲ್ಲಿ ಲೌಕಿಕಮನಲ್ಲಿ ಜಿನಾಗಮಮುಂ' ಎಂದು ವಿಕ್ರಮಾರ್ಜುನ ವಿಜಯದಲ್ಲಿ ಹೇಳಿಕೊಂಡಿದ್ದಾನೆ. ಭಾರತವನ್ನು ಆರು ತಿಂಗಳಲ್ಲಿಯೂ ಆದಿಪುರಾಣವನ್ನು ಮೂರು ತಿಂಗಳಲ್ಲಿಯೂ ರಚಿಸಿದುದಾಗಿ ಹೇಳಿಕೊಂಡಿದ್ದಾನೆ. ಕವಿತಾ ರಚನೆಯಿಂದ ಪಂಪನು ಅಪೇಕ್ಷಿಸುವ ಫಲ ಪೂಜೆ, ನೆಗಳ್ತೆ, ಲಾಭ ಮುಂತಾದ ಲೌಕಿಕ ಪ್ರಾಪ್ತಿಗಳಾಗಿರದೆ ಜಿನೇಂದ್ರ ಗುಣ ಸ್ತುತಿಯಿಂದ ಪಡೆಯುವ ಇಂದ್ರ ಪೂಜೆ, ಭವನಸ್ತುತಮುಪ್ಪನೆಗಳ್ತೆ, ಮುಕ್ತಿ ಇವೇ ಹೆಚ್ಚಿನದೆನ್ನುತ್ತಾನೆ.

ಆದಿಪುರಾಣ ಒಂದು ಚಂಪೂ ಕಾವ್ಯವಾಗಿದ್ದು ಒಟ್ಟು ೧೬ ಆಶ್ವಾಸನಗಳಿವೆ. ನಡುನಡುವೆ ಗದ್ಯಭಾಗದ ವಿನ್ಯಾಸದಿಂದ ಕೂಡಿ ವಿವಿಧ ಪದ್ಯಜಾತಿಗಳನ್ನೊಳಗೊಂಡ ೧೬೩೦ ಪದ್ಯಗಳಿವೆ. ವೃಷಭನಾಥನೇ ಮಹಾಪುರಾಣದ ನಾಯಕ. ಆತನ ಕಥೆಯ ಜೊತೆಗೆ ಆತನ ಮಕ್ಕಳಾದ ಭರತ-ಬಾಹುಬಲಿಗಳ ಕಥೆಯೂ ಬರುತ್ತದೆ. ಜಿನಸೇನರ ಪೂರ್ವ ಪುರಾಣ ಈತನ ಕೃತಿಗೆ ಆಕರ. ಇಲ್ಲಿ ಕವಿ ಮೂಲದ ಸನ್ನಿವೇಶವನ್ನು ಕೆಲವೆಡೆ ಹಿಗ್ಗಿಸಿ, ಕುಗ್ಗಿಸಿ, ಕುಶಲ ಸಂಗ್ರಾಹಕನೂ, ಸಂಯೋಜಕನೂ ಆಗಿ ಕಂಡುಬರುತ್ತಾನೆ. ಕಥೆಯನ್ನು ನಿರೂಪಿಸಿರುವ ವಿಧಾನ ವೈವಿಧ್ಯಮಯವಾದುದು. ಒಮ್ಮೊಮ್ಮೆ ಪಾಂಡಿತ್ಯ ಪ್ರದರ್ಶನದ ಆರ್ಭಟ, ಕೆಲವೊಮ್ಮೆ ಮೃದು ಮಧುರ ಮಾತು ಹೀಗೆ ಸಮ್ಮಿಶ್ರಗೊಂಡು ನಡಿಗೆ ಸಾಗುತ್ತದೆ. ಅನೇಕ ವರ್ಣವಿನ್ಯಾಸಗಳಿಂದ ಸುಂದರಸನ್ನಿವೇಶ ರಚನೆಗಳಿಂದ ಈ ಕಾವ್ಯ ಅಪೂರ್ವವೆನಿಸುತ್ತದೆ. ಪಂಪನು ತನ್ನ ಕಾವ್ಯವನ್ನು ಪುಲಿಗೆರೆಯ ತಿರುಳ್ಗನ್ನಡದಲ್ಲೇ ಬರೆದುದಾಗಿ

---

೩. ಕನ್ನಡ ಸಾಹಿತ್ಯ ಸಂಸ್ಕೃತಿ ಕೋಶ, ಚಿ. ಸಿ. ನಿಂಗಯ್ಯ, ಪು. ೧೨.

ಹೇಳಿಕೊಂಡಿದ್ದಾನೆ.

ರಾಜದ್ರಾಜಕ ಮೆನಿಸಿದ
ಸಾಜಿದ ಪುಲಿಗೆರೆಯ ತಿರುಳ್ ಕನ್ನಡದೊಳ್ ನಿ
ರ್ವ್ಯಾಜದೆಸರದೋಳ್ ಪುದಿದಂ
ದೋಜೆಯ ಬಲದಿನಿಯ ಕವಿತೆ ಪಂಪನ ಕವಿತೆ

–ಪಂಪ ಭಾರತ–೧೪, ಪ–೫೮.

ಪಂಪನ್ನು ಪಂಡಿತರು ಪುಲಿಗೆರೆಯವನೆಂದು ನಂಬಲಿ, ನಂಬದಿರಲಿ ಆದರೆ ಪಂಪವಾಣಿಯಲ್ಲಿ ಪುಲಿಗೆರೆ ಅನೇಕ ಸಂದರ್ಭಗಳಲ್ಲಿ ಪುಟನೆಗೆದಿದೆ. ತನ್ನ ಕಾವ್ಯದ ಭಾಷೆ 'ಪುಲಿಗೆರೆಯ 'ಸಾಜಿದ' ಎಂದರೆ ಸಹಜ ಸಿದ್ಧವಾದ ದೇಸಿ ನಿಷ್ಠವಾದ ಅಂದಿನ ಅಧಿಕೃತ ಕನ್ನಡವಾಗಿದ್ದಿತು. ಇದರಿಂದ ಕವಿ ಆ ನಾಡಿನವನೇ ಆ ಸಾಮಿಪ್ಯದವನೇ ಆ ಊರಿನವನೇ ಏಕಾಗಿರಬಾರದು. ಪಂಪನಿಗೂ ಪುಲಿಗೆರೆಗೂ ಇರುವ ಸಂಬಂಧ ಕಪೋಲ ಕಲ್ಪಿತವಲ್ಲ ಸಗಾಢವಾದುದು. ಸದಭಿಸ್ತುತವಾದುದು, ಅವನ ಕಾವ್ಯದ ಗಂಭೀರ ನಾದದ ಪಾಂಚಜನ್ಯ ಮೊಳಗಿರುವದು ಪುಲಿಗೆರೆಯಲ್ಲಿ. ಅವನ 'ತಿರುಳ್ಗನ್ನಡ' ಕವಿರಾಜ ಮಾರ್ಗಕಾರನ 'ಪಳಗನ್ನಡ' ನಯಸೇನನ 'ಪೊಸಗನ್ನಡ' ಆಂಡಯ್ಯನ 'ಅಚ್ಚಗನ್ನಡ' ನಿಜಗುಣರ 'ಬೆಳುಗನ್ನಡ' ಯಾವೂದೂ ಅಲ್ಲ. ಶ್ರೀ ಅವರ ಭಾಷೆಯಲ್ಲಿ ಅದನ್ನು 'ಜೀವಗನ್ನಡ' ಎಂದು ಬೇಕಾದರೆ ಕರೆಯಬಹುದು.

ಹೀಗೆ ಪಂಪಕವಿಯು ಅಣ್ಣಿಗೇರಿಯಲ್ಲಿ ಹುಟ್ಟಿ ಪುಲಿಗೇರಿಯಲ್ಲಿ ಆದಿ ಪುರಾಣ ಕಾವ್ಯ ರಚಿಸಿ ಗದಗ ಪರಿಸರದಲ್ಲಿ ಜೈನ ಧರ್ಮವನ್ನು ಚೀರಸ್ಥಾಯಿಯಾಗುವಂತೆ ಮಾಡಿದ್ದಾನೆ. ಕನ್ನಡ ಸಾಹಿತ್ಯದ ಮೊದಲ ಕವಿ, ಜೈನ ಧರ್ಮದ ಪ್ರವರ್ತಕನಾದ, ಸ್ಥಾಪಕನಾದ ಆದಿನಾಥನ ಚಿತ್ರಣವನ್ನು ಚಿತ್ರಿಸಿದ ಈ ಆದಿಕವಿ ಗದಗ ಪರಿಸರವನ್ನು ಜನ್ಮಭೂಮಿಯನ್ನಾಗಿ ಕರ್ಮಭೂಮಿಯನ್ನಾಗಿ ಮಾಡಿಕೊಂಡು ಸಾಹಿತ್ಯ ಲೋಕದಲ್ಲಿ ಸದಾ ಮಿನುಗುವ ನಕ್ಷತ್ರದಂತೆ ಮಾಡಿದ್ದಾನೆ ಪಂಪ. ಆ ಕಾಲದ ವೀರ ಮೌಲ್ಯಗಳನ್ನು ತನ್ನ ಕೃತಿಯಲ್ಲಿ ಪ್ರತಿಪಾದಿಸಿ ಅಕಾಲದ ಸಾಮಾಜಿಕ, ಆರ್ಥಿಕ ರಾಜಕೀಯ, ಸಾಮಾಜಿಕ ಸಾಂಸ್ಕೃತಿಕ ಚಿತ್ರಣವನ್ನು ಕಣ್ಣುಗೆ ಕಟ್ಟುವಂತೆ ದೃಶ್ಯಕರಿಸಿದ್ದಾನೆ ತನ್ನ ಕೃತಿಗಳಲ್ಲಿ. ಆದಿಕವಿಯೊಬ್ಬ ಆದಿತೀರ್ಥಂಕರ ಚರಿತ್ರೆಯನ್ನು ಗದಗ ಪರಿಸರದ ಭಾಷೆಯಲ್ಲಿ ರಚಿಸಿ ಈ ಪ್ರದೇಶವನ್ನು, ಪರಂಪರೆಯನ್ನು ಚಿರಸ್ಥಾಯಿಯಾಗುವಂತೆ ಮಾಡಿದ್ದಾನೆ ಪಂಪಕವಿ. ಆದ್ದರಿಂದ ಪಂಪ ಕವಿಯು ಈ ಪರಿಸರದಲ್ಲಿ ಹುಟ್ಟಿ ಇಲ್ಲಿನ ಸಾಂಸ್ಕೃತಿಕ, ಪ್ರಕೃತಿಯ ಸೊಗಡನ್ನು ಇಡೀ ಸಾಹಿತ್ಯ ಲೋಕಕ್ಕೆ ತಿಳಿಸಿದ ಕೀರ್ತಿ ಪಂಪನದು.

ಆದಿ ಪುರಾಣವು ಪಂಪನ ಆದಿಕೃತಿ, ಧಾರ್ಮಿಕ ಗ್ರಂಥ, ಹದಿನಾರು ಆಶ್ವಾಸಗಳ ಚಂಪೂಕಾವ್ಯ. ಕವಿಯ ಸ್ವಧರ್ಮ ಶ್ರದ್ಧೆಯ ಸಂಕೇತವಾದ ಈ ಗ್ರಂಥದ ದೇಹ ಪುರಾಣವಾಗಿದ್ದರೂ ಆತ್ಮಕಾವ್ಯವಾಗಿದೆ. ಮೂಲದಲ್ಲಿ ಧಾರ್ಮಿಕತೆಯೇ ಪ್ರಧಾನವಾಗಿದ್ದರೆ ಪಂಪನ ಕೃತಿಯಲ್ಲಿ ಕಾವ್ಯವಾಹಿನಿ ಎಲ್ಲೆಡೆ ಹರಿದಿದೆ. 'ಜಿನಸೇನರ' ಪೂರ್ವ

ಪುರಾಣದಲ್ಲಿ ಕಾವ್ಯಕ್ಕಿಂತ ಪುರಾಣದೃಷ್ಟಿ ಹೆಚ್ಚಾಗಿದ್ದರೆ, ಆದಿಪುರಾಣದಲ್ಲಿ ಪುರಾಣಕ್ಕಿಂತ ಕಾವ್ಯದೃಷ್ಟಿ ಹೆಚ್ಚಾಗಿ ಫಲಿಸಿದೆ. ಆದಿತೀರ್ಥಂಕರ ವೃಷಭನಾಥನ ಕಥೆಯನ್ನುಒಳಗೊಂಡು ಕಾವ್ಯ ಸತ್ವದಿಂದ ಆದಿ ಪುರಾಣವಾಗಿದೆ. ಆದಿ ಕಾವ್ಯವಾಗಿದೆ. ಆದಿತೀರ್ಥಂಕರನ ಭವಾಳಿಯಮೂಲಕ ಮುಕ್ತಿ ಮಾರ್ಗದ ಆತ್ಮವೊಂದು ಜನ್ಮಾಂತರಗಳ ಅನುಭವಗಳ ಅರಿವನಿಂದ ಹಂತ ಹಂತವಾಗಿ ಅರಳುತ್ತ ತನ್ನ ಚರಮ ಸೀಮೆಯ ನಿಲುಗಡೆ ತಲುಪಿದುದನ್ನು ಕವಿ ಮಾರ್ಮಿಕವಾಗಿ ಚಿತ್ರಿಸಿದ್ದಾನೆ. ಭೋಗ–ತ್ಯಾಗಗಳ ಸುಂದರ ಸಮನ್ವಯವನ್ನು ಸಾಧಿಸಿ ಭೋದಿಸುತ್ತದೆ. ಕಾವ್ಯದ ಕೊನೆಯ ಭಾಗದಲ್ಲಿ ಪುರುಚಕ್ರವರ್ತಿಯ ಮಕ್ಕಳಾದ ಭರತ ಬಾಹುಬಲಿಗಳ ಸನ್ನಿವೇಶವು ಪುರಾಣದ ಪ್ರತಿಷ್ಠೆಯನ್ನು ಜೈನಧರ್ಮದ ಸೂಕ್ಷ್ಮಾಂಶಗಳ ವಿವರಣೆಯಿಂದ ಅಧಿಕಗೊಳಿಸಿದರೂ ಕಾವ್ಯನೀತಿ ನಿರೂಪಣೆ ಸ್ಮರಣೆ ಸದಾ ಚಿತ್ರದಲ್ಲಿ ಸ್ಥಿರವಾಗಿ ನಿಲ್ಲುತ್ತದೆ.

ಆದಿತೀರ್ಥಂಕರನ ಚರಿತ್ರೆ ಅನೇಕ ಭವಗಳಲ್ಲಿ ಅನುಭವದಿಂದ ಪರಿಪಾಕಗೊಂಡು ಭೋಗದಿಂದ ತ್ಯಾಗಕ್ಕೆ ತಿರುಗಿ ಕೊನೆಯ ಜನ್ಮದಲ್ಲಿ ವೈರಾಗ್ಯ ಪರಿಣಿತಿ ಪಡೆದು ಕೇವಲ ಜ್ಞಾನಿಯಾದ ಮನುಜನ ಜನ್ಮಯಾತ್ರೆಯ ಪರಮ ಸಿದ್ಧಿಯ ಕಥೆ ಕಾವ್ಯದ ರಸಘಟ್ಟ 'ನೀಲಾಂಜನೆಯ ನೃತ್ಯ ಸಂದರ್ಭ' ಆದಿಪುರಾಣದ ಸಾರವೇ ಇದೆಂದು ಹೇಳಬಹುದು ಎನ್ನುತ್ತಾರೆ. ತೀ. ನಂ. ಶ್ರೀಯವರು ವೃಷಭ ದೇವನಿಗೆ ಈ ಪ್ರಸಂಗದಿಂದ ಸಂಸಾರದ ಅನಿತ್ಯತೆ ಸ್ಪಷ್ಟವಾಗುತ್ತದೆ. ವೈರಾಗ್ಯ ದೃಢಪಡುತ್ತಿದೆ. "ನರ ಭೋಗವೆಂಬೀ ಪನಿಪುಲ್ಲಂ ನಕ್ಕೆ ತೃಷ್ಣ ಪೇವ್‌ವೂದೆಪುದೆ' ಇನ್ ತಿರಿಯಲಾರೆಂ ಭವಾಂಬೋಧಿಯೋಳ್"[೪] ಎಂದು ತಪಸ್ಸಿಗೆ ತೆರಳಿ ಕೇವಲ ಜ್ಞಾನ ಸಂಪಾದಿಸಿ ಪರಿನಿರ್ವಾಣ ಹೊಂದಿದನು. ಆದಿಪುರಾಣದ ಉತ್ತರಾರ್ಧದಲ್ಲಿ ಭರತ ಬಾಹುಬಲಿಗಳ ಕತೆ ಮೂಡಿಬಂದಿದೆ. ಆದಿತೀರ್ಥಂಕರನ ಧರ್ಮ ದಿಗ್ವಿಜಯಕ್ಕೂ ಪ್ರಥಮ ಚಕ್ರವರ್ತಿಯ ಲೌಕಿಕ ದಿಗ್ವಿಜಯಕ್ಕೂ ಇರುವ ಭೇದ ಇಲ್ಲಿ ಕಾಣುತ್ತದೆ. ಜೈನ ಧರ್ಮದ ನಿರೂಪಣೆಗಾಗಿಯೇ ಹೊರಟಿರುವ ಈ ಪುರಾಣ ಕಾವ್ಯದಲ್ಲಿ ಮತ ಪ್ರಕ್ರಿಯೇ, ಧರ್ಮ ವಿವರಣೆ, ನೀತಿ ನಿರೂಪಣೆ ಅನಿವಾರ್ಯವಾಗಿದೆ.

ಕವಿ ಕಾವ್ಯಕ್ಕೆ ಕೊಟ್ಟ ಹೆಸರಾದರೂ ಓದುಗರು ಮೆಚ್ಚಿಕೆಯಿಂದ 'ಪಂಪಭಾರತ' ಎಂದೇ ಕರೆಯುವರು. ೧೪ ಆಶ್ವಾಸಗಳ ಚಂಪೂಕಾವ್ಯ. ಪಂಪನ ಲೌಕಿಕ ಕೃತಿ, ಪಂಪನು ಕ್ಷಾತ್ರಯುಗದ ಉನ್ನತ ವ್ಯಕ್ತಿಗಳ ಉಜ್ವಲ ಚರಿತ್ರೆಯನ್ನು ತನ್ನ ಭಾರತದ ಪಾತ್ರಗಳಲ್ಲಿ ಸಮೀಕರಿಸಿದ್ದಾನೆ. ಮಾನವನಲ್ಲಿಯ ದೋಷ, ದೌರ್ಬಲ್ಯಗಳನ್ನು ಗಮನಿಸಿಯೂ ಅವನ ಗುಣಾತಿಶಯಗಳನ್ನು ಗಣಿಸಿ ಮನ್ನಣೆ ನೀಡಿದ್ದಾರೆ. ಪಂಪನ ಆಶ್ರಯದಾತ ಅರಿಕೇಸರಿಯೇ ಇಲ್ಲಿ ಕಥಾನಾಯಕ. ಇವನ ಕಥೆಯನ್ನು ಅರ್ಜುನನೊಡನೆ 'ತಗಚ್ಚಿ' ಹೇಳುವುದು. ಪಂಪನಿಗೆ ಪ್ರಿಯವಾದುದು. ವಿಕ್ರಮಾರ್ಜುನ ವಿಜಯವು ಲೌಕಿಕ ಕಾವ್ಯವಾದುದರಿಂದ ಪಂಪನಿಗೆ ಇಲ್ಲಿ ಸ್ವಾತಂತ್ರ್ಯ ದೊರೆತಿದೆ. ಸಮಕಾಲೀನ ಇತಿಹಾಸ ಚಿತ್ರಣಕ್ಕೆ ಅವಕಾಶ ಸಿಕ್ಕಿದೆ. ಕೃಷ್ಣ ಮಹಿಮೆಗೆ ಇಲ್ಲಿ ಎಡೆಯಿಲ್ಲ. ಭಾರತವು ಇಲ್ಲಿ ಒಂದು 'ಮಾನವ

---

೪. ಆದಿಪುರಾಣ–ಪಂಪ.

ಸಂಘರ್ಷದ' ಕಥೆಯಾಗಿದೆ. ಒಂದೊಂದು ಪಾತ್ರವು ಒಂದೊಂದು ಗುಣದ ಪ್ರತೀಕವಾಗಿದೆ. ಅಭಿಮಾನ ಧನನಾದ ಸುಯೋಧನ, ಪಂಪನ ಉದಾರ, ಉದಾತ್ತ ದೃಷ್ಟಿಯ ನಿರ್ವಾಣ ಪಂಪನು ಸೃಷ್ಟಿಸಿರುವ ಕರ್ಣನ ಪಾತ್ರದಲ್ಲಿ ಗ್ರಿಕ್ ರುದ್ರನಾಟಕಗಳಲ್ಲಿ ಬರುವ ದುರಂತ ನಾಯಕನ ಗುಣವಿಶೇಷಗಳೆಲ್ಲವೂ ಅಡಕವಾಗಿವೆ. ಆದ್ದರಿಂದ "ವಿಕ್ರಮಾರ್ಜುನ ವಿಜಯವು ಕನ್ನಡದ ಕನ್ನಡಿಯಲ್ಲಿ ಬಿದ್ದ ವ್ಯಾಸಭಾರತದ ನೆರಳಲ್ಲ : ಅಲ್ಲಿಯ ಚಿನ್ನವನ್ನು ಶೋಧಿಸಿ ತಂದು ಹೊಸದಾಗಿ ಎರಕ ಹೊಯ್ದು ಒಪ್ಪವಿಟ್ಟು ನಿಲ್ಲಿಸಿದ ನೂತನ ಪುತ್ಥಳಿ" ಎನ್ನುತ್ತಾರೆ ತೀನಂಶ್ರೀಯವರು.

## ೧. ರನ್ನ :

ವಾಗ್ದೇವಿಯ ಭಂಡಾರದ ಮುದ್ರೆಯನ್ನೊಡದ 'ಕವಿರತ್ನನೀತ ರನ್ನನ ಜನನ ಕ್ರಿ.ಶ. ೯೪೯ರ ಸಾಮ್ಯ ಸಂವತ್ಸರದಲ್ಲಿ ಇವನ ಊರು 'ಮುಧೋಳ' ಮತದಿಂದ ಜೈನ. ತಂದೆ ಜಿನವಲ್ಲಬೇಂದ್ರ, ತಾಯಿ ಅಬ್ಬಲಬ್ಬೆ 'ಬಳೆಗಾರರ ಕುಲದಲ್ಲಿ ಹುಟ್ಟಿದರೂ ತನ್ನ ಸಂಕಲ್ಪ ಸಾಮರ್ಥ್ಯದಿಂದ ವಿದ್ಯಾಬುದ್ಧಿಗಳಿಸಿ ಮಹಾಕೃತಿಗಳನ್ನು ನಿರ್ಮಿಸಿದ.

ರನ್ನನ ವಿದ್ಯಾ ಗುರುಗಳು ಅಜಿತಸೇನಾಚಾರ್ಯರು. ರನ್ನನು ವೃತ್ತಿಯಲ್ಲಿ ತೃಪ್ತಿಕಾಣದೆ ವಿದ್ಯೆಯನ್ನರಿಸುತ್ತ ಪ್ರಸಿದ್ಧ ಜೈನ ಶಿಕ್ಷಣ ಕೇಂದ್ರವಾಗಿದ್ದ ಬಂಕಾಪುರಕ್ಕೆ ಬಂದಾಗ ಈ ಆಚಾರ್ಯರ ಧರ್ಮ ಬೋಧನೆಯನ್ನು ಕೇಳುವ ಅವಕಾಶ ದೊರೆಯಿತು. ಈ ಸಮಯದಲ್ಲಿ ಆಚಾರ್ಯರು ರನ್ನನಲ್ಲಿದ್ದ ಕುತೂಹಲ, ಶ್ರದ್ಧೆ, ಏಕಾಗ್ರತೆ ಉತ್ಸಾಹವನ್ನು ಅವಲೋಕಿಸಿ ವಿದ್ಯೆಯನ್ನು ಕೊಡಿಸಲು ಏರ್ಪಾಟು ಮಾಡಿದರು. ಅಜಿತಸೇನಾಚಾರ್ಯರ ದರ್ಶನ ಪಡೆಯಲು ನಾಡಿನಾದ್ಯಂತ ಅನೇಕ ಆಳರಸಾದಿಯಾಗಿ ಶ್ರಾವಕರು ಬಂಕಾಪುರಕ್ಕೆ ಬರುತ್ತಿದ್ದರು. ಒಮ್ಮೆ ತಲಕಾಡಿನ ಗಂಗರಾಜನ ಮಂತ್ರಿ ಚಾವುಂಡರಾಯನು ಬಂಕಾಪುರಕ್ಕೆ ಬಂದಾಗ ರನ್ನನ ಪರಿಚಯವಾಗಿ ಈತನಲ್ಲಿಯ ಪ್ರತಿಭೆ ಮತ್ತು ಶೌರ್ಯವನ್ನು ಮೆಚ್ಚಿದ ಚಾವುಂಡರಾಯ, ರನ್ನನಲ್ಲಿದ್ದ ಸಾಹಿತ್ಯಿಕ ತಿಳುವಳಿಕೆ ಮತ್ತು ಜೈನ ಧರ್ಮದ ಬಗ್ಗೆ ಇದ್ದ ಕಾಳಜಿಯನ್ನು ಕಂಡುಕೊಂಡು ಇಬ್ಬರೂ ಪರಸ್ಪರ ಆತ್ಮೀಯರಾಗುತ್ತಾರೆ. ನಂತರದಲ್ಲಿ ಗುರುಗಳ ದರ್ಶನಕ್ಕೆ ಆಗಮಿಸಿದ ಲಕ್ಕುಂಡಿಯ ದಾನಚಿಂತಾಮಣಿ ಅತ್ತಿಮಬ್ಬೆ ರನ್ನನ ಕವಿತಾ ಶಕ್ತಿಯನ್ನು ಗುರುತಿಸುತ್ತಾಳೆ. ಇದನ್ನರಿತ ಅಜಿತ ಜಿನಾಚಾರ್ಯರು ಅತ್ತಿಮಬ್ಬೆಗೆ ರನ್ನನಿಗೆ ಆಶ್ರಯ ನೀಡುವಂತೆ ಹೇಳಿ ರನ್ನನನ್ನು ಲಕ್ಕುಂಡಿಗೆ ಅತ್ತಿಮಬ್ಬೆಯೊಂದಿಗೆ ಕಳುಹಿಸಿ ಕೊಡುತ್ತಾನೆ. ಅತ್ತಿಮಬ್ಬೆಯು ಈತನಿಂದ 'ಅಜಿತನಾಥ ಪುರಾಣ' ಎಂಬ ಮಹಾ ಕಾವ್ಯವನ್ನು ಬರೆಯಿಸುತ್ತಾಳೆ. ಲಕ್ಕುಂಡಿಯಲ್ಲಿಯೇ ಈ ಕೃತಿ ರಚನೆಯಾಗಿದ್ದು ಐತಿಹಾಸಿಕ ದಾಖಲೆಯಾಗಿದೆ. ಅಜಿತಸೇನಾಚಾರ್ಯರಂತೆ ಚಾವುಂಡರಾಯನ ಇನ್ನೊಬ್ಬ ಗುರುಗಳಾದ ನೇಮಿಚಂದ್ರ ಸಿದ್ಧಾಂತ ಚಕ್ರವರ್ತಿಗಳು ಧರ್ಮಗ್ರಂಥಗಳ ಹಾಗೂ ಧರ್ಮ ತತ್ವಗಳ ಬಗೆಗಿನ ರನ್ನನ ಹಸಿವನ್ನು ಬಹುಮಟ್ಟಿಗೆ ತಣಿಸಿದರು. ಅವರಿಬ್ಬರ ನಡುವೆ ಧಾರ್ಮಿಕ ವಿಷಯಗಳಿಗೆ ಸಂಬಂಧಿಸಿದಂತೆ ಹಲವಾರು ಚರ್ಚೆಗಳು ನಡೆದಿರಬಹುದು. 'ಅಜಿತ ಪುರಾಣ'ದಲ್ಲಿ ರನ್ನನು ಧಾರ್ಮಿಕ ವಿವರಗಳನ್ನು ಅತ್ಯಂತ ಸರಳವಾಗಿ ನಿರೂಪಿಸಿರುವದನ್ನು

ಗಮನಿಸಿದರೆ ಅವನು ಧರ್ಮ ತತ್ವಗಳನ್ನು ಇಡಿಯಾಗಿ ಅರ್ಥೈಸಿಕೊಂಡಿದ್ದು ವ್ಯಕ್ತವಾಗುತ್ತದೆ.

ರನ್ನನ ಸಾರಸ್ವತ ಜೀವನದಂತೆ ಅವನ ಸಾಂಸಾರಿಕ ಜೀವನವು ಅತ್ಯಂತ ಸಫಲವೂ ತೃಪ್ತಿಕರವೂ ಆಗಿತ್ತು. ಜಕ್ಕಿ, ಶಾಂತಿ ಎಂಬ ಇಬ್ಬರ ಹೆಂಡಂದಿರು ತನಗಿದ್ದರು ಎಂದು ಪ್ರೀತಿ ಹಾಗೂ ಆತ್ಮೀಯತೆಯಿಂದ ಹೇಳಿಕೊಳ್ಳುತ್ತಾನೆ. ಒಂದು ಗಂಡು ಒಂದು ಹೆಣ್ಣು ಮಗು. ತನ್ನ ಇಬ್ಬರು ಪೋಷಕರಾದ ಚಾವುಂಡರಾಯ ಹಾಗೂ ಅತ್ತಿಮಬ್ಬೆಯರ ನೆನಪಿನಲ್ಲಿ ತನ್ನ ಮಗನಿಗೆ 'ರಾಯ' ಎಂದು ಮಗಳಿಗೆ 'ಅತ್ತಿಮಬ್ಬೆ' ಎಂದು ಹೆಸರಿಡುವ ಮೂಲಕ ರನ್ನ ತನ್ನ ಕೃತಜ್ಞತೆಯನ್ನು ವ್ಯಕ್ತಪಡಿಸಿದ್ದಾನೆ. ರನ್ನನು ಐದು ಕೃತಿಗಳ ರಚನೆ ಮಾಡಿದ್ದರ ಉಲ್ಲೇಖವಿದೆ. ಆದರೆ ಗಧಾಯುದ್ಧ ಹಾಗೂ ಅಜಿತ ಪುರಾಣ ಎರಡು ಕೃತಿಗಳು ಮಾತ್ರ ಉಪಲಬ್ಧವಾಗಿವೆ. ಇನ್ನುಳಿದ ಮೂರು ಕೃತಿಗಳು ಉಪಲಬ್ಧವಿಲ್ಲ. ಆದರೆ ಕೇಶಿರಾಜನ ಶಬ್ದಮಣಿ ದರ್ಪಣದಲ್ಲಿ ರನ್ನ ಕವಿ ಬರೆದ ನಿಘಂಟು ಕೃತಿ ರನ್ನ ಕಂದದಿಂದ ಕೆಲವು ವಿವರಣೆ ತೆಗೆದುಕೊಂಡು ವಿವರಿಸಿದ್ದಾನೆ. ಆದರೆ ಆ ಕೃತಿ ರನ್ನದೇ ಎಂಬುದು ದೃಢಪಟ್ಟಿಲ್ಲ.

ಮೊದಮೊದಲು ಸಾಮಂತರಲ್ಲಿ ಆಶ್ರಯ ಪಡೆದರೂ ನಂತರ ರನ್ನ ಕವಿ ಸಾಮ್ರಾಟರಿಂದ ಪೋಷಿಸಲ್ಪಟ್ಟ. ಹೀಗಾಗಿ ರಾಜಾಶ್ರಯ ದೂಡನೆ ಕೀರ್ತಿ ಕಾಣಿಕೆಗಳು ಬಿರುದುಗಳು ಹೇರಳವಾಗಿ ಪ್ರಾಪ್ತವಾದವು. ದೊರೆಯಿಂದ ಮದನಾವತಾರ, ಕನಕದಂಡ, ಚಾಮರ, ಆನೆ–ಕುದುರೆ ಮತ್ತು ಭತ್ತಗಾವಗ್ರಾಮ ದೊರಕಿತು. ಇವಕ್ಕೆಲ್ಲ ಕೀರಿಟವಿಟ್ಟಂತೆ ಕವಿಚಕ್ರವರ್ತಿ, ಬಿರುದೂ ದೊರೆಯಿತು.

**ಅಜಿತ ಪುರಾಣ :**

ರನ್ನ ಕವಿಯ ಆಗಮಿಕ ಕೃತಿ ಇದು. ಈ ಕೃತಿಯ ಪ್ರತಿಯೊಂದು ಆಶ್ವಾಸದ ಕೊನೆಯಲ್ಲಿನ 'ಶ್ರೀಮದಭಿನವ ಕವಿ ಚಕ್ರವರ್ತಿ ಕವಿರತ್ನ ವಿರಚಿತ ಶ್ರೀದಾನ ಚಿಂತಾಮಣಿ ನಿರ್ಮಾಪಿತ' ಎಂಬ ಹೇಳಿಕೆಯಿಂದ ರನ್ನನು ಇದನ್ನು ಅತ್ತಿಮಬ್ಬೆಯ ಕೋರಿಕೆಯ ಮೇರೆಗೆ ರಚಿಸಿದ್ದು ತಿಳಿದು ಬರುತ್ತದೆ. ಅಜಿತ ಪುರಾಣವು ೧೨ ಆಶ್ವಾಸಗಳ ಚಂಪೂಕಾವ್ಯ. ಇದರ ಮೊದಲ ಹಾಗೂ ಕೊನೆಯ ಆಶ್ವಾಸಗಳಲ್ಲಿ ಅತ್ತಿಮಬ್ಬೆಯ ವಿಚಾರವಿದೆ. ೨ ರಿಂದ ೮ನೆಯ ಆಶ್ವಾಸದವರಗೆ ಅಜಿತನಾಥನ ಕಥೆಯು ೬ ರಿಂದ ೧೨ನೆಯ ಆಶ್ವಾಸದ ವರೆಗೆ ಸಗರ ಚಕ್ರವರ್ತಿ ವೃತ್ತಾಂತವೂ ವಿವರಿಸಲ್ಪಟ್ಟಿದೆ.

ಪಂಪನು ತನ್ನ ಆದಿಪುರಾಣದಲ್ಲಿ ಆದಿನಾಥರ ಕಥೆಯೊಂದಿಗೆ ಪ್ರಥಮ ಚಕ್ರವರ್ತಿ ಭರತನ ಕಥೆಯನ್ನು ನಿರೂಪಿಸಿದಂತೆ ರನ್ನನು ಅಜಿತ ಪುರಾಣದಲ್ಲಿ ದ್ವಿತಿಯ ಚಕ್ರವರ್ತಿ ಸಗರನ ಕಥೆಯನ್ನು ವಿವರಿಸುತ್ತಾನೆ. ರನ್ನನು ತನ್ನ ಅಜಿತ ಪುರಾಣಕ್ಕೆ ಮೂಲ ವಸ್ತುವನ್ನು ಗುಣಭದ್ರಾಚಾರ್ಯನ 'ಉತ್ತರ ಪುರಾಣದಿಂದ ಪಡೆದಿದ್ದಾನೆ. ಆದಿಪುರಾಣದ ಭಾವಾವಳಿಯ ಭವ್ಯ ಚಿತ್ರವು ಇಲ್ಲಿ ಸಿಗಲಾರದು. ಈ ಕೊರತೆಯನ್ನು ಪಂಚಕಲ್ಯಾಣಗಳ ವಿಸ್ತೃತ ವರ್ಣನೆಯ ಮೂಲಕ ತುಂಬಿದ್ದಾನೆ, ವೈರಾಗ್ಯಭಾವ ವರ್ಣನೆ ಜಿನಶಿಶುವಿನ ಜನ್ಮಾಭೀಷೇಕ, ಪರಿನಿಷ್ಕಮಣ ನಿಸರ್ಗ ವರ್ಣನೆಯ ಭಾಗಗಳಲ್ಲಿ ಕವಿಯ ಪ್ರತಿಭೆ ವ್ಯಕ್ತಗೊಂಡಿದೆ.

'ಜಿನ ಧರ್ಮ ಪತಾಕೆ' ಎಂದು ಅತ್ತಿಮಬ್ಬೆಯನ್ನು ಕೊಂಡಾಡಿದ ಕವಿ ಪೌರಾಣಿಕ ಕಾವ್ಯದಲ್ಲಿ ಐತಿಹಾಸಿಕ ವ್ಯಕ್ತಿತ್ವವೊಂದರ ಚಿತ್ರವನ್ನು ಸೇರಿಸಿದ್ದು ಕವಿಗೆ ಅವಳ ಬಗೆಗಿನ ಭಕ್ತಿ ಹಾಗೂ ಗೌರವಗಳಿಗೆ ನಿದರ್ಶನ ಅತ್ತಿಮಬ್ಬೆಯ ಪಾತ್ರ ಕಾವ್ಯದ ಆರಂಭ ಹಾಗೂ ಅಂತ್ಯಗಳಲ್ಲಿ ಮಾತ್ರ ಬರುತ್ತದೆ. ಆದರೂ ಇಡಿಕಾವ್ಯ ಅವಳ ಚರಿತ್ರೆಯಿಂದಲೇ ಪಾವನವಾಗಿದೆ. ಆಕರ್ಷಕವಾಗಿದೆ. ವೆಂಗಿ ಮಂಡಲದ ಕಮ್ಮೆನಾಡಿನ ಪುಂಗನೂರು, ಅಲ್ಲಿ ನಾಗಮಯ್ಯ ಎಂಬ ಕೌಂಡಿನ್ಯ ಗೋತ್ರದ ದ್ವಿಜಾಗ್ರಣಿ ಅವನಿಗೆ ಮಲ್ಲಪಯ್ಯ ಹಾಗೂ ಪುನ್ನಮಯ್ಯ ಎಂಬ ಇಬ್ಬರು ಗಂಡು ಮಕ್ಕಳು ಮಲ್ಲಪಯ್ಯನ ಹೆಂಡತಿ ಅಪ್ಪಕಬ್ಬೆ ಅವರಿಗೆ ಐದು ಜನ ಗಂಡು, ಮೂರು ಹೆಣ್ಣು ಮಕ್ಕಳು, ಈ ಮೂವರಲ್ಲಿ ಅತ್ತಿಮಬ್ಬೆ ಹಾಗೂ ಗುಂಡಮಬ್ಬೆ ಇಬ್ಬರನ್ನು ತೈಲಪನ ಮಹಾಮಂತ್ರ ಧಲ್ಲಪನ ಹಿರಿಯಮಗ ನಾಗದೇವನಿಗೆ ಕೊಟ್ಟು ವಿವಾಹ ಮಾಡಿದ್ದರು. ಅತ್ತಿಮಬ್ಬೆಗೆ ಅಣ್ಣಿಗದೇವ ಎಂಬ ಮಗನಿದ್ದ. ನಾಗದೇವನ ಅಕಾಲ ಮರಣಕ್ಕೆ ತುತ್ತಾದಾಗ ಗುಂಡುಮಬ್ಬೆಯು ಸಹ ಗಮನ ಮಾಡಿದಳು. ಪತಿಯ ಮರಣ ಹಾಗೂ ತಂಗಿಯ ಸಹಗಮನಗಳು ಅತ್ತಿಮಬ್ಬೆಯ ಜೀವನ ಕ್ರಮವನ್ನೇ ಬದಲಿಸಿದವು. ಶಕಾರವನ್ನು ಉಪವಾಸಾದಿ ವ್ರತಗಳಿಂದ, ಧನವನ್ನು ಅನವರತ ದಾನಗಳಿಂದ ಸವೆಸತೊಡಗಿದಳು. ಅವಳ ಆಧ್ಯಾತ್ಮಿಕ ಸಾಧನೆ ಮುನ್ನಡೆಯಿತು. ದಾನಗುಣದೊಂದಿಗೆ ಶೌರ್ಯವನ್ನು ಮೈಗೂಡಿಸಿಕೊಂಡಿದ್ದ ಅತ್ತಿಮಬ್ಬೆಯು ಜಿನ ಜಿನನಿಗೂ ಮಿಗಿಲು ಎಂದು ರನ್ನ ವರ್ಣಿಸುತ್ತಾನೆ. ಹಾಗೆ ನೋಡಿದರೆ ಜಿನ ಜನನಿಗಿಂಥ ಅತ್ತಿಮಬ್ಬೆಯು ಒಂದು ಕೈ ಮೇಲೆನಿಸುತ್ತಾಳೆ. ಯಾಕೆಂದರೆ ಜಿನ ಜನನಿಯು ಜಿನನನ್ನು ಕೇವಲ ೯ ತಿಂಗಳುಗಳ ಕಾಲ ಮಾತ್ರ ಗರ್ಭದಲ್ಲಿ ಧರಿಸುತ್ತಾಳೆ. ಆದರೆ ಅತ್ತಿಮಬ್ಬೆ ಸದಾಕಾಲ ಜಿನನನ್ನು ಮನದಲ್ಲಿ ಧರಿಸುವುದರಿಂದ ಅವಳೋಡಲು ಎಂಬ ಧ್ವನಿ ಇದ್ದಂತಿದೆ. ಅತ್ತಿಮಬ್ಬೆಯ ಧವಳ ವ್ಯಕ್ತಿತ್ವ ಹಾಗೂ ಚಾರಿತ್ರ್ಯಗಳನ್ನು ರನ್ನನು ಪದ್ಯವೊಂದರಲ್ಲಿ ಅಪೂರ್ವವಾಗಿ ಸೆರೆಹಿಡಿಯುತ್ತಾನೆ. ಅತ್ತಿಮಬ್ಬೆಯ ಅನುಪಮ ಮೂರ್ತಿಯನ್ನು ಕಡೆದು ನಿಲ್ಲಿಸುತ್ತಾನೆ ಕಣ್ಣೆದುರಿಗೆ.

"ಬಿಳಿಮರಳೆಯಂತೆ ಗಂಗಾ
ಜಳದಂತೆಸೆವ ಅಜಿತಸೇನ ಮುನಿ ಪತಿಯು ಗುಣಾ
ವುಳಿಯಂತೆ ನೆಗಳ್ದಿ ಕೊಪಣಾ
ಚಳದಂತೆ ಪವಿತ್ರವತ್ತಿಮಬ್ಬೆಯ ಚರಿತಂ"

–ರನ್ನ – ಅಜಿತನಾಥ ಪುರಾಣ.

ಅತ್ತಿಮಬ್ಬೆಯ ಚಾರಿತ್ರ್ಯದೊಂದಿಗೆ ಅವಳ ದಾನ ಗುಣವನ್ನು ಶಾಂತಿ ಪುರಾಣದ ಸಾವಿರ ಪ್ರತಿ ಮಾಡಿ ಹಂಚಿದ್ದನ್ನು ಮಣಿಖಚಿತ ಜಿನಬಿಂಬಗಳನ್ನು ದಾನ ಮಾಡಿದನ್ನು ಪ್ರವಾಡ ಸದೃಶ್ಯ ಮಹಾಕಾರ್ಯಗಳನ್ನು ವಿವರವಾಗಿ ಎದೆ ತುಂಬಿ ವರ್ಣಿಸುವ ಕವಿ 'ಮಹಾಸತಿ ತಿಲಕೆಯಂ ಅತ್ತಿಮಬ್ಬೆರಸಯುಂ ಪೆಸಗೊಳ್ಗುದು ಪುಣ್ಯಕಾರಣಂ' ಎಂದು ವರ್ಣಿಸುತ್ತಾನೆ. ಅಜಿತಪುರಾಣದಲ್ಲಿ ಅತ್ತಿಮಬ್ಬೆಯ ವರ್ಣಿಯು ತೀರ್ಥಂಕರ ಮೂರ್ತಿಯ ಇಕ್ಕೆಲಗಳಲ್ಲಿ ಬೆಳಗುವ ನಂದಾದೀಪಿಗೆಯಂತೆ ಅಪೂರ್ವಕಾಂತಿಯಿಂದ ಪ್ರಜ್ವಲಿಸಿ ಓದುಗರನ್ನು ತನ್ಮಯರನ್ನಾಗಿಸುತ್ತದೆ.

**ಗದಾಯುದ್ಧ (ಸಾಹಸ ಭೀಮವಿಜಯ) :**

ಹತ್ತು ಆಶ್ವಾಸಗಳಿಂದ ಕೂಡಿದ ಗದಾಯುದ್ಧ ರನ್ನ ಕವಿಯ ಲೌಕಿಕ ಕೃತಿ ಕಥಾನಾಯಕ ಇಮ್ಮಡಿ ತೈಲಪನನ್ನು ಪೌರಾಣಿಕ ಭೀಮನಿಗೆ ಸಮಿಕರಿಸಿ ಸಿಂಹಾವಲೋಕನ ಕ್ರಮದಿಂದ ರಚಿಸಿದ್ದಾನೆ. ರನ್ನನ ಕೃತಿರತ್ನ ವ್ಯಾಸಭಾರತದ ಗದಾಸೌಪ್ತಿಕ ಪರ್ವದ ಕಥಾನಕ. ಪಂಪ ಭಾರತದ ೧೩ನೆಯ ಆಶ್ವಾಸದ ಭಾರತ ಯುದ್ಧದ ಕೊನೆಯ ದೃಶ್ಯ ರನ್ನನಿಗೆ ಪ್ರೇರಣೆ ಭಾಸನ ಊರುಭಂಗ, ಭಟ್ಟನಾರಾಯಣನ ವೇಣಿ ಸಂಹಾರಗಳ ಪ್ರಭಾವವೂ ಇದೆ. ಹಿಂದಿನ ಕಥೆಯನ್ನು ಸಿಂಹಾವಲೋಕನ ಕ್ರಮದಿಂದ ಹೇಳಿರುವುದು ರನ್ನನ ವೈಶಿಷ್ಟ್ಯ.

ಹೀಗೆ ರನ್ನನು ಗದಗ ಪರಿಸರವನ್ನೇ ತನ್ನ ಕರ್ಮಭೂಮಿಯನ್ನಾಗಿ ಮಾಡಿಕೊಂಡು ಸ್ವಧರ್ಮವನ್ನು ರಾಷ್ಟ್ರಧರ್ಮಕ್ಕೇರಿಸಿದ ಕೀರ್ತಿ ಈತನಿಗೆ ಸಲ್ಲುತ್ತದೆ. ಸಾಮಾನ್ಯ ಕುಟುಂಬವೊಂದರಲ್ಲಿ ಜನಿಸಿ ಸಾಮಾನ್ಯ ಪರಿಸರದಲ್ಲಿ ಬೆಳೆದ ರನ್ನ ಅದನ್ನು ಮೀರಿ ಆಶ್ಚರ್ಯಕರ ಎತ್ತರಕ್ಕೆ ಬೆಳೆಯುತ್ತಾನೆ. ಗುರುಗಳ, ಮಿತ್ರರ, ಆಶ್ರಯದಾತ, ದಾತೆಯರ ಪ್ರಭಾವ, ಪ್ರೇರಣೆ, ಪೋಷಣೆಗಳಿಂದ ಸಾಣೆ ಹಿಡಿಯಲ್ಪಟ್ಟು ರತ್ನವಾಗಿ ಬೆಳಗಿದ ಕವಿ ರನ್ನ ಶಕ್ತಿ ಹಾಗೂ ನಾಟಕೀಯತೆ ರನ್ನನವೇ ಆದ ಎರಡು ವಿಶಿಷ್ಟ ಅಂಶಗಳು ಪಾತ್ರಗಳನ್ನು ಮುಖಾಮುಖಿಯಾಗಿ ನಿಲ್ಲಿಸುವುದು ಅರಳು ಹುರಿದಂತಹ ಸಂಭಾಷಣೆ ಭಾಷಕ್ಕೆ ತಕ್ಕ ಭಾಷೆ, ಶಕ್ತಿಯುತವಾದ ಗಂಡು ಶೈಲಿ, ಅವಶ್ಯವೆನಿಸಿದಾಗ ಸಿಂಹಾವಲೋಕನ ಇವೆಲ್ಲ ರನ್ನನ ಕಾಣಿಕೆಗಳೆಂದೇ ಹೇಳಬೇಕು. ಅತ್ತಿಮಬ್ಬೆಯನ್ನು ಚರಿತ್ರೆಯಲ್ಲಿ ಸ್ಥಿರಸ್ಥಾಯಿಯಾಗುವಂತೆ ಮಾಡಿದ ರನ್ನ ಕವಿಯು ಆ ಕಾಲ ಘಟ್ಟದ ಸಾಮಾಜಿಕ, ಧಾರ್ಮಿಕ, ಸಾಂಸ್ಕೃತಿಕ ಮೌಲ್ಯಗಳನ್ನು ತನ್ನ ಕೃತಿಗಳ ಮೂಲಕ ಪ್ರತಿಪಾದಿಸಿದ್ದಾನೆ ರನ್ನಕವಿ.

**೨. ಶ್ರೀಧರಾಚಾರ್ಯ :**

ಗದಗ ಪರಿಸರದಲ್ಲಿದ್ದ ಪ್ರಾಚೀನ ಕವಿಗಳು ಕಲಿಗಳಾಗಿ ಕೃತಿ ರಚನೆ ಮಾಡಿದ್ದಾರೆ. ಅಷ್ಟೇ ಅಲ್ಲದೇ ಲೌಕಿಕ–ಅಲೌಕಿಕ ಸಾಹಿತ್ಯ ಮಾರ್ಗವನ್ನು ಹುಟ್ಟಿಹಾಕಿದ್ದಾರೆ. ಶ್ರೀಧರಾಚಾರ್ಯರನು ಶಿಷ್ಟ ಸಾಹಿತ್ಯ ಪರಂಪರೆಗೆ ವಿಶೇಷವಾದ ಕೊಡುಗೆಯನ್ನು ನೀಡಿದ್ದಾನೆ. ಈತನು ಗದಗ ಜಿಲ್ಲೆಯ ಮೊದಲ ಜೈನ ಕವಿ ಈಗೀನ ಗದಗ ಜಿಲ್ಲೆಯ ನರಗುಂದದವನು. ಜಾತಕ ತಿಲಕ ಮತ್ತು ಚಂದ್ರಪ್ರಭಾ ಚರಿತೆ ಎಂಬ ಎರಡು ಕೃತಿಗಳ ರಚನೆ ಮಾಡಿದ್ದಾನೆ. ಈತನೇ ತನ್ನ ಜಾತಕ ತಿಲಕ ಕೃತಿಯ ಕೊನೆಯಲ್ಲಿ "ಧಾತ್ರಿಯನ್ ಅಹವಮಲ್ಲ ಭೂಮಿ ಪಾಳಕನ್ ಎಸೆದಾಳ್ಗೆ" ಎಂದು ಹೇಳಿರುವುದರಿಂದ ಈತನ ಕಾಲವನ್ನು ಕಲ್ಯಾಣದ ಚಾಲುಕ್ಯ ಮನೆತನದ ಅರಸನಾದ ಅಹವಮಲ್ಲನ (ಕ್ರಿ.ಶ. ೧೦೨೨) ಆಸುಪಾಸಿನವನೆಂದು ಹೇಳಬಹುದು. ಶಕವರ್ಷ ೯೭೧ರಲ್ಲಿ (ಕ್ರಿ.ಶ. ೧೦೪೯)ರಲ್ಲಿ ಜಾತಕ ತಿಲಕ ಬರೆದ ಎಂದು ಹೇಳಿಕೊಂಡಿದ್ದಾನೆ. ಈತನ ಮತ್ತೊಂದು ಕೃತಿಯಾದ 'ಚಂದ್ರಪ್ರಭ ಚರಿತೆ' ಕೃತಿ ಲಭ್ಯವಾಗಿಲ್ಲ. ಜಾತಕ ತಿಲಕ ಕೃತಿಯು ಜ್ಯೋತಿಷ್ಯಕ್ಕೆ ಸಂಬಂಧಿಸಿದ ಕೃತಿ, ಕಂದಪದ್ಯದಲ್ಲಿರುವ ಈ ಕೃತಿ ೨೪

ಅಧಿಕಾರಗಳಲ್ಲಿ ವಿಸ್ತೃತವಾಗಿದೆ. ಜ್ಯೋತಿಷ್ಯದ ಪ್ರಯೋಜನ, ಗ್ರಹಬಲ, ಅರಿಷ್ಟನಾಶ, ಪ್ರಸಾವದಿನ, ಶಿಶುಮರಣ ಮುಂತಾದ ಅನೇಕ ಪ್ರಯೋಜನಕಾರಿ ವಿಷಯಗಳನ್ನು ಒಳಗೊಂಡ ಈ ಕೃತಿಯನ್ನು ವಿದ್ವತ್ ಕುಲಮುಖ ತಿಲಕ, ದೈವಜ್ಞವದನ ತಿಲಕ, ತ್ರೈಲೋಕ್ಯ ತಿಲಕ ಎಂದು ಅಭಿಮಾನದಿಂದ ಕವಿ ಜಾತಕ ತಿಲಕವನ್ನು ಕವಿ ಶ್ರೀಧರಾಚಾರ್ಯರನು ಪ್ರಶಂಸಿದ್ದಾನೆ. ಕನ್ನಡ ಸಾಹಿತ್ಯದ ಮೊದಲ ಜ್ಯೋತಿಷ್ಯ ಕೃತಿಯನ್ನು ರಚಿಸಿದ ಕವಿ ಗದಗ ಪರಿಸರದವನು ಎಂಬ ಹಿರಿಮೆ ಈ ಪರಿಸರದ್ದಾಗಿದೆ.

**೩. ಮಲ್ಲಿಷೇಣ :**

ಪ್ರಾಚೀನ ಬೆಳ್ವೊಲ-೩೦೦ರ ಉಪವಿಭಾಗ ಮುಳಗುಂದ ನಾಡು-೧೨ರ ಕೇಂದ್ರಸ್ಥಳವಾದ ಮುಳಗುಂದದಲ್ಲಿದ್ದ ಮಲ್ಲಿಷೇಣನು ಕವಿಯಾಗಿ, ಜೈನ ಮುನಿಯಾಗಿ ಈ ಪರಿಸರದಲ್ಲಿ ಜೈನ ಪರಂಪರೆಯನ್ನು ಬೆಳೆಸಿದವನು. ಈತ ತ್ರಿಷಷ್ಠಿ ಶಲಾಕಾ ಪುರುಷ ಮಹಾಪುರಾಣ ಕೃತಿ ರಚಸಿದ್ದಾನೆ. ಇದು ಜೈನ ಧರ್ಮದ ೨೪ ತೀರ್ಥಂಕರಾದಿಯಾಗಿ ಮೊದಲಾದ ೬೩ ಶಲಾಕ ಪುರುಷರ ಚರಿತ್ರೆಯನ್ನು ಸೊಗಸಾಗಿ ನಿರೂಪಿಸಿದ್ದಾನೆ. ಈತನು ಜೈನ ತೀರ್ಥಂಕರ ಮಹೋನ್ನತ ಚರಿತ್ರೆಯನ್ನು ಮನೋಜ್ಞವಾಗಿ ತನ್ನ ಕಾವ್ಯದಲ್ಲಿ ಹೇಳಿದ್ದಾನೆ. ಈತನ ಕಾಲಮಾನದ ಕುರಿತು ವಿದ್ವಾಂಸರಲ್ಲಿ ಒಮ್ಮತ ಅಭಿಪ್ರಾಯವಿಲ್ಲ. ಮಲ್ಲಿಷೇಣನು ಕನ್ನಡದಲ್ಲಿ ಬರೆದ ಕೃತಿಗಳು ಇದುವರೆಗೂ ದೊರೆತಿಲ್ಲ. ಆದರೆ ಸಂಸ್ಕೃತದಲ್ಲಿ ಬರೆದ ಮಹಾಪುರಾಣ ನಾಗಕುಮಾರಕಾವ್ಯ 'ಭೈರವ ಪದ್ಮಾವತಿಕಲ್ಪ' ಸರಸ್ವತಿ ಕಲ್ಪ ಮತ್ತು ಜ್ವಾಲಿನಿ ಕಲ್ಪ ಎಂಬ ಕಾವ್ಯಗಳು ದೊರೆತಿವೆ. ಈತನ ಮಹಾಪುರಾಣವು ೨೦೦೦ ಶ್ಲೋಕಗಳನ್ನೊಳಗೊಂಡ ಬೃಹತ್ ಕಾವ್ಯವಾಗಿದೆ. ಈ ಕೃತಿ ಬರೆದಿದ್ದರಿಂದ ತನ್ನ ಕೀರ್ತಿ ಮೂರು ಲೋಕಗಳಲ್ಲಿ ಚಿರಕಾಲ ಉಳಿಯಿತೆಂದು ಹೆಮ್ಮೆ ಪಟ್ಟುಕೊಂಡಿದ್ದಾನೆ. ಸರಸ್ವತಿ ಮಂತ್ರ ಕಾವ್ಯವು ಮಂತ್ರ ಗ್ರಂಥವಾಗಿದೆ. ಇದನ್ನು ಸ್ವಲ್ಪ ಪಠಿಸಿದರೂ ಹೆಚ್ಚು ಫಲ ಕೊಡುವ ಕೃತಿಯಾಗಿದೆ. ಮುನಿ, ಕವಿ, ಮಂತ್ರವಾದಿ; ಶಾಸನ ಕವಿಯಾಗಿ ಪ್ರಸಿದ್ಧನಾದ ಮಲ್ಲಿಷೇಣನ ಕೀರ್ತಿ ಈ ನಾಡಿನಲ್ಲೆಲ್ಲ ಹಬ್ಬಿದ್ದಿತ್ತು. ಸಂಸ್ಕೃತ ಸಾಹಿತ್ಯಕ್ಕೆ ಈತನ ಕೊಡುಗೆ ಅನುಪಮವಾದುದು. ಮಲ್ಲಿಷೇಣನು ಗದಗ ಜಿಲ್ಲೆಯ ಜೈನ ಕವಿಗಳಲ್ಲಿ ಉಭಯ ಭಾಷಾಕವಿಯಾಗಿ ಪ್ರಸಿದ್ಧಿ ಪಡೆದಿದ್ಧಾನೆ.

**೪. ನಯಸೇನ ಸೂರಿ :**

ಕನ್ನಡ ಸಾಹಿತ್ಯ ಪರಂಪರೆಯಲ್ಲಿ ನಯಸೇನ ಎಂಬುವವರು ಐವರು ಕವಿಗಳಿದ್ದಾರೆ. ಇವರಲ್ಲಿ ಈರ್ವರು ಮುಳಗುಂದದಲ್ಲಿ ನೆಲೆಸಿದ್ದರು, ಒಬ್ಬನು ವ್ಯಾಕರಣಕಾರ ನಯಸೇನ ಇನ್ನೋರ್ವ ಧರ್ಮಾಮೃತ ಕೃತಿಕಾರ ನಯಸೇನನಾಗಿದ್ದಾನೆ. ವ್ಯಾಕರಣಕಾರನಾದ ನಯಸೇನ ಸೂರಿಯು ಪ್ರಕಾಂಡ ಪಂಡಿತನಾಗಿದ್ದನು. ಇವನು ಪಾಣಿನಿಗೆ ಪಾಣಿನಿಯಂತೆ, ಚಂದ್ರದಲ್ಲಿ ಚಂದ್ರನಂತೆ, ಜೀನೇಂದ್ರನಲ್ಲಿ ಜೀನೇಂದ್ರನಂತೆ, ಕೌಮಾರ್ಯದಲ್ಲಿ ಕುಮಾರನಂತೆ ಶೋಭಿಸುತ್ತಿದ್ದನು. ನಯಸೇನ ಸೂರಿ ತರ್ಕ ಶಾಸ್ತ್ರಜ್ಞನು ಆಗಿದ್ದನು. ಆದರೆ ಈತನ ಕೃತಿಗಳು ಇದುವರೆಗೂ

ಲಭ್ಯವಾಗಿಲ್ಲ. ಈತನು ಕಲ್ಯಾಣದ ಚಾಲುಕ್ಯ ಮನೆತನದ ಒಂದನೇ ಸೋಮೇಶ್ವರನ ಸಂಧಿವಿಗ್ರಹಿಯಾಗಿದ್ದ. ಬೆಳ್ದೇವನ ರಾಜಕೀಯ ಗುರುವಾಗಿದ್ದನು. ಹೀಗೆ ವ್ಯಾಕರಣ ಪಂಡಿತನಾಗಿ, ತರ್ಕ ಶಾಸ್ತ್ರಜ್ಞನಾಗಿ ರಾಜಕೀಯ ಪ್ರಭಾವಿಯಾಗಿ, ಮುನಿಯಾಗಿ ಶೋಭಿಸುತ್ತಿದ್ದ ನಯಸೇನ ಸೂರಿಯ ಕೃತಿಗಳು ದೊರೆತರೆ ಇನ್ನೂ ಹೆಚ್ಚಿನ ಮಾಹಿತಿಗಳು ಲಭ್ಯವಾಗಬಹುದು.

### ೫. ನಯಸೇನ :

ನೂತ್ನಕವಿತಾ ವಿಳಾಸ, ದಿಗಂಬರದಾಸ, ಸುಕವಿ ನಿಕರ ಪಿರಮಾಕಂದ ಮುಂತಾದ ಬಿರುದಾಂಕಿತ ಕವಿ ನಯಸೇನ ಗದಗ ತಾಲ್ಲೂಕಿನ ಮುಳಗುಂದದವನು. ಜೈನ ಮತಾವಲಂಬಿಯಾದ ಈತ ಸಾಹಿತ್ಯ ರಚನೆಯ ಜೊತೆಗೆ ಮತ ಪ್ರಚಾರ ಕಾರ್ಯವನ್ನು ಮಾಡಿದವನು. 'ಧರ್ಮಾಚರಣೆಯಿಂದ ಶ್ರೇಯಸ್ಸು : ಧರ್ಮ ವಿಮುಖತೆಯಿಂದ ದುರ್ಗತಿ' ಎಂಬ ನೀತಿಯನ್ನು ಕೇಂದ್ರವಾಗಿರಿಸಿಕೊಂಡು 'ಧರ್ಮಾಮೃತ' ಎಂಬ ಕೃತಿ ರಚನೆ ಮಾಡಿದ್ದಾನೆ. ಇದು ೧೪ ಆಶ್ವಾಸಗಳನ್ನೊಳಗೊಂಡ ದೀರ್ಘ ಚಂಪೂ ಕಾವ್ಯ 'ಜಿನಮತದೊಳ್ ಎನಿತು ಸಾರಂ ಅದನಿತುಂ ಲೇಸಾಗಿ ತೋರ್ಪುದೀ ಕೃತಿಯೊಳ್' ಎಂದು ತನ್ನ ಕಾವ್ಯದ ಬಗ್ಗೆ ಹೇಳಿಕೊಂಡಿದ್ದಾನೆ. ಜನತೆಗಾಗಿ ಬರೆದ ಕನ್ನಡದ ಮೊದಲನೆಯ ಜೈನ ಪುರಾಣ ಎಂಬ ಬಿರುದು ಧರ್ಮಾಮೃತಕ್ಕೆ ಸಲ್ಲುತ್ತದೆ. ನಗೆಗಾರ ನಯಸೇನನೆಂದೇ ಖ್ಯಾತನಾದ ಈ ಕವಿಯ ಕಾವ್ಯದಲ್ಲಿ ವಿಡಂಬನೆ ತೀಕ್ಷ್ಣವಾಗಿದೆ. ಸಾಮಾಜಿಕ ಜೀವನ ನಿರೂಪಣೆಯಿಂದ ಜನಸಾಮಾನ್ಯರಲ್ಲಿ ಬಳಕೆಯಲ್ಲಿದ್ದ ನುಡಿಗಟ್ಟು, ಗಾದೆ ಮಾತು ಇವನ ಕಾವ್ಯಕ್ಕೆ ದೇಸಿಯ ಬೆಡಗನ್ನು ಸಹಜತೆಯನ್ನು ನೀಡಿದೆ. "ಕನ್ನಡ ಗದ್ಯ ಸಾಹಿತ್ಯದಲ್ಲಿ ನಯಸೇನನಿಗೆ ವಿಶಿಷ್ಟ ಸ್ಥಾನವಿದೆ. ಅಂಬುನುಡಿ, ಬಿಚ್ಚುನುಡಿ, ಬಿಡಿನುಡಿಗಳಿಂದ ಕೂಡಿದ ಸಹಜ ಸರಳವಾದ ಲಾಲಿತ್ಯ ಪ್ರಧಾನವಾದ ಏರು ತಗ್ಗುಗಳಿಲ್ಲದೆ, ಅಡ್ಡಿ ಅಡಚಣೆಗಳಲ್ಲದೆ ಸರಾಗವಾಗಿ ಹರಿಯುವುದೇ ನಯಸೇನನ ಗದ್ಯದ ವಿಶಿಷ್ಟ ಲಕ್ಷಣ. ಈ ಗದ್ಯದಲ್ಲಿ ಹರಕು ಬಿರುಕುಗಳಿಲ್ಲ. ತೇಪೆ ಸಿವುರುಗಳಿಲ್ಲ, ವಿಲಾಸವಿದೆ, ವೈವಿಧ್ಯವಿಲ್ಲ, ಜಾಣ್ಮೆ ಬೇಡಗುಗಳಿವೆ, ಔನ್ನತವಿಲ್ಲ, ಸರಳತೆಯಿದೆ, ಶೈಥಿಲ್ಯವಿಲ್ಲ, ಆಡು ಮಾತಿನ ಲಯವಿದೆ : ಗ್ರಾಮ್ಯವಿಲ್ಲ" ಎಂಬ ದೇಜಗೌ ಅವರ ಮಾತು ಸತ್ಯವಾದುದು.

ಮಧ್ಯಕಾಲೀನ ಸಾಹಿತ್ಯದ ನಯಸೇನ ಆ ಕಾಲದ ಜನಜೀವನದ ಅಪಾರ ಅನುಭವ ಹೊಂದಿದ್ದ ಅಪ್ಪಟದೇಶಿ ಕವಿ. ವೈದಿಕ, ವೀರಶೈವ ಮತ್ತು ಜೈನ ಧರ್ಮಗಳ ನಡುವಿನ ತೀವ್ರ ಪೈಪೋಟಿಯ ಚಾರಿತ್ರಿಕ ಸಂದರ್ಭದಲ್ಲಿ ಸಾಹಿತ್ಯ ರಚನೆಗೆ ತೊಡಗಿದ ನಯಸೇನನಿಗೆ ಜೈನಧರ್ಮದ ಪಕ್ಷಪಾತಿಯಾಗಬೇಕಾದ ಚಾರಿತ್ರಿಕ ಒತ್ತಡವಿದ್ದುದು ನಿಜ. ಆದರೆ ಅದಷ್ಟೇ ಅವನ ಸಾಹಿತ್ಯದ ಮಿತಿ ಅಥವಾ ಶಕ್ತಿ ಎಂದು ಹೇಳುವಂತಿಲ್ಲ. ಧರ್ಮಾಮೃತದೊಳಗಿನ ಜನಜೀವನದ ಸಂಕೀರ್ಣವಾದ ಮತ್ತು ಸೂಕ್ಷ್ಮಾತಿ ಸೂಕ್ಷ್ಮವಾದ ಅನುಭವ ಲೋಕಗಳು ಜೈನಧರ್ಮದ ಎಲ್ಲೆಯನ್ನು ಮೀರಿ ಹೊರ ಬರುತ್ತವೆ. ಕೃಷಿ ಸಂಸ್ಕೃತಿಯ ಒಳಗೆ ವ್ಯಾಪರಿ ಸಂಸ್ಕೃತಿ ಹುಟ್ಟುತ್ತಿದ್ದ

ಸಂದಿಗ್ಧ ಸಮಯದಲ್ಲಿ ಇವೆರಡೂ ಸಂಸ್ಕೃತಿಗಳ ಸಂಘರ್ಷದಿಂದ ಕಳ್ಳತನ, ಮೋಸ, ವಂಚನೆ, ಸುಲಿಗೆ, ದರೋಡೆ, ವೇಶ್ಯಾವಾಟಿಕೆಗಳು ಹೇಗೆ ಒಂದು ವ್ಯವಸ್ಥೆಯ ಸಾಮಾಜಿಕ ಜೀವನವನ್ನು ಹದಗೆಡಿಸುತ್ತವೆ. ಮತ್ತು ನೈತಿಕ ಜೀವನವನ್ನು ಅಧಃ ಪತನಕ್ಕೆ ತಳ್ಳುತ್ತವೆ. ಎಂಬುದನ್ನು ನಯಸೇನ ಪ್ರತಿಯೊಂದು ಕತೆಗಳ ಸೂಕ್ಷ್ಮ ವಿವರಗಳಲ್ಲಿ ತಣ್ಣಗೆ ಮನ ಮುಟ್ಟುವಂತೆ ವರ್ಣಿಸುತ್ತಾನೆ. ಈ ವರ್ಣನೆಗೆ ಅವನು ಆರಿಸಿಕೊಂಡಿರುವುದು, ಜನಪದರ ನುಡಿಗಟ್ಟು, ಗಾದೆ, ಉಪಮೆ, ರೂಪಕ, ಮಾಲೋಪಿಮೆ ಇತ್ಯಾದಿ. ಈ ಸ್ವರೂಪದ ಸಾಹಿತ್ಯ ರಚನೆಯ ಒತ್ತಡ ಅವನಿಗಿದ್ದುದರಿಂದಲೇ ಅವನು ಮೊದಲ ಬಾರಿಗೆ ಮಧ್ಯಕಾಲೀನ ಸಾಹಿತ್ಯದಲ್ಲಿ ಅಸಾಮಾನ್ಯ ಗದ್ಯಕಾರನಾಗಿ ರೂಪಗೊಂಡ ಆಧುನಿಕ ಕಾಲದಲ್ಲೂ ಅವನ ಕಥನ ಕ್ರಮ ವಿಶಿಷ್ಟ ಮತ್ತು ಅನನ್ಯ.

ಕನ್ನಡ ಕಾವ್ಯಗಳಲ್ಲಿ ಸಂಸ್ಕೃತ ಪದಗಳನ್ನು ಅತಿಯಾಗಿ ಬಳಸುವ ರೂಢಿಯನ್ನು ವಿರೋಧಿಸುವ ನಯಸೇನ ಸಂಸ್ಕೃತ ವಿರೋಧಿಯಲ್ಲ. ಗದಗ ಪರಿಸರದ ಈ ಪ್ರಾಚೀನ ಕವಿ ಕನ್ನಡದ ಧ್ವನಿಯಾಗಿ ಇತಿಹಾಸದಲ್ಲಿ ಶಾಶ್ವತನಾಗಿರುವುದು ಖುಷಿ ಪಡುವ ವಿಷಯವಾಗಿದೆ. ಅನೇಕ ವಿದ್ವಾಂಸರು ಗುರುತಿಸುವಂತೆ ನಯಸೇನನು ತನ್ನ ನಂತರದ ಅನೇಕ ಕವಿಗಳ ಮೇಲೆ ಪ್ರಭಾವ ಬೀರಿದ್ದಾನೆ. ಜನ್ನಕವಿ, ಬಸವಣ್ಣನವರು ಈತನಿಂದ ಪ್ರಭಾವಿತರಾಗಿದ್ದಾರೆ. ಧರ್ಮಾಮೃತದಲ್ಲಿ ಬರುವ ಒಂದೊಂದು ಕಥೆಯು ನಂತರದ ಸಂದರ್ಭದಲ್ಲಿ ಒಂದೊಂದು ಕೃತಿ ರಚನೆಗೆ ಪ್ರೇರಣೆಯನ್ನು ನೀಡಿದೆ. ಉದಾ : ಪಾಯಣ್ಣಕವಿ ಸಾಂಗತ್ಯದಲ್ಲಿ ಬರೆದ 'ಅಹಿಂಸಾಚರಿತೆ', ಚಂದ್ರಸಾಗರ ವರ್ಣಿಯ "ಭವ್ಯಾಮೃತ ನಯಸೇನನು ಅಪರೂಪದ ಕವಿಯಾಗಿ, ಶ್ರೇಷ್ಠ ಕಥೆಗಾರನಾಗಿ, ಧರ್ಮೋಪದೇಶಕನಾಗಿ, ಸಮಾಜ ವಿಜ್ಞಾನಿಯಾಗಿ, ಭಾಷಾಭಿಮಾನಿಯಾಗಿ, ಈ ನಾಡಿನ ಜೀವಂತ ಸಂಸ್ಕೃತಿಯೊಂದನ್ನು ಕಾವ್ಯರೂಪದಲ್ಲಿ ಕಟ್ಟಿಕೊಟ್ಟ ಕವಿಯಾಗಿ ಕನ್ನಡ ಸಾಹಿತ್ಯದ ಪರಂಪರೆಯಲ್ಲಿ ಶಾಶ್ವತವಾದ ಸ್ಥಾನ ಪಡೆದಿದ್ದಾನೆ.

### ೬. ಅಚಣ್ಣ :

ಕ್ರಿ.ಶ. ೫-೬ ಶತಮಾನಗಳಷ್ಟು ಹಿಂದಿನಿಂದ ಲಕ್ಷ್ಮೇಶ್ವರದಲ್ಲಿ ಜೈನ ಧರ್ಮವು ಒಳ್ಳೆ ಪ್ರಭಾವಶಾಲಿಯಾಗಿಯೂ ಸಾಕಷ್ಟು ಚಟುವಟಿಕೆಗಳಿಂದ ಕೂಡಿದ್ದಾಗಿಯೂ ಬಾಳಿಬಂದ ಈ ಪರಿಸರದಲ್ಲಿ ಧಾರ್ಮಿಕ, ಸಾಹಿತ್ಯಿಕ, ಸಾಂಸ್ಕೃತಿಕ ವಾತಾವರಣದಿಂದ ಕೂಡಿದ ಲಕ್ಷ್ಮೇಶ್ವರದಲ್ಲಿ ಇತರ ಕವಿಗಳಿದ್ದಂತೆ ಜೈನ ಧರ್ಮದ ಕವಿಗಳು ಬಾಳಿ ಸಾಹಿತ್ಯ ರಚನೆ ಮಾಡಿದ್ದಾರೆ. ಅವರಲ್ಲಿ ಅಚಣ್ಣ ಕವಿ ಪ್ರಮುಖನಾಗಿದ್ದಾನೆ. ವರ್ಧಮಾನ ಪುರಾಣವನ್ನು, ಶ್ರೀಪಾದಶೀಲೆಯನ್ನು ಬರೆದ ಅಚಣ್ಣ ಜೈನ ಕವಿ ೧೩ನೆಯ ಶತಮಾನದ ಆದಿಭಾಗದಲ್ಲಿದ್ದವನು. ಕವಿಚರಿತೆಕಾರರ ಪ್ರಕಾರ ಈತನ ಕಾಲ ೧೧೯೫, ತಂದೆ ಕೇಶವರಾಜ, ತಾಯಿ, ಮಲ್ಲಾಂಬಿಕೆ, ಗುರು ನಂದಿಯೋಗೀಶ್ವರ, ಪುರಿಕರನಗರ ಅಂದರೆ ಪುಲಿಗೆರೆ ಈಗಿನ ಲಕ್ಷ್ಮೇಶ್ವರ ಅಚಣ್ಣನ ಊರು ೨೪ನೇ ತೀರ್ಥಂಕರನಾದ ಮಾಹವೀರನ ಕುರಿತು ಕನ್ನಡದ ಮೊದಲನೆಯ ಪ್ರತ್ಯೇಕ ಗ್ರಂಥ 'ವರ್ಧಮಾನ ಪುರಾಣ', ಪ್ರಾಸ, ಯಮಕ ಮುಂತಾದ ಶಬ್ದಾಲಂಕಾರಗಳಿಂದ

ಇವರ ಗ್ರಂಥವು ಪ್ರೌಢವಾಗಿದೆ. ಶಾಂತರಸ ಪ್ರಧಾನವಾದ ಚಂಪೂ ಕಾವ್ಯವಿದು. ಶ್ರೀ ಪಾದಶೀಲೆ ಎಂಬ ಗ್ರಂಥದಲ್ಲಿ ಅಚಣ್ಣ ಪಂಚ ನಮಸ್ಕಾರದ ಮಹಿಮೆಯನ್ನು ೯೪ ಕಂದಗಳಲ್ಲಿ ಹೇಳಿದ್ದಾನೆ.

## ೭. ಮುಖ್ಯ ಪಂಡಿತ :

ಕ್ರಿ.ಶ. ೧೧೪೭ರ ಒಂದು ಶಾಸನವನ್ನು ರಚಿಸಿದವನು. ಕರ್ನಾಟ ಕವಿ ಮುಖ್ಯ ಪಂಡಿತ[೫] ಎಂದು ಹೇಳಿದೆ. ಇದರಿಂದ ಈ ಮುಖ್ಯ ಪಂಡಿತನು ಒಬ್ಬ ಜೈನ ಕವಿಯಾಗಿರಬೇಕೆನ್ನಿಸುತ್ತದೆ.

## ೮. ಸಿಂಹರಾಜ :

ಕ್ರಿ.ಶ. ಸುಮಾರು ೧೬೫೦ರಲ್ಲಿ ಸಿಂಹರಾಜ[೬]ನೆಂಬಒಬ್ಬ ಜೈನ ಕವಿ ಲಕ್ಷ್ಮೇಶ್ವರದಲ್ಲಿ ಇದ್ದು 'ಚಿನ್ಮಯ ಚಿಂತಾಮಣಿ' ಎಂಬ ಗ್ರಂಥವನ್ನು ಬರೆದಂತೆ ತಿಳಿದು ಬರುತ್ತದೆ. ಕವಿ ತನ್ನ ಬಗೆಗೆ ಬರೆದ ಪದ್ಯ ಹೀಗಿದೆ.

"ಪರಮ ಜಿನಪಾದ ಭಕ್ತಂ । ನಿರುತಂ ಹುಲಿಗೆರೆಯ ಸಿಂಹರಾಜ ಪೇಳ್ದಂ ॥
ವರ ನೀತಿಯ ನಾದರದಿಂ । ಪರಮ ಪರಂಜ್ಯೋತಿಗಳ್ಗೆ ಬುದ್ಧಿಯನಿನಿಸಂ ॥

## ೯. ರತ್ನಾಕರ ವರ್ಣಿ :

ಸುಮಾರು ೧೦ ಸಾವಿರ ಸಾಂಗತ್ಯ ಪದ್ಯಗಳಿಂದ ಕೂಡಿದ 'ಭರತೇಶ ವೈಭವ' ಎಂಬ ಬೃಹತ್ ಕಾವ್ಯವನ್ನು 'ರತ್ನಾಕರ' ಅಪರಾಜಿತ 'ತ್ರಿಲೋಕ' ಎಂಬ ಮೂರು ಶತಕಗಳನ್ನು ಹಾಗೂ ಸಾವಿರಾರು ಪದ್ಯಗಳನ್ನು ಬರೆದ ಕ್ರಾಂತಿಕಾರಿ ಮನೋವೃತ್ತಿಯುಳ್ಳ ಜೈನಕವಿ ರತ್ನಾಕರ ವರ್ಣಿ ಕನ್ನಡ ಸಾಹಿತ್ಯಾಕಾಶದಲ್ಲಿ ಚಂದ್ರಾರ್ಕವಾಗಿ ಬೆಳಗುವ ಬೆಳ್ಳಿ ನಕ್ಷತ್ರವಾಗಿದ್ದಾನೆ. ಈ ಕವಿ ಜೈನ ಧರ್ಮದ ಮಠಾಧಿಪತಿಗಳ ಕೂಡ ಭಿನ್ನಾಭಿಪ್ರಾಯವಾದಾಗ, ಜೈನ ಮತವನ್ನು ಸ್ವೀಕರಿಸಿದಾಗ ಆತನು ಲಕ್ಷ್ಮೇಶ್ವರಕ್ಕೆ ಬಂದು, ಬಸವ ಪುರಾಣ (?) ಮೊದಲಾದ ಗ್ರಂಥಗಳನ್ನು ಬರೆದನೆಂದೂ ಹೇಳುತ್ತಾರೆ. ಇದೂ ಅಲ್ಲದೆ ಕನ್ನಡ ಜನತೆಗೆ ಬಹು ಪ್ರಿಯವಾದ 'ಸೋಮೇಶ್ವರ ಶತಕ'[೭]ವನ್ನು ಈತನೇ ಬರೆದನೆಂದು ಹೇಳುವರೂ ಇದ್ದಾರೆ. 'ಸೋಮೇಶ್ವರ ಶತಕ'ದ ನಿಜವಾದ ಕರ್ತೃ ಯಾರು ಎಂಬುದು ಇನ್ನು ನಿಶ್ಚಿತವಾಗಿ ತಿಳಿದಿಲ್ಲ. ಪುಲಿಗೆರೆಯ 'ಸೋಮ' ಎಂಬ ಕವಿ ರಚಿಸಿರಬೇಕು ಎಂಬ ಊಹೆ ಮಾಡಲಾಗಿದೆ. ಆದರೆ ಈ ವಿಷಯವಾಗಿ ವೀರಶೈವ ವಿದ್ವಾಂಸರಾದ ಗುಂಡ್ಲಹಳ್ಳಿ ಹಿರೇಮಠದ ವಿದ್ವಾನ್ ಶ್ರೀ ಎಂ. ಜಿ.

---

೫. The Record was composed by Krantakavi Mukhya Pandith and engraved by Challoja the ellorest sonet jinnaj of pallava, SII XX, Page No. 155.

೬. ಕರ್ನಾಟಕ ಕವಿಚರಿತೆ ಭಾಗ-೩, ಪು. ೪೨೧.

೭. ದೇವಚಂದ್ರ ಕವಿಯ ರಾಜಾವಳಿ ಕಥೆಯಲ್ಲಿ ಈ ಬಗ್ಗೆ ವಿವರಗಳಿವೆ.

ನಂಜುಂಡಾರಾಧ್ಯರು. ೩೦-೪-೧೯೨೯ರ 'ವಿಶ್ವಬಂಧು ಪತ್ರಿಕೆಯಲ್ಲಿ ಪ್ರಕಟಿಸಿದ 'ಕವಿರತ್ನಕರನೂ ಸೋಮೇಶ್ವರ ಶತಕವೂ' ಎಂಬ ಲೇಖನ ಗಮನಾರ್ಹವಾಗಿದೆ. ಇವರಲ್ಲದೆ ಕವಿಚರಿತಕಾರರಾದ ಆರ್. ಆರ್. ನರಸಿಂಹಾಚಾರ್ಯರು ತಮ್ಮ ಕವಿಚರಿತೆಯ ೧ನೆಯ ಸಂಪುಟದಲ್ಲಿ ಈ ಗ್ರಂಥದ ವಿಷಯದಲ್ಲಿ ತಮ್ಮ ವಿಮರ್ಶೆಯನ್ನು ಈ ರೀತಿಯಾಗಿ ಕೊನೆಗಾಣಿಸಿದ್ದಾರೆ. 'ಈ ಶತಕಕ್ಕೆ ಸೋಮರಾದ್ಯ ಶತಕವೆಂಬ ಹೆಸರೂ ಉಂಟು. ಇದನ್ನು ಸಂಸ್ಕೃತದಲ್ಲಿ ಪಂಡಿತನಾಗಿದ್ದ ಪಾಲ್ಕುರಿಕೆ ಸೋಮನಾಥನು ರಚಿಸಿದನೆಂದು ಹೇಳುವುದು ಕಷ್ಟವಾಗಿದೆ. ಅಲ್ಲದೆ ಶತಕಕಾರನ ಉಗಮ ವುಲಿಗೆರೆಯಲ್ಲಿದ್ದಂತೆ ಗ್ರಂಥದಿಂದ ತಿಳಿಯುತ್ತದೆ. ಪಾಲ್ಕುರಿಕೆ ಸೋಮನಾಥನ ಸಂಸ್ಕೃತಾಂಧ್ರ ಗ್ರಂಥಗಳಲ್ಲಿ 'ಪಾಲ್ಕುರಿಕೆಯ ಸೋಮ' ಎಂದೇ ತನ್ನ ಹೆಸರನ್ನು ಹೇಳಿಕೊಂಡಿದ್ದಾನೆ. ಈ ಶತಕದಲ್ಲಿ ಗ್ರಂಥಕರ್ತನ ಹೆಸರು ಸುಮ್ಮನೆ ಸೋಮ ಎಂದಿದೆ. ಇದು ಅಲ್ಲದೆ ವೀರಶೈವ ಗ್ರಂಥಗಳಲ್ಲಿ ಪಾಲ್ಕುರಿಕೆ ಸೋಮಕೃತವೆಂದು ಹೇಳಿರುವ ಗ್ರಂಥಗಳಲ್ಲಿ ಈ ಶತಕವು ಉಕ್ತವಾಗಿಲ್ಲ. ಈ ಕಾರಣಗಳಿಂದ ಶತಕಕಾರನು ಪಾಲ್ಕುರಿಕೆ ಸೋಮನೋ ಅಲ್ಲವೋ ಎಂದು ಸಂದೇಹಿಸಲು ಅವಕಾಶವುಂಟು. ಎಂದು ಸ್ಪಷ್ಟವಾಗಿ ಉಲ್ಲೇಖಿಸಿರುತ್ತಾರೆ. ಈ ಎಲ್ಲಾ ಕಾರಣಗಳಿಂದ ಈ ಶತಕದ ಕರ್ತೃ ರತ್ನಕರನೆಂದೇ ವ್ಯಕ್ತವಾಗುವುದಲ್ಲದೇ ಅವನು ಜೈನ ಮತವನ್ನು ತೋರದ ನಂತರ ವೀರಶೈವನಾಗಿ ಈ ಶತಕವನ್ನು ರಚಿಸಿರುವುದಾಗಿ ವ್ಯಕ್ತವಾಗುತ್ತದೆ. ಆದುದರಿಂದ ಸೋಮೇಶ್ವರ ಶತಕವು ಪಾಲ್ಕುರಿಕೆ ಸೋಮನಾರಾಧ್ಯರಿಂದಾಗಲಿ ಮತ್ತು ವೀರಶೈವರಿಂದಾಗಲಿ ರಚಿತವಾಗಿರದೆ ಕನ್ನಡ ಕವಿ ಶ್ರೇಷ್ಠನಾದ ರತ್ನಾಕರ ಕವಿಯಿಂದಲೇ ರಚಿತವಾಗಿದೆಯೆಂದು ಮುಕ್ತಕಂಠದಿಂದ ಹೇಳಬಹುದು.[೮] ಹೀಗೆ ಕನ್ನಡದ ಮಹಾಕವಿ ಪಂಪನ ತಿರುಳ್ಗನ್ನಡದ ನಾಜದ ವುಲಿಗೇರಿಯಲ್ಲಿ ಇತರ ಕನ್ನಡ ಕವಿಗಳನೇಕರಂತೆ ಜೈನ ಕವಿಗಳೂ ಯಥಾಶಕ್ತಿ ಕನ್ನಡ ಸಾಹಿತ್ಯಕ್ಕೆ ತಮ್ಮ ಕಾಣಿಕೆಯನ್ನು ಸಲ್ಲಿಸುತ್ತಾ ಬಾಳಿ ಬೆಳಗಿದರೆಂಬ ಮಾತು ಈ ಕವಿಗಳ ಹಿನ್ನಲೆಯಲ್ಲಿ ವಿಧಿತವಾಗುತ್ತದೆ.

ಕ್ರಿ.ಶ. ೧೨೦೦ರಲ್ಲಿದ್ದನೆಂದು ನಂಬಲಾದ ಬ್ರಹ್ಮಶಿವನೆಂಬ ಕನ್ನಡ ಜೈನ ಕವಿಯು ತನ್ನ ಸಮಯ ಪರೀಕ್ಷೆಯಲ್ಲಿ ಈತನು ತನ್ನ ಕೃತಿಯಲ್ಲಿ ಸಮಕಾಲೀನ ಧಾರ್ಮಿಕ, ಸಾಮಾಜಿಕ ವಿಡಂಬನೆ ಅವನ ಮೂಲವಸ್ತು ಶಿವನಿಗಿಂತ ಜಿನ ಮೇಲೆಂದು ಸಾರುವುದು ಅವನ ಗುರಿ. ಹೀಗಾಗಿ ಸಮಕಾಲಿನ ಸಾಮಾಜಿಕ ಚಿತ್ರಣವನ್ನು ತನ್ನ ಕೃತಿಯ ಮೂಲಕ ಚಿತ್ರಿಸಿ ಜೈನ ಧರ್ಮದ ಉತ್ಕ್ರೇಷ್ಟತೆಯನ್ನು ತನ್ನ ಕೃತಿಯಲ್ಲಿ ವ್ಯಕ್ತಪಡಿಸಿದ್ದಾನೆ.

ಗದಗ ಪರಿಸರವು ಕೆಲವು ಅರಸು ಮನೆತನಗಳ ಅರಸರು, ರಾಣಿಯರು ಅಧಿಕಾರಿಗಳು ಮತ್ತು ಮಹಾಜನರು ಜೈನ ಕವಿಗಳಿಗೆ ಉದಾರವಾಗಿ ಆಶ್ರಯ, ಪ್ರೋತ್ಸಾಹವನ್ನು ಕೊಟ್ಟ ಸಾಹಿತ್ಯಿಕ ಚಟುವಟಿಕೆಗಳನ್ನು ಕೈಗೊಳ್ಳಲು ಪ್ರೇರೇಪಿಸಿದ್ದಾರೆ. ಕವಿವರ ಕಾಮಧೇನು ಅತ್ತಿಮಬ್ಬೆಯನ್ನು ಗದಗ ಜಿಲ್ಲೆಯು ಕನ್ನಡನಾಡಿಗೆ ಅಪ್ರತಿಮ ಮಹಿಳೆಯನ್ನು ನೀಡಿದ ಹೆಮ್ಮೆಗೆ ಪಾತ್ರವಾಗಿದೆ. ಸಮಗ್ರ ಭಾರತೀಯ ಸ್ತ್ರೀ ಪರಂಪರೆಯಲ್ಲೇ ಅತ್ತಿಮಬ್ಬೆಯ ಪಾತ್ರವನ್ನು

೮. 'ರತ್ನಾಕರ ಕವಿ ವಿರಚಿತ ಶತಕತ್ರಯ' ಸಂಪಾದಕರು-ಶ್ರೀ ಎ. ಶಾಂತರಾಜ ಶಾಸ್ತ್ರಿಗಳು, ದ್ವಿತೀಯ ಮುದ್ರಣ, ೧೯೫೧, ಮುನ್ನುಡಿ ಪು. iii, iv.

ತೇಜೋಮಯವಾಗಿ ಚಿತ್ರಿಸಿ ಎರಕಹೊಯ್ದು ಅಮರಗೊಳಿಸಿದ ಅಮರಕವಿ ರನ್ನ ಅತ್ತಿಮಬ್ಬೆಯ ಆಶ್ರಯದಲ್ಲಿದ್ದು ತನ್ನೆದುರಿಗೆ ಘಟಿಸಿದ ಅತ್ತಿಮಬ್ಬೆಯ ದುರಂತ ಬದುಕಿನ ಘಟನೆಗಳಿಗೆ ಸಾಕ್ಷಿಭೂತನಾಗಿದ್ದಾನೆ. ಪೊನ್ನ-ರನ್ನರ ಕೃತಿಗಳನ್ನು ಅಮರಗೊಳಿಸಿದ ಚಿಂತಾಮಣಿಯಾದ ಅತ್ತಿಮಬ್ಬೆ ಅನ್ನದಾನ, ಆಶ್ವಾಸನೆ, ಔಷಧದಾನ, ಗ್ರಂಥದಾನ ಎಂಬ ಚತುರ್ವಿಧದಾನ ಮಾಡಿ ದಾನ ಚಿಂತಾಮಣಿಯಾಗಿ ಮೆರೆದಿದ್ದಾಳೆ. ದೃಢಚಿತ್ತಳಾಗಿ ಬಂದುದೆಲ್ಲವನ್ನು ಸವಾಲಾಗಿ ಸ್ವೀಕರಿಸಿ ಗಂಡೆದೆಯುಳ್ಳವಳಾಗಿ ಬದುಕಿದ ಅತ್ತಿಮಬ್ಬೆ ಸಂನ್ಯಾಸವನ್ನು ಸ್ವೀಕರಿಸಲಿಲ್ಲ. ಸಂನ್ಯಾಸದ ನಿಷ್ಠುರ ನಿಯಮ ಬಿಡಲಿಲ್ಲ. ದೀಕ್ಷೆ ತೆಗೆದುಕೊಳ್ಳಲಿಲ್ಲ. ಉಗ್ರ ದೀಕ್ಷೆಯ ವ್ರತ ನಿಯಮಗಳನ್ನು ಪಾಲಿಸಿದಳು. ಯೋಗಗಳಲ್ಲಿ ಸಂಸಾರಯೋಗವೇ ರಾಜಭೋಗವೆಂಬ ಲಕ್ಷಣಕ್ಕೆ ಯೋಗ್ಯ ಲಕ್ಷ್ಯವಾದಳು. ಕನ್ನಡದ ಸಾಂಸ್ಕೃತಿಕ ಸಾಹಿತ್ಯಿಕ ಲೋಕದಲ್ಲಿ ದಾನಚಿಂತಾಮಣಿ ಅತ್ತಿಮಬ್ಬೆ ಸ್ಥಿರಸ್ಥಾಯಿಯಾಗಿ ಸೂರ್ಯಚಂದ್ರ ಇರುವವರೆಗೂ ಅಮರಳು ಎನ್ನುವ ನಾಡೋಜ ಪ್ರೊ. ಹಂಪನಾರು ದಾನಚಿಂತಾಮಣಿ ಅತ್ತಿಮಬ್ಬೆ ಎಂಬ ಕೃತಿ ರಚನೆ ಮಾಡಿದ್ದಾರೆ. ಸದ್ಯ ಕರ್ನಾಟಕ ರಾಜ್ಯ ಸರಕಾರವು ಇವಳ ನಾಮದಡಿ ಪ್ರಶಸ್ತಿ ಸ್ಥಾಪಿಸಿ ನಾಡಿನ ಗಣ್ಯ ಸ್ತ್ರೀರತ್ನಗಳಿಗೆ ಪುರಸ್ಕರಿಸುತ್ತಿರುವುದು ಅತ್ತಿಮಬ್ಬೆಯ ವ್ಯಕ್ತಿತ್ವಕ್ಕೆ ಸಂದ ಗೌರವವಾಗಿದೆ. ಅತ್ತಿಮಬ್ಬೆಯ ಹಾಗೆಯೇ ಲಕ್ಕುಂಡಿ ಪರಿಸರದಲ್ಲಿ ಹಮ್ಮಿಯಕ್ಕ ಎಂಬ ಹೆಣ್ಣು ಮಗಳು ಇವಳಂಥೆ ದಾನ ದತ್ತಿಗಳನ್ನು ಮಾಡಿದಳು. ಎಂಬ ಉಲ್ಲೇಖಗಳು ಶಾಸನಗಳಲ್ಲಿ ಉಕ್ತವಾಗಿದೆ. ಹಾಗಾಗಿ ಗದಗ ಪರಿಸರವು ಸಾಂಸ್ಕೃತಿಕ, ಸಾಮಾಜಿಕ, ಧಾರ್ಮಿಕ, ಆಧ್ಯಾತ್ಮಿಕ ಮೌಲ್ಯಗಳನ್ನು ಇಡೀ ವಿಶ್ವಕ್ಕೆ ಮಾದರಿಯಾಗಿರುವಂತೆ ಅಳವಡಿಸಿಕೊಂಡು ತಾವು ಇಂದಿನ ಜಾಗತಿಕರಣದ ಸಂದರ್ಭದಲ್ಲಿ ಆ ಮೌಲ್ಯಗಳ ಅವಶ್ಯಕತೆಯನ್ನು ೧೦-೧೧ನೆಯ ಶತಮಾನದಲ್ಲೇ ತಿಳಿಸಿಕೊಟ್ಟಿದೆ ಈ ಪರಿಸರ.

### ೬.೩. ಆಧುನಿಕ ಜೈನ ಸಾಹಿತ್ಯ ಪರಂಪರೆ :

ಪ್ರಾಚೀನ ಕವಿಗಳು ಹಾಕಿಕೊಟ್ಟ ಸಾಹಿತ್ಯಿಕ ಪರಂಪರೆಯನ್ನು ಗದಗ ಪರಿಸರದಲ್ಲಿ ಆಧುನಿಕ ಜೈನ ಕವಿಗಳು ಸ್ವಧರ್ಮ ಮೌಲ್ಯಗಳನ್ನು ಇಂದಿನ ಸಾಮಾಜಿಕ, ಧಾರ್ಮಿಕ, ರಾಜಕೀಯ ನೆಲೆಗಟ್ಟಿಗೆ ಅನುಸಾರವಾಗಿ ಸಾಹಿತ್ಯ ರಚನೆ ಮಾಡುತ್ತಾ ಪ್ರಾಚೀನ ಪರಂಪರೆಯನ್ನೇ ಮುಂದುವರಿಸಿಕೊಂಡು ಸಾಗುತ್ತಿದ್ದಾರೆ. ಕನ್ನಡ ಸಾಹಿತ್ಯ ಕ್ಷೇತ್ರಕ್ಕೆ ಗದಗ ಪರಿಸರದ ಜೈನ ಕವಿಗಳು ಅಷ್ಟೇ ಅಲ್ಲ ಜೈನೇತರ ಕವಿಗಳ ಕೊಡುಗೆಯೂ ಅಪಾರವಾಗಿದೆ. ಕನ್ನಡ ಸಾರಸ್ವತ ಲೋಕದಲ್ಲಿ ಮಿನುಗುವ ತಾರೆಗಳಂತೆ ಬೆಳಗುತ್ತಿರುವ ಪ್ರಾಚೀನ ಜೈನ ಕವಿಗಳ ಮೌಲ್ಯಗಳು ಧಾರ್ಮಿಕ ತತ್ವಗಳನ್ನು ಪ್ರಸಾರ ಮಾಡುವಲ್ಲಿ ಈ ಪರಿಸರದ ಕವಿಗಳು ಮುನ್ನುಗ್ಗುತ್ತಿದ್ದಾರೆ. ಈ ಪ್ರದೇಶದಲ್ಲಿ ಜನಿಸಿ ಸಾಹಿತ್ಯಿಕ ಚಟುವಟಿಕೆಗಳಲ್ಲಿ ತಮ್ಮನ್ನು ತಾವು ತೊಡಗಿಸಿಕೊಂಡ ಕವಿಗಳು ಕೆಲವರಿದ್ದರೆ. ಬೇರೆ ಬೇರೆ ಪ್ರದೇಶಗಳಿಂದ

---

೯. ಆಧುನಿಕ ಕವಿಗಳ ವಿವರವನ್ನು /ಪರಿಚಯವನ್ನು ಕವಿಗಳನ್ನು ನೇರವಾಗಿ ಸಂಪರ್ಕಿಸಿ ಮಾಹಿತಿ ಪಡೆಯಲಾಗಿದೆ. ಅಥವಾ ಅವರ ಸಂಬಂಧಿಕರಿಂದ ಮಾಹಿತಿ ಪಡೆಯಲಾಗಿದೆ.

ಬಂದು ಇಲ್ಲಿ ನೆಲೆಸಿ ಸಾಹಿತ್ಯ ಚಟುವಟಿಕೆಗಳಲ್ಲಿ ತೊಡಗಿಕೊಂಡವರು ಇನ್ನು ಕೆಲವರು. ಹೀಗಾಗಿ ಜಾಗತಿಕರಣದ ಸಂದರ್ಭದಲ್ಲಿ ಜೈನ ಧರ್ಮದಲ್ಲಿರುವ ಮೌಲ್ಯಗಳ ಅವಶ್ಯಕತೆಯನ್ನು ತಮ್ಮ ವಿಚಾರಧಾರೆಗಳ ಮೂಲಕ ಜನ ಸಾಮಾನ್ಯರಿಗೆ ತಿಳಿಸುತ್ತಿದ್ದಾರೆ. ಪ್ರಾಚೀನ ಸಾಹಿತ್ಯ ಪಂಡಿತಾಭಿಮುಖವಾಗಿದ್ದರೆ ಆಧುನಿಕ ಸಾಹಿತ್ಯವು ಸದ್ಯ ವಾಸ್ತವಿಕ ಬದುಕಿನಲ್ಲಿ ಅನುಸರಿಸಬೇಕಾದ ತತ್ವಗಳನ್ನು ಪ್ರತಿಪಾದನೆ ಮಾಡುತ್ತವೆ. ಆಧುನಿಕ ಸಾಹಿತ್ಯದ ವಿವಿಧ ಮಜಲುಗಳ ತತ್ವಗಳಿಗೆ ಅನುಗುಣವಾಗಿ ಈ ಭಾಗದಲ್ಲಿನ ಕವಿಗಳು ಕೃತಿಗಳ ರಚನೆಯಲ್ಲಿ ತೊಡಗಿದ್ದಾರೆ. ಅವರಲ್ಲಿ ಪ್ರಮುಖರಾದ ಸಾಹಿತಿಗಳ ಪರಿಚಯವನ್ನು ಈ ಮುಂದಿನ ಭಾಗದಲ್ಲಿ ಕೈಗೊಳ್ಳಲಾಗಿದೆ.

**೧. ದೇವೇಂದ್ರಗೌಡ ಎಚ್. ಪಾಟೀಲ :**

ಗದಗ ತಾಲೂಕಿನ ಮಲ್ಲಸಮುದ್ರ ಗ್ರಾಮದವರಾದ ಇವರು ವೃತ್ತಿಯಿಂದ ಗ್ರಾಮ ಪಂಚಾಯತಿಯ ನೌಕರರಾಗಿದ್ದಾರೆ. ಭಾರತದ ಸ್ವಾತಂತ್ರ್ಯ ಚಳುವಳಿಯಲ್ಲಿ ಭಾಗವಹಿಸಿ ದೇಶಾಭೀಮಾನ ತೋರಿದ್ದಾರೆ. ಈ ಪ್ರದೇಶದ ಸ್ಥಳೀಯ, ರಾಜ್ಯ ಪತ್ರಿಕೆಗಳಲ್ಲಿ ಇವರ ಕವನ, ಲೇಖನಗಳು ಪ್ರಕಟಗೊಂಡಿವೆ. ಜೈನ ಮತದವರಾದ ಇವರು ಸಾಹಿತ್ಯಿಕ ಚಟುವಟಿಕೆಗಳೊಂದಿಗೆ ಸಾಮಾಜಿಕ ಸೇವೆಯಲ್ಲಿ ತಮ್ಮನ್ನು ತಾವು ತೊಡಗಿಸಿಕೊಳ್ಳುವುದರೊಂದಿಗೆ ಮೂಲತಃ ತಮ್ಮ ಧರ್ಮ ತತ್ವಗಳಿಗೆ ಅನುಸಾರವಾಗಿ ಬದುಕನ್ನು ಸಾಗಿಸುತ್ತಿದ್ದಾರೆ. ಇವರ ಸಾಮಾಜಿಕ ಸೇವೆಯನ್ನು ಪರಿಗಣಿಸಿ ಈ ಪ್ರದೇಶದ ಹಲವಾರು ಸಂಘ ಸಂಸ್ಥೆಗಳು ಇವರನ್ನು ಸನ್ಮಾಸಿ, ಗೌರವಿಸಿದ್ದಾರೆ.

**೨. ನಾಗನಗೌಡ ಡಿ. ಪಾಟೀಲ :**

ಗದಗ ಜಿಲ್ಲೆಯ ಶಿರಹಟ್ಟಿ ತಾಲೂಕಿನ ಯಳವತ್ತಿ ಗ್ರಾಮದೇವರಾದ ಇವರು ವೃತ್ತಿಯಿಂದ ಶಾಲಾ ಶಿಕ್ಷಕರಾಗಿ ಸೇವೆ ಸಲ್ಲಿಸಿದ್ದಾರೆ. ಪ್ರವೃತ್ತಿಯಿಂದ ಸಾಹಿತ್ಯಕಾರರಾಗಿರುವ ಅನೇಕ ಕೃತಿಗಳನ್ನು ಪ್ರಕಟಿಸಿದ್ದಾರೆ. ಪ್ರಮುಖವಾಗಿ ಕಿರುಗೀತೆ, ವೀರಗೀತೆ, ಜಾನಪದ ಕಲೆ, ಸಾಕ್ಷರಗೀತೆ, ಕುಟುಂಬಯೋಜನಾ ಗೀತೆ, ದೇಶಭಕ್ತಿಗಳನ್ನು ರಚಿಸಿ ತಮ್ಮ ಸಾಹಿತ್ಯಿಕ ಪ್ರತಿಭೆ ಮೆರೆದಿದ್ದಾರೆ. ಇವರು ಗದಗ ಜಿಲ್ಲಾ ದಿಗಂಬರ ಜೈನ ಸಂಘದ ಅಧ್ಯಕ್ಷರಾಗಿ ಕಾರ್ಯ ನಿರ್ವಹಿಸಿದ್ದಾರೆ. ಈ ಪ್ರದೇಶದಲ್ಲಿ ಜೈನ ಧರ್ಮದ ತತ್ವಗಳನ್ನು ತಮ್ಮ ಸಾಹಿತ್ಯ ಕೃತಿಗಳಲ್ಲಿ ಅಳವಡಿಸಿಕೊಂಡು ಸಮಾಜ ಸೇವೆಯಲ್ಲಿ ತಮ್ಮನ್ನು ತಾವು ತೊಡಗಿಸಿಕೊಂಡು ತಮ್ಮ ಇಳೆ ವಯಸ್ಸಿನಲ್ಲಿ ಸಮಾಜ ಸೇವೆಯಲ್ಲಿ ತೊಡಗಿದ್ದಾರೆ.

**೩. ಶ್ರೀ ಆರ್. ಎನ್. ದೇಶಪಾಂಡೆ :**

ಗದಗ ತಾಲೂಕಿನ ಮುಳಗುಂದ ಗ್ರಾಮದವರಾದ ಇವರು ಈ ಭಾಗದಲ್ಲಿ 'ಲ್ಯಾಂಡ್‌ಲಾರ್ಡ್'ಗಳಾಗಿ ಹೆಸರುವಾಸಿ. ದಿಗಂಬರ ಪಂಥದ ತತ್ವಗಳನ್ನು ಅನುಸರಿಸಿಕೊಂಡು ಸಾಗುತ್ತಿರುವ ಇವರು ವ್ಯಾಪಾರವನ್ನು ತಮ್ಮ

ವೃತ್ತಿಯನ್ನಾಗಿ ಮಾಡಿಕೊಂಡು ಜೀವನ ಸಾಗಿಸುತ್ತಿರುವ ದೇಶಪಾಂಡೆಯವರು ಜೈನ ಧರ್ಮದ ತತ್ವಗಳನ್ನು ತಮ್ಮ ಬದುಕಿನಲ್ಲಿ ಪರಿಪಾಲಿಸಿಕೊಂಡು ಬಂದಿದ್ದಾರೆ. ಸ್ವತಃ ಕವಿಗಳಲ್ಲದಿದ್ದರೂ ದಾನಶೂರರು ಸಮಾಜದ ಕೆಳವರ್ಗದವರಿಗೆ ದೀನ ದಲಿತರ ಬಂಧುಗಳಾಗಿದ್ದಾರೆ ಇವರು. ಹಲವಾರು ಸಂಘ ಸಂಸ್ಥೆಗಳಲ್ಲಿ ತಮ್ಮನ್ನು ತಾವು ತೊಡಗಿಸಿಕೊಂಡಿರುವ ಇವರು ಜೈನ ಧರ್ಮದ ತತ್ವಗಳ ಪ್ರಸಾರದಲ್ಲಿ ಸಕ್ರೀಯರಾಗಿದ್ದಾರೆ. ಭೂಮಿದಾನ, ಅನ್ನದಾನ, ವಸ್ತ್ರದಾನ, ಶಾಸ್ತ್ರದಾನಗಳಿಗೆ ದಾನ ನೀಡಿ ದಾನಶೂರರಾಗಿ ಈ ಭಾಗದಲ್ಲಿ ಚಿರಪರಿಚಿತರು. ದಾನ ಚಿಂತಾಮಣಿಯ ಮೌಲ್ಯಗಳನ್ನು ರೂಢಿಸಿಕೊಂಡಿರುವ ದೇಶಪಾಂಡೆಯವರು ಸಮಾಜಸೇವೆಯಲ್ಲಿ ಸಕ್ರಿಯರಾಗಿದ್ದಾರೆ.

### ೪. ರಾಮಣ್ಣ ಜೈನರ :

ಶಿರಹಟ್ಟಿ ತಾಲೂಕಿನ ಸೊರಟೂರು ಗ್ರಾಮದವರಾದ ಇವರು ಜನಪದ ಸಾಹಿತ್ಯದ ಪ್ರಕಾರಗಳಾದ ಕೋಲಾಟ, ಆರತಿಪದಗಳು, ರಂಗಗೀತೆಗಳನ್ನು ರಚಿಸಿದ್ದಾರೆ. ಅನೇಕ ನಾಟಕಗಳಿಗೆ ಸಂಗೀತ ನಿರ್ದೇಶನ ಮತ್ತು ನಾಟಕ ನಿರ್ದೇಶನ ಮಾಡಿದಂತ ಇವರು ಬಹುಮುಖ ಪ್ರತಿಭೆಯುಳ್ಳವರಾಗಿದ್ದಾರೆ. ಜೈನ ಧರ್ಮದ ಕುರಿತು ಜೈನ ಜಾನಪದ ಸಾಹಿತ್ಯಿಕ ಪದ್ಯಗಳನ್ನು ರಚಿಸಿದ್ದಾರೆ.

### ೫. ಪಾರ್ಶ್ವನಾಥ ಎನ್. ಅಲ್ಲಯ್ಯನವರ :

ಮೂಲತಃ ಬೆಳಗಾವಿ ಜಿಲ್ಲೆಯ ಬೈಲಹೊಂಗಲ ತಾಲೂಕಿನ ಮೇಕಲಮರಡಿ ಗ್ರಾಮದವರಾದ ಇವರು ೧೯೭೭ರಿಂದ ಗದುಗಿನ ವಿದ್ಯಾಧಾನ ಪ್ರೌಢಶಾಲೆಯಲ್ಲಿ ಕನ್ನಡ ಶಿಕ್ಷಕರಾಗಿ ಸೇವೆ ಸಲ್ಲಿಸಿದ್ದಾರೆ. ಇವರ ಧರ್ಮಪತ್ನಿಯವರು ಕೂಡಾ ಶ್ರೀ ಸಿ. ಎಸ್. ಪಾಟೀಲ ಹೈಸ್ಕೂಲ್‌ನಲ್ಲಿ ಕನ್ನಡ ಶಿಕ್ಷಕಿಯಾಗಿ ಸೇವೆ ಸಲ್ಲಿಸುತ್ತಿದ್ದಾರೆ. ಶ್ರೀಯುತರು ವೃತ್ತಿಯಲ್ಲಿ ಶಿಕ್ಷಕರಾದರೂ ಪ್ರವೃತ್ತಿಯಲ್ಲಿ ಸಾಹಿತಿಯಾಗಿ ಜನಮನಗಳಿಸಿದ್ದಾರೆ. ಶಾಂತಿಪುರಾಣ ಸಾರ ಸಂಗ್ರಹ, ಪಂಚಕಲ್ಯಾಣ ಎಂಬ ಕೃತಿಗಳನ್ನು ಶತಕವೀರ, ರತ್ನಕರ ಭೋಗದಿಂದ ಯೋಗದಡೆ ನಡೆದನಾ ರತ್ನಾಕರ, ಅಣ್ಣಿಗೇರಿ : ಒಂದು ಜೈನ ಅತೀಹ ಲೇಖನಗಳು ಪ್ರಮುಖವಾಗಿವೆ. ಪ್ರಸ್ತುತ ಇವರು ಮಿತ್ರಪ್ರೇಮ, ಸಂಕಲ್ಪ, ನವರತ್ನಗಳು, ದಾಳುಹಾಕು, ಕಳಕೊಂಡ ಕೋಡಂಗಿಗಳು ಎಂಬ ಕಿರು ನಾಟಕಗಳು ಮತ್ತು 'ದಕ್ಷಿಣ ಭಾರತದ ಜೈನ ಮಠಗಳು – ಒಂದು ಅಧ್ಯಯನ' ಎಂಬ ಪ್ರೌಢಕೃತಿ ಪ್ರಕಟನೆಗೆ ಸಿದ್ಧವಾಗಿದೆ. ಹೀಗೆ ನಿರಂತರ ಸಾಹಿತ್ಯಿಕ ಸೃಜನ ಕಾರ್ಯದಲ್ಲಿ ತೊಡಗಿಕೊಂಡಿದ್ದ ಶ್ರೀಯುತರು ಗದಗ ಜಿಲ್ಲೆಯ ದಿಗಂಬರ ಜೈನ ಸಂಘದ ಕಾರ್ಯದರ್ಶಿಯಾಗಿ ಮತ್ತು ಶ್ರವಣ ಬೆಳ್ಗೊಳದ ಜೈನ ಅಧ್ಯಯನ ಸಂಸ್ಥೆಯ ಗದಗ ಜಿಲ್ಲಾ ಶಾಖೆಯ ಕಾರ್ಯದರ್ಶಿಗಳಾಗಿ ಕಾರ್ಯ ನಿರ್ವಹಿಸಿದ್ದಾರೆ.

### ೬. ಡಾ. ಬಿ. ಬಿ. ಮಹೀಷವಾಡಿ :

ಬೆಳಗಾವಿ ಜಿಲ್ಲೆಯ ಅಥಣಿ ತಾಲೂಕಿನ ಮಹೀಷವಾಡಿ ಗ್ರಾಮದವರಾದ ಇವರು ೧೯೭೨ ರಿಂದ ಕೆಲವು ವರ್ಷಗಳ ಕಾಲ ಗದುಗಿನ ತೋಂಟದಾರ್ಯ ಮಹಾವಿದ್ಯಾಲಯದಲ್ಲಿ ಕನ್ನಡ ಉಪನ್ಯಾಸಕರಾಗಿ ಸೇವೆ ಸಲ್ಲಿಸಿದ ಇವರು ಸಾಹಿತಿಗಳಾಗಿ, ಚಲನಚಿತ್ರ ಗೀತೆ, ರಚನಕಾರರಾಗಿ, ಸಂಭಾಷಣಾಕಾರರಾಗಿ ಜನಪ್ರಿಯರಾಗಿದ್ದಾರೆ. ಇವರು ಗದಗ ತಾಲೂಕಿನ ಚಿಂಚಲಿ ಗ್ರಾಮದ ಬೆಟ್ಟದ ಮೇಲಿರುವ ಛಾಯಾಚಂದ್ರನಾಥ ತೀರ್ಥಂಕರನ ಕುರಿತಾಗಿ ರಚಿಸಿರುವ 'ಛಾಯಾಚಂದ್ರನಾಥ ವಚನ ಚಂದ್ರಿಕೆ' ಎಂಬ ಕೃತಿ ಬಿಡುಗಡೆಯಾಗಬೇಕಿದೆ.

### ೭. ಶಾಂತರಾಜ ಮಲ್ಲಸಮುದ್ರ :

ಕುಂದಗೋಳ ತಾಲೂಕಿನ ಹರ್ಲಾಪುರ ಗ್ರಾಮದವರಾದ ಇವರು ಗದುಗಿನ ದಿ. ವರ್ಧಮಾನ ಕೋ-ಆಫ್ ಕ್ರೆಡಿಟ್ ಸೊಸಾಯಿಟಿಯಲ್ಲಿ ಶಾಖಾ ವ್ಯವಸ್ಥಾಪಕರಾಗಿ ಸೇವೆ ಸಲ್ಲಿಸಿ ನಿವೃತ್ತಿ ಹೊಂದಿರುವ ಇವರು ಕಾವ್ಯವಾಣಿ ಎಂಬ ಪ್ರಾತಿನಿಧಿಕ ಕವನ ಸಂಕಲನ ಪ್ರಕಟಿಸಿ ಸಾಹಿತ್ಯಿಕ ಛಾಪು ಮೂಡಿಸಿದ್ದಾರೆ. ಗೊಮ್ಮಟವಾಣಿ, ಪ್ರಗತಿ ಮತ್ತು ಜಿನವಿಜಯ, ಸಹಕಾರ ಇನ್ನಿತರ ಪ್ರಾದೇಶಿಕ ಪತ್ರಿಕೆಗಳಲ್ಲಿ ಇವರ ಕವನಗಳು ಪ್ರಕಟವಾಗಿ ಜನ ಮೆಚ್ಚುಗೆಯನ್ನು ಪಡೆದಿವೆ.

### ೮. ಡಾ. ಅಪ್ಪಣ್ಣ ಹಂಜಿ :

ಬೆಳಗಾವಿ ಜಿಲ್ಲೆಯ ರಾಯಭಾಗ ತಾಲೂಕಿನ ಅಳಗವಾಡಿ ಗ್ರಾಮದವರಾದ ಇವರು ೨೦೦೭ರಿಂದ ಉಪನ್ಯಾಸಕ ವೃತ್ತಿಯನ್ನು ಪ್ರಾರಂಭಿಸಿದ್ದಾರೆ. ೨೦೦೯ರಿಂದ ಗದುಗಿನ ಪ್ರಥಮ ದರ್ಜೆ ಕಾಲೇಜಿನಲ್ಲಿ ಇತಿಹಾಸ ಸಹಾಯಕ ಪ್ರಾಧ್ಯಾಪಕರಾಗಿ ಕಾರ್ಯ ನಿರ್ವಹಿಸುತ್ತಿದ್ದಾರೆ. ಡಾ. ಹಂಜಿಯವರು ಪ್ರಾಚೀನ ಭಾರತದ ಇತಿಹಾಸ ಮತ್ತು ಶಾಸನಶಾಸ್ತ್ರ ವಿಷಯದಲ್ಲಿ ಎಂ. ಎ. ಪದವಿ ಪಡೆದಿರುವ ಇರುವ 'ಶಿಗ್ಗಾಂವ ಪ್ರದೇಶ ಪುರಾತತ್ವ' ಎಂಬ ವಿಷಯದಲ್ಲಿ ಎಂ.ಫಿಲ್. ಮತ್ತು ಅದೇ ವಿಷಯದಲ್ಲಿ ಪಿ.ಎಚ್‌ಡಿ. ಪದವಿಗಳನ್ನು ಪಡೆದಿದ್ದಾರೆ. ಜೈನ ಮತೀಯರಾದ ಇವರು 'ಅರಾಟಳದ ಪಾರ್ಶ್ವನಾಥ ಜಿನಾಲಯ ವಾಸ್ತುಶಿಲ್ಪಶಾಸನ', ಧಾರವಾಡ ಪರಿಸರದಲ್ಲಿ ಜೈನಧರ್ಮ' ಎಂಬ ಸಂಶೋಧನಾ ಕೃತಿಗಳನ್ನು ರಚಿಸಿದ್ದಾರೆ. ಡಾ. ಅಪ್ಪಣ್ಣ ಹಂಜಿಯವರು ನಾಡಿನ ವಿವಿಧ ಪತ್ರಿಕೆಗಳಲ್ಲಿ ಜೈನ ಬಸದಿಗಳು, ಶಿಲ್ಪಗಳು, ಶಾಸನಗಳು, ಸಂಸ್ಕೃತಿ, ಸಮಾಜ ಮೊದಲಾದ ವಿಷಯಗಳಿಗೆ ಸಂಬಂಧಿಸಿದಂತೆ ೭೦ಕ್ಕೂ ಹೆಚ್ಚು ಸಂಶೋಧನಾ ಲೇಖನಗಳನ್ನು ಪ್ರಕಟಿಸಿದ್ದಾರೆ. ಜೊತೆಗೆ ರಾಜ್ಯ, ರಾಷ್ಟ್ರ, ಅಂತರಾಷ್ಟ್ರೀಯ ಮಟ್ಟದ ಕೆಲವು ಕಾರ್ಯಾಗಾರ, ಸಮ್ಮೇಳನ, ವಿಚಾರ-ಸಂಕೀರ್ಣಗಳಲ್ಲಿ ಸಂಶೋಧನಾ ಲೇಖನಗಳನ್ನು ಮಂಡಿಸಿದ್ದಾರೆ. ಪ್ರಸ್ತುತ ಶ್ರವಣಬೆಳ್ಗೊಳದ ಜೈನ ಅಧ್ಯಯನ ಸಂಸ್ಥೆಯ ಗದಗ ಶಾಖೆಯ ಉಪಾಧ್ಯಕ್ಷರಾಗಿ ಸೇವೆ ಸಲ್ಲಿಸುತ್ತಿದ್ದಾರೆ. ಇನ್ನೂ

ಗದಗ ಪರಿಸರದಲ್ಲಿರುವ ಅಪ್ರಕಟಿತ ಶಾಸನಗಳನ್ನು ಕುರಿತು ಕಾಲಗರ್ಭದಲ್ಲಿ ಸಿಕ್ಕಿರುವ ಜೈನ ಧಾರ್ಮಿಕ ಸ್ಥಳ ಚರಿತ್ರೆಯನ್ನು ಸಂಶೋಧನೆಯನ್ನು ಕೈಗೊಂಡು ಅಲ್ಲಿರುವ ನೈಜ ಅಂಶಗಳನ್ನು ಹೊರಸೂಸುವತ್ತ ಗಮನಹರಿಸಿದರೆ ಈ ಪ್ರದೇಶದಲ್ಲಿ ಜೈನ ಪರಂಪರೆಯ ಅಂಶಗಳನ್ನು ಮಹತ್ವವನ್ನು ಅರಿತುಕೊಳ್ಳಲು ಸಹಾಯಕವಾಗುತ್ತದೆ.

**೯. ಪದ್ಮರಾಜ ಕುಲಕರ್ಣಿ :**

ಗದಗ ತಾಲೂಕಿನ ಹರ್ತಿ ಗ್ರಾಮದವರಾದ ಇವರು ಗದುಗಿನ ವಿದ್ಯಾದಾನ ಸಮಿತಿಯ ಪ್ರಾಥಮಿಕ ಶಾಲೆಯಲ್ಲಿ ಶಿಕ್ಷಕರಾಗಿ ಸೇವೆ ಸಲ್ಲಿಸುತ್ತಿದ್ದಾರೆ. ಜೈನಧರ್ಮ, ವ್ಯಕ್ತಿ ಪರಿಚಯ, ಚಿತ್ರಕಲೆಯ ಕುರಿತಾಗಿ ಅನೇಕ ಬಿಡಿಲೇಖನಗಳನ್ನು ನಾಡಿನ ವಿವಿಧ ಪತ್ರಿಕೆಗಳ ಮೂಲಕ ಪ್ರಕಟಿಸಿದ್ದಾರೆ. ಇದಲ್ಲದೆ ಚಿತ್ರಕಲೆಯಲ್ಲಿಯೂ ಗಮನಾರ್ಹವಾದ ಸಾಧನೆಯನ್ನು ಮಾಡಿದ್ದಾರೆ.

**೧೦. ಯಶವಂತ ಸಿದ್ಧಣ್ಣವರ :**

ಮೂಲತಃ ಶಿಗ್ಗಾಂವ ತಾಲೂಕಿನ ಬನ್ನೂರ ಗ್ರಾಮದವರಾದ ಇವರು ತಮ್ಮ ಸೃಜನ ಕ್ಷೇತ್ರವನ್ನಾಗಿ ಗದಗ ಜಿಲ್ಲೆಯನ್ನು ಆಯ್ಕೆ ಮಾಡಿಕೊಂಡು ಅನೇಕ ಸೃಜನಾತ್ಮಕ ಕೃತಿ, ಲೇಖನಗಳನ್ನು ರಚಿಸಿದ್ದಾರೆ. ಜನಪದ ಶೈಲಿಯಲ್ಲಿ ನೂರಕ್ಕೂ ಹೆಚ್ಚು ಜನಪದ ಜೈನ ಭಕ್ತಿ ಗೀತೆಗಳನ್ನು ರಚಿಸಿದ್ದಾರೆ. ಗದಗ ಜಿಲ್ಲಾ ದಿಗಂಬರ ಜೈನ ಸಂಘದ ಕಾರ್ಯದರ್ಶಿಯಾಗಿ ಕಾರ್ಯ ನಿರ್ವಹಿಸಿದ ಇವರು ಈ ಪ್ರದೇಶದಲ್ಲಿ ಜೈನ ಪರಂಪರೆಯನ್ನು ಕುರಿತು ಇನ್ನಷ್ಟು ಸೃಜನಾತ್ಮಕ ಸಾಹಿತ್ಯವನ್ನು ರಚಿಸಿ ಸಾಹಿತ್ಯ ಕ್ಷೇತ್ರಕ್ಕೆ ಮೌಲ್ಯಯುತ ಕೃತಿಗಳನ್ನು ರಚಿಸುವಂತೆಯಾಗಲಿ.

**೧೧. ಶ್ರೀ ಯಲ್ಲಪ್ಪ ಸೋಮಪುರ (ಕಣಕೊಪ್ಪ) :**

'ಜೈನ ಧರ್ಮದ ಕಿರು ಪರಿಚಯ' ಎಂಬ ಜೈನ ಧರ್ಮಾಚರಣೆಯ ಈ ಚಿಕ್ಕ ಹೊತ್ತಿಗೆ ಹೊರತಂದಿರುವ ಶ್ರೀ ಯಲ್ಲಪ್ಪ ಸೋಮಪುರ (ಕಣಕೊಪ್ಪ) ಗದಗ ಜಿಲ್ಲೆಯ ಗಜೇಂದ್ರಗಡ ನಿವಾಸಿಯಾದ ಇವರು ಕನ್ನಡ ೧೦ನೆಯ ತರಗತಿಯವರೆಗೆ ಮಾತ್ರ ಕಲಿತವರಾಗಿದ್ದು ಸುಖರಾಜಜಿ ಬಾಗಮಾರ ಎಂಬುವರಲ್ಲಿ ನೌಕರಿಯಲ್ಲಿದ್ದುದರಿಂದ ಸ್ಥಾನಿಕದ ಯಾವುದೇ ಕಾರ್ಯಕ್ಕಾಗಿ ಇವರಿಗೆ ಅಲ್ಲಿ ಬರಹೋಗುವ ಸಂದರ್ಭ ಬಂದೊದಗಿತು. ಮಹಾಸತಿ ಪ.ಪೂ.ಶ್ರೀ ಮೈನಾ ಸುಂದರಜಿ ಸಾಧ್ವಿಜಿ ಅವರ ಸೇವಾಕಾರ್ಯಕ್ಕೆ ಮನಸ್ಸು ಒಲಿದು ನಂತರ ೨೦ ದಿನಗಳವರೆಗೆ ಸಾಮಾಯಿಕ ವಿಧಿ ಬಗ್ಗೆ ಓದಿಕೊಂಡು ಅದೇ ಸಮಯದಿಂದ ಪ್ರತಿಕ್ರಮಣ ೨೧ ವಿಧಿ ಸೂತ್ರಗಳು ೧ ತಿಂಗಳು ಪಠಿಸಿ ಮನನ ಮಾಡಿಕೊಂಡು ಇದೇ ರೀತಿಯಾಗಿ ೨೦ ವರ್ಷ ಮುಂದುವರೆದಾಗ ಆಚಾರ್ಯವರ್ಯ ಪ.ಪೂ.೧೦೦೮ ಶ್ರೀ ಹಸ್ತಿಮಲಜಿ ಮಹಾಸನ್ನಿಧಿ ರಾಯಚೂರ ಇವರ ಚಾತುರ್ಮಾಸದ ಸೇವೆಯಲ್ಲಿದ್ದಾಗ ೧೫೦ ರಿಂದ ೨೦೦ ಜನರಿಗೆ ಪ್ರತಿಕ್ರಮಣ ಮಾಡಿಸಿದ ಶ್ರೇಯಸ್ಸು ಇವರದು. ಜೈನ ಧರ್ಮದ ೧೦ ಸೂತ್ರಗಳನ್ನು ಕನ್ನಡದಲ್ಲಿ ಅನುವಾದಿಸಿ

ಅಧ್ಯಯನ ಮಾಡಿದ ಇವರು ೮ ವರ್ಷಗಳ ಕಾಲ ಜೈನ ಸಾಧುಗಳಾಗಿ ಮುಂದೆ ಅನಾರೋಗ್ಯದಿಂದ ಮರಳಿ ಗ್ರಹಸ್ಥಾಶ್ರಮಕ್ಕೆ ಪರಿವರ್ತಿತರಾಗಿ ಈಗಲೂ ಇವರು ಜೈನ ಧರ್ಮಾಚಣೆಯನ್ನೇ ಆಚರಿಸುತ್ತಿದ್ದಾರೆ.

ಜೀವನಕ್ಕೆ ಉಪಯೋಗವಾದ ಅಸಿ(ಯುದ್ಧ) ಮಸಿ (ಲೇಖನ), ಕೃಷಿ (ಬೇಸಾಯ), ವಾಣಿಜ್ಯ (ವ್ಯಾಪಾರ), ವಿದ್ಯಾ (ಶಾಸ್ತ್ರರಚನೆ, ನೃತ್ಯ ಗಾಯನ ಮೊದಲಾದ) ಮತ್ತು ಶಿಲ್ಪಿ (ಹಸ್ತಶಿಲ್ಪ, ಚಿತ್ರಾಂಕನ ಮೊದಲಾದವುಗಳ ಶಿಕ್ಷಣವನ್ನು ಕಲಿತು ಸಾಹಿತ್ಯಕೃತಿ ರಚನೆ ಮಾಡಿದ ಪ್ರಾಚೀನ ಕವಿಗಳು ಮನುಷ್ಯನ ರಾಗದ್ವೇಷದ ಪ್ರವೃತ್ತಿಗಳಿಂದ ಹೇಗೆ ಕರ್ಮಗಳ ಬಂಧನವಾಗುತ್ತದೆ. ಸಂಯಮ, ತಪಸ್ಸು, ತ್ಯಾಗ ಮತ್ತು ಧ್ಯಾನಗಳ ಏಕಾಗ್ರತೆಯಿಂದ ಹೇಗೆ ಅಲೌಕಿಕ ಶಕ್ತಿಗಳ ವಿಕಾಸವಾಗುತ್ತದೆ. ಕರ್ಮಬಂಧನದಿಂದ ಮುಕ್ತಿ ಪಡೆದು ಭವ ಸಾಗರವನ್ನು ದಾಟುವ ಬಗೆ ಹೇಗೆ ಎಂಬೆಲ್ಲದರ ಪ್ರತ್ಯಕ್ಷಾನುಭವವನ್ನು ಪಡೆದು ಧರ್ಮೋಪದೇಶವನ್ನು ಮಾಡಿ ಜನತೆಗೆ ಸನ್ಮಾರ್ಗವನ್ನು ನೀಡಿದ ಸಾಹಿತ್ಯ ಕೃತಿಗಳನ್ನು ರಚಿಸಿದ ಕೀರ್ತಿ ಗದಗ ಪರಿಸರದ ಕವಿಗಳಿಗೆ ಸಲ್ಲುತ್ತದೆ. ಕಾಲದಿಂದ ಕಾಲಕ್ಕೆ ಹಲವಾರು ಭಾಷೆಗಳಲ್ಲಿ ಪುರಾಣ ಕಾವ್ಯಧಾರೆಗಳ ರೂಪಗಳಲ್ಲಿ ಮೂಡಿನಿಂತ ಜೈನ ತೀರ್ಥಂಕರರ ಚರಿತ್ರೆ ಪ್ರಸ್ತುತ ಸಮಾಜಕ್ಕೆ ಅವಶ್ಯಕವಾದ ಮೌಲ್ಯಗಳ ಪ್ರತಿಪಾದನೆ ಮಾಡಿವೆ. ಜೈನ ಧಾರ್ಮಿಕ ಸಾಹಿತ್ಯದಲ್ಲಿ ಪ್ರಧಾನ ಪಾತ್ರಧಾರಿಗಳೆಂದರೆ ತೀರ್ಥಂಕರ ಪುರಾಣ ಅಥವಾ ಚರಿತೆಗಳು. ಇದಕ್ಕೆ ಕಾರಣವೆಂದರೆ ತೀರ್ಥಂಕರರು ಸಾಧಿಸಿರುವ ಸಾಧನೆ. ನೀಡಿರುವ ಉಪದೇಶಾವಳಿಗಳು. ಇವರು ನೀಡಿರುವ ಅಹಿಂಸೆ ಸತ್ಯ ಅಸ್ತೇಯ ಬ್ರಹ್ಮಚರ್ಯ ಅಪರಿಗ್ರಹ ಎಂಬ ಪಂಚಾಣುವ್ರತಗಳು ವಿಶ್ವಮಾನ್ಯತೆಯನ್ನು ಪಡೆದುದಾಗಿವೆ. ಯಾವ ತತ್ತ್ವಜ್ಞಾನಿಯೂ ಇದನ್ನು ಅಲ್ಲಗಳೆಯುವಂತಿಲ್ಲ. ಇಂತಹ ಉನ್ನತ ವ್ಯಕ್ತಿಗಳ ಜೀವನ ಸಾಫಲ್ಯತೆ, ಧರ್ಮನಿಷ್ಠತೆ, ಸಾಧಿಸಿರುವ ಸಿದ್ಧಿ, ಅನುಕರಣೀಯವಾಗಿವೆ. ಆದುದರಿಂದ ಇವನ ಜೀವನ ಚರಿತೆ ಎಲ್ಲಾ ಜನರಿಗೂ ಒದಗಿ ಉತ್ತಮ ಜೀವನಕ್ಕೆ ಪ್ರೇರಣೆ ನೀಡಲೆಂದೇ ಅನೇಕ ಹಿರಿಯ ಕವಿಗಳು ಕಾವ್ಯಗಳಲ್ಲಿ ಕಂಡರಿಸಿದ್ದಾರೆ. ಆ ಧಾರ್ಮಿಕ ಮೌಲ್ಯಗಳನ್ನು ಆಧುನಿಕ ಸಮಾಜಕ್ಕೆ ಅವಶ್ಯ ಎಂಬಂತೆ ಬಿಂಬಿಸಿದ್ದಾರೆ. ಇಂದಿನ ಒತ್ತಡಯುತ ಸಮಾಜಕ್ಕೆ ಜೈನ ಧರ್ಮದ ತತ್ವಗಳು ಇಂದಿಗೂ ಪ್ರಸ್ತುತವೆನಿಸುತ್ತವೆ. ಮತ್ತು ಸಾಹಿತ್ಯಿಕ ಕೃತಿಗಳ ಮೂಲಕ ಕವಿ–ಕೃತಿ–ಮೌಲ್ಯಗಳು ಅಮರವಾಗಿವೆ.

ಸಾಹಿತ್ಯ, ಶಿಲ್ಪ, ವಾಸ್ತು ಶಿಲ್ಪ, ಕಲಾಕ್ಷೇತ್ರಗಳಿಗೆ ತನ್ನದೇ ಆದ ವಿಶೇಷ ಕೊಡುಗೆ ನೀಡಿದ ಗದಗ ಪ್ರದೇಶದ ಜೈನ ಧರ್ಮೀಯ ಕವಿಗಳು, ಜಾನಪದ ಕ್ಷೇತ್ರಕ್ಕೂ ತಮ್ಮ ಕೊಡುಗೆಗಳನ್ನು ನೀಡಿ ಮೇಲ್ಮೈಗೆಯನ್ನು ಸಾಧಿಸಿದ್ದಾರೆ. ತುಡಿತಕ್ಕೆ ತಕ್ಕಂತೆ ದನಿ, ದನಿಗೊಂದು ಬನಿ, ಬದುಕು ಸುಖ ಸಂತೃಪ್ತಿಯ ಗಣಿ ನಿಸರ್ಗದೊಂದಿಗೆ ತಾದಾತ್ಮ್ಯತೆಯನ್ನು ಹೊಂದಿ ಬಾಳಿದ ಈ ಭಾಗದ ಜೈನ ಧರ್ಮಿಯರು ಸಹ ಕುರಿತೋದದೆಯೂ ಕಾವ್ಯ ಕಟ್ಟಬಲ್ಲಂಥ ಜಾಣರು. ಬಳ್ಳಿಯಲ್ಲಿನ ಮೊಗ್ಗು ಅರಳಿದಂತೆ ಇಳೆಯಿಂದ ಮೊಳಕೆ ಮೈದೋರಿದಂತೆ ಅವರ ಸಹಜ ಮಾತುಗಳೂ ಮುತ್ತಾಗುತ್ತಿದ್ದವು. ಶ್ರಮಕ್ಕೆ ತಕ್ಕಂತೆ ಉಸಿರಾಟದ ಏರಿಳಿತಕ್ಕನುಸರಿಸಿ ಹೊರಟ ಧ್ವನಿ ಕಾವ್ಯಮಯವಾಗಿದ್ದನ್ನು ಪ್ರಾಚೀನ ಜೈನ ಕಾವ್ಯಗಳಲ್ಲಿ ಕಾಣಲಾಗಿದೆ. ಅದರಂತೆ ಗದಗ ಪರಿಸರದ ಜೈನ ಕವಿಗಳು ತಮ್ಮ ಜೀವನ ಸಮೃದ್ಧಿಯನ್ನು ಭೂಮಿಗೆ ಬೆವರನ್ನು ಬಸಿಯುತ್ತಲೇ ಆತ್ಮೋನ್ನತಿಯ ದಾರಿಯನ್ನು ಆರಿಸಿಕೊಂಡವರೆಂಬುದಕ್ಕೆ

ಶಕ್ತಿ ಕವಿ ರನ್ನನ ಜೀವನವೆ ಮಾದರಿಯಾಗಿದೆ. ಆದ್ದರಿಂದ ಕನ್ನಡ ಸಾಹಿತ್ಯ ಕ್ಷೇತ್ರಕ್ಕೆ ಗದಗ ಪ್ರದೇಶದ ಜೈನ ಬಂಧುಗಳು ತಾವು ನಂಬಿದ್ದ ಪಂಚ ಪರಮೇಷ್ಠಿಗಳ, ತೀರ್ಥಂಕರರ ಯಕ್ಷಯಕ್ಷಿಯರ, ಮುನಿ ಆರ್ಯಿಕೆಯರ ಭಟ್ಟಾರಕರ, ಸ್ವಾಮಿಗಳ, ಪವಿತ್ರ, ತೀರ್ಥಕ್ಷೇತ್ರಗಳ ಕುರಿತಾಗಿ ಕಾವ್ಯ ಕೃತಿಗಳನ್ನು ರಚಿಸಿ ಕೃತಾರ್ಥತರಾಗಿದ್ದಾರೆ.

ತಾನು ತನ್ನ ಪರಿವಾರದ ಸೌಖ್ಯದ ಜೊತೆ ತನ್ನ ಸುತ್ತಮುತ್ತಲ ಬಳಗವು ಸೌಖ್ಯದಿಂದ ಇರಲು ಹಂಬಲಿಸಿದ್ದು ಜೈನ ಧರ್ಮದ ಮೂಲ ತಿರುಳಾದ 'ನೀನು ಬದುಕು ಇತರರಿಗೂ ಬದುಕಲವಕಾಶ ನೀಡು ("ಜೀಯೋ ಔರ ಜೀನೆದೋ") ಎಂಬ ಘೋಷವಾಕ್ಯ ಜೈನ ಧರ್ಮೀಯರ ಕೃತಿಗಳಲ್ಲಿ ಅದೆಷ್ಟು ಅರ್ಥಪೂರ್ಣವಾಗಿ ಧ್ವನಿಸಿದೆ. ಆಧುನಿಕ ಗದಗ ಪರಿಸರದ ಜೈನ ಧರ್ಮೀಯರ ಮೂಲ ವೃತ್ತಿ ಕೃಷಿ, ವ್ಯಾಪಾರ, ಹಾಗೂ ನೌಕರಿಯಲ್ಲಿ ತಮ್ಮನ್ನು ತಾವು ತೊಡಗಿಸಿಕೊಂಡಿರುವ ಇವರು ಧಾರ್ಮಿಕ ತತ್ತ್ವಗಳಿಗೆ ಅನುಗುಣವಾಗಿ ಮೂಲ ಗುಣಗಳಾದ ದಾನ ದತ್ತಿ, ಸಮಾಜ ಉಪಯುಕ್ತ ಕಾರ್ಯಗಳನ್ನು ಇಂದಿಗೂ ನೆರವೇರಿಸಿಕೊಂಡು ಬಂದಿದ್ದಾರೆಂಬುದಕ್ಕೆ ನಾನು ಕೈಗೊಂಡ ಕ್ಷೇತ್ರಾಧ್ಯಾಯನ ಕಾಲದಲ್ಲಿ ಜೈನ ಧರ್ಮೀಯರ ಈ ಸಾಧನೆಗಳನ್ನು ಕಂಡು ಮೆಚ್ಚುವಂತೆ ಹಾಗೂ ಕೇವಲ ಜೈನ ಧರ್ಮೀಯರು ಮಾತ್ರವಲ್ಲ ಈಡೀ ವಿಶ್ವಕ್ಕೆ ಮಾನವ ಕುಲಕ್ಕೆ ಮಾದರಿಯಾಗುವಂತೆ ಜೀವನ ನಿರ್ವಹಿಸಿಕೊಂಡು ಸಾಗುತ್ತಿರುವುದು ಕಂಡುಬಂದಿತ್ತು. ಈ ಪ್ರದೇಶದಲ್ಲಿ ಅತ್ತಿಮಬ್ಬೆಯ ದಾನ ಮೌಲ್ಯಗಳು ಇಂದಿಗೂ ಈ ಭಾಗದಲ್ಲಿ ಇರುವುದನ್ನು ನಾವು ಜೈನ ಧರ್ಮೀಯರಲ್ಲಿ ಕಾಣಬಹುದು. ಸಾಹಿತ್ಯಿಕ, ಸಾಂಸ್ಕೃತಿಕ, ಧಾರ್ಮಿಕ, ಶೈಕ್ಷಣಿಕ ಹಾಗೂ ಆರ್ಥಿಕ ಪ್ರಗತಿಯಲ್ಲಿ ಸಾಂಸ್ಕೃತಿಯ ರಕ್ಷಣೆಯಲ್ಲಿ ಗದಗ ಪ್ರದೇಶದ ಅಭಿವೃದ್ಧಿಯಲ್ಲಿ ಇವರ ಕೊಡುಗೆ ಅಪಾರವಾಗಿದೆ.

ಸಾಹಿತ್ಯ ಕ್ಷೇತ್ರಕ್ಕೆ ಅಮೂಲ್ಯವಾದ ಕೊಡುಗೆಗಳನ್ನು ನೀಡಿದ ಜೈನ ಧರ್ಮೀಯ ಕವಿಗಳು ಈ ಪ್ರದೇಶದಲ್ಲಿ ಸದಾ ಅಮರವಾಗಿದ್ದಾರೆಂಬುದು ಕಂಡು ಬರುತ್ತದೆ. ಜೈನರ ಇಂದಿನ-ಅಂದಿನ ಆರ್ಥಿಕ ಸಮೃದ್ಧತೆಯನ್ನು ಅವರ ದಾನ ಧರ್ಮ ಕಾರ್ಯವನ್ನು, ಹೃದಯ ವೈಶಾಲ್ಯತೆಯನ್ನು ಹೃದಯಂಗಮವಾಗಿ ಬಿಂಬಿಸುತ್ತದೆ. ಜೈನ ಕವಿಗಳ ಕೃತಿಗಳು ಜೈನ ಧರ್ಮೀಯರಲ್ಲದೆ ಜೈನೇತರ ಕವಿಗಳು ಜನಸಾಮಾನ್ಯರು ಸಹ ಅಮೂಲ್ಯವಾದ ಕಾವ್ಯಕಾರಣಗಳನ್ನು ಈ ಪ್ರದೇಶದಲ್ಲಿದ್ದು ಇಲ್ಲಿನ ಸಾಂಸ್ಕೃತಿಕ, ಸಾಮಾಜಿಕ, ಧಾರ್ಮಿಕ ಪರಿಸರ ಚಿತ್ರಿಸಿದ್ದಾರೆ.

***

# ಅಧ್ಯಾಯ – ೭

# ಗದಗ ಪರಿಸರದ ಜೈನ ಪರಂಪರೆ : ಆಧುನಿಕತೆ

ಅಧ್ಯಾಯ ೭

# ಗದಗ ಪರಿಸರದ ಜೈನ ಪರಂಪರೆ : ಆಧುನಿಕತೆ

## ೭.೧. ಪೀಠಿಕೆ :

ವರ್ತಮಾನದ ಸಾಮ್ರಾಜ್ಯಶಾಹಿ ಜೀವನಕ್ರಮದಲ್ಲಿ ವಸ್ತು, ವ್ಯಕ್ತಿ, ದೇಶ, ಸಂಸ್ಕೃತಿಗಳ ಶ್ರೇಷ್ಠತೆಯ ತೀವ್ರ ಪೈಪೋಟಿಯಿದೆ. ಶ್ರೇಷ್ಠತೆಯ ವ್ಯಸನ, ಮಾನವೀಯತೆಯ ಹಂಬಲ ವಾಸ್ತವವಾಗಿ ಕೀಳರಿಮೆಯಿಂದ ಹುಟ್ಟುತ್ತದೆ. ಸ್ಪರ್ಧೆ, ಪೈಪೋಟಿ, ಮೇಲಾಟಿ ಇನ್ನೊಂದು ಜೀವಿಯನ್ನು ತನ್ನ ಹಿಡಿತದಲ್ಲಿಟ್ಟುಕೊಳ್ಳಬೇಕೆಂದು ಮಾಡುವ ಎಲ್ಲ ಪ್ರಯತ್ನಗಳ ಹಿಂದೆ ಇಂಥ ಮನಸ್ಥಿತಿ ಇದೆ. ಇದರ ಜೊತೆಗೆ ಅಸ್ತಿತ್ವದ ಬಗೆಗಿನ ಅಭದ್ರತೆಯೂ ಸೇರಿದಾಗ ಬದುಕಿನ ಮೂಲಭೂತ ಅಗತ್ಯಗಳ ಮೇಲಿನ ನಿಯಂತ್ರಣ, ಸಂಗ್ರಹ-ಸ್ವಾಮ್ಯ, ಆಕ್ರಮಣ ಮತ್ತು ಅತಿಕ್ರಮಣದ ಗೀಳು ಬಲವಾಗಿರುತ್ತದೆ. ವ್ಯಕ್ತಿ ಮಟ್ಟದಲ್ಲಿ ಇದು ಮನುಷ್ಯನ ಸಹಜ ಸ್ವಭಾವವೆಂಬಂತೆ ತೋರಿದರೆ ಸಾಮಾಜಿಕವಾಗಿ ತಾತ್ವಿಕ ರೂಪವನ್ನು ತಾಳಿದಾಗ ಅದೇ ಒಂದು ಜೀವನ ದೃಷ್ಟಿಯಾಗಿ ಬಿಂಬಿತವಾಗುತ್ತದೆ. ಎಂಬುದನ್ನು ಜೈನ ಧರ್ಮದ ಬೆಳವಣಿಗೆಯಲ್ಲಿ ಅದು ಕಂಡುಕೊಂಡ ಏರಿಳಿತಗಳನ್ನು ಕುರಿತು ಅರಿತಾಗ ಸ್ಪಷ್ಟವಾಗುತ್ತದೆ. ಪ್ರಾಚೀನ ಸಮಾಜದಲ್ಲಿ ಜೈನ ಧರ್ಮವು ಬೆಳೆದ ಪರಿ ಅದೇ ಧರ್ಮ ಆಧುನಿಕ ಸಮಾಜದಲ್ಲಿ ತನ್ನ ಪಾರಮ್ಯವನ್ನು ಸ್ಥಾಪಿಸಿಕೊಳ್ಳುವುದಕ್ಕೆ ಪಡುತ್ತಿರುವ ಪರಿಪಾಟಲನ್ನು ಅರಿತಾಗ ಸ್ಪಷ್ಟವಾಗುತ್ತದೆ. ಆದ್ದರಿಂದ ಪ್ರಾಚೀನ ಕಾಲದಿಂದ ಇಂದಿನವರೆಗೆ ತನ್ನ ತತ್ವಗಳಿಂದ, ತನ್ನಲ್ಲಿ ಹುದುಗಿಸಿಕೊಂಡಿರುವ ಮೌಲ್ಯಗಳಿಂದ ಪ್ರಭಾವ ಪೂರ್ಣವಾದ ಜೈನ ಧರ್ಮ ತಾನು ಅನುಭವಿಸಿದ ಏರಿಳಿತಗಳನ್ನು ಚಾರಿತ್ರಿಕ ಅಂಶಗಳಿಂದ ಹಾಗೂ ಸಾಹಿತ್ಯ ಕೃತಿಗಳಲ್ಲಿ ಅಡಕವಾದ ಅಂದಿನ ಸಾಮಾಜಿಕ ಆ ಕಾಲದ ಧಾರ್ಮಿಕ, ರಾಜಕೀಯ ಆರ್ಥಿಕ ಹಾಗೂ ಸಾಂಸ್ಕೃತಿಕ ಅಂಶಗಳನ್ನು ಇಂದಿಗೂ ಜೈನ ಧರ್ಮೀಯರು ಅನುಭವಿಸುತ್ತಿರುವ ಸಮಸ್ಯೆಗಳನ್ನು ಕುರಿತು ತುಲನಾತ್ಮಕವಾಗಿ ವಿವರಣೆಗೆ ಒಳಪಡಿಸುವುದು ಈ ಅಧ್ಯಾಯದ ಪ್ರಮುಖ ಉದ್ದೇಶವಾಗಿದೆ.

ಒಂದು ಕಾಲದಲ್ಲಿ ಇಡೀ ರಾಷ್ಟ್ರವನ್ನು ಆವರಿಸಿ ರಾಷ್ಟ್ರ ಧರ್ಮವಾಗಿ ಬೆಳೆದ ಜೈನ ಧರ್ಮವು ಬೆಳೆಯುತ್ತಾ ಬೆಳೆಯುತ್ತಾ ಸಮಾಜದಲ್ಲಿ ಏರಿಳಿತಗಳನ್ನು ಕಂಡು ಇಂದು ಅಲ್ಪಸಂಖ್ಯಾತ ಧರ್ಮವಾಗಿ ನಿಂತಿರುವುದು ದುರದುಷ್ಟಕರ, ಇದು ಜೈನ ಧರ್ಮದ ಪರಿಸ್ಥಿತಿ ಇಂದು ಈ ಸ್ಥಿತಿಗೆ ಬರುವುದಕ್ಕೆ ಏನು ಕಾರಣ? ಧಾರ್ಮಿಕ ತೊಂದರೆ? ರಾಜಕೀಯ ಕಾರಣನಾ? ಸಾಮಾಜಿಕ ವಲಯ ಕಾರಣವೇ? ಅಥವಾ ಆರ್ಥಿಕ ಪರಿಣಾಮವೇ? ಎಂಬುವುದುನ್ನು ಜೈನ ಧರ್ಮದ ಸ್ಥಿತ್ಯಾಂತ್ಯರಗಳನ್ನು ವೇದಕಾಲದಿಂದ ಇಂದಿನವರೆಗೆ ಸಮಾಜದಲ್ಲಿ ಜೈನ ಧರ್ಮವು ಬೆಳೆದು ಬಂದ ಪರಿಯನ್ನು ಕುರಿತು ಈ ಅಧ್ಯಾಯವು ಬೆಳಕನ್ನು ಚೆಲ್ಲುತ್ತದೆ. ಆದ್ದರಿಂದ ಜೈನ ಧರ್ಮದ ಪ್ರಸ್ತುತೆಯನ್ನು ಹಾಗೂ ಅನಿವಾರ್ಯತೆಯನ್ನು ಅರಿಯಬಹುದಾಗಿದೆ.

ಪರ ನಿಯಂತ್ರಕ ಜೀವನ ದೃಷ್ಟಿಯನ್ನು ಉಳಿದವರ ಮೇಲೆ ಹೇರಲು ಅಥವಾ ಇತರರನ್ನು ಈ ಜೀವನ ದೃಷ್ಟಿಗೆ ಒಳಪಡಿಸಲು ಅಭದ್ರತೆ ಮತ್ತು ಕೀಳರಿಮೆಯಿಂದ ನರಳುವ ಅಥವಾ ಜನರ ಗುಂಪು ಮಾಡುವ ಪ್ರಯತ್ನಗಳ ಒಟ್ಟು ರೂಪವನ್ನು ರಾಜಕೀಯ ಎನ್ನುವರು. ದೈಹಿಕಶಕ್ತಿ ಅಸ್ತ್ರ-ಶಸ್ತ್ರಗಳ ಬಲ ಬೌದ್ಧಿಕ ಮತ್ತು ತಾಂತ್ರಿಕ ಉಪಾಯಗಳ ಬಳಕೆ ಈ ರಾಜಕೀಯದ ಅವಿಭಾಜ್ಯ ಅಂಗ. ಏಕಸ್ವಾಮ್ಯ, ಕೇಂದ್ರಿಕೃತ ನಿಯಂತ್ರಣ ಬಲಪ್ರಯೋಗ ಹಿಂಸೆ ಮತ್ತು ಕ್ರೌರ್ಯ, ಶ್ರೇಷ್ಠತೆಯ ಪ್ರಚಾರ ಸಾಮಾಜ್ರಶಾಹಿ ರಾಜಕೀಯ ತಳಹದಿಯಾಗಿವೆ. ಈ ರಾಜಕೀಯ ಅಂಶಗಳು ಜೈನಧರ್ಮಪ್ರಣೀತ ಉಳ್ಳವರ ಭೋಗ ಮತ್ತು ಆತ್ಮಹಿಂಸೆಯ ಜೀವನ ದೃಷ್ಟಿಯನ್ನು ಜನಸಾಮಾನ್ಯರ ಭಾಷೆಯಲ್ಲಿ ಪ್ರಚಾರಮಾಡಿ ಜೀವನ ದೃಷ್ಟಿಗೆ ಜನರ ಸಮ್ಮತಿಯನ್ನು ದೊರಕಿಸಿಕೊಳ್ಳುವುದನ್ನು ಆಗೀನ ಮತ್ತು ಇಂದಿನ ರಾಜಕೀಯ ಯಾವ ರೀತಿಯಾಗಿ ಕಾರ್ಯ ನಿರ್ವಹಿಸುತ್ತದೆ ಎಂಬುದನ್ನು ಜೈನ ಧರ್ಮದ ಬೆಳವಣಿಗೆಯ ಆಧಾರದಲ್ಲಿ ವಿಶ್ಲೇಷಿಸುವುದು ಮುಖ್ಯ ಉದ್ದೇಶ.

ಆಳುವ ಜನ ತಮ್ಮ ಜೀವನದೃಷ್ಟಿಗೆ ಜನರ ಸಮ್ಮತಿಯನ್ನು ದೊರಕಿಸಿಕೊಳ್ಳಲು ಜನರ ಹೆಸರಿನಲ್ಲೇ ಜಾರಿಗೆ ತರುವ ನಿಯಮಾವಳಿಗಳ ಕೈಪಿಡಿ ಸಂವಿಧಾನ, ಆಧುನಿಕ ಕಾಲದಲ್ಲಿ ಇದಕ್ಕೆ ಧರ್ಮಗ್ರಂಥದ ಪಾವಿತ್ರ್ಯತೆಯೊಂದಿಗೆ ಶಕ್ತಿ ಕೇಂದ್ರದ ಅಧಿಕೃತತೆಯಿದೆ. ಇದಕ್ಕೆ ಅಧೀನವಾಗಿ ಕಾನೂನು ಕಟ್ಟಳೆಗಳು ನ್ಯಾಯನೀತಿ ಸಂಹಿತೆಗಳು ಇವೆ. ಇವು ಸಹಜವಾಗೆ ಆಳಿದ ಜನರ ಹಿತಾಸಕ್ತಿಗಳನ್ನು ಕಾಪಾಡುವಂಥ ನ್ಯಾಯ, ಸುಖ ನೆಮ್ಮದಿಗಳ ಪರಿಕಲ್ಪನೆಯನ್ನು ಒಪ್ಪುವ ಅಥವಾ ಅದರ ತಂಟೆಗೆ ಹೋಗದ ಧರ್ಮಗುರುಗಳ ಸಂತರು, ಅನುಭಾವಿಗಳು ಪರಮಪೂಜ್ಯರಾಗಿರುತ್ತಾರೆಂಬುದನ್ನು ನಮ್ಮ ಪುರಾತನ ಸಮಾಜದಿಂದ ಇಂದಿನ ಸಮಾಜದವರೆಗೂ ಅಲ್ಪಸ್ವಲ್ಪ ವ್ಯತ್ಯಾಸಗಳನ್ನು ಕಾಣುತ್ತೇವೆ. ಆದರೆ ಜೈನಧರ್ಮದ ನೆಲೆಯಲ್ಲಿ ವ್ಯವಸ್ಥೆಯನ್ನು ಪ್ರಶ್ನಿಸುವ ವ್ಯಕ್ತಿ, ಯೋಚನೆ, ತತ್ವಧರ್ಮಗಳನ್ನು ಅವು ಆಳುವ ಜನರ ಹಿತಾಸಕ್ತಿಗೆ ಉಂಟು ಮಾಡಬಹುದಾದ ಹಾನಿಯ ತೀವ್ರತೆಯನ್ನನುಸರಿಸಿ ಹತ್ತಿಕ್ಕಲಾಗುತ್ತದೆ ಎಂಬುದು ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ಬಿಂಬಿತವಾಗಿರುವ ಬೌದ್ಧ, ಜೈನ, ಶೈವ, ವೈಷ್ಣವ

ಧರ್ಮಗಳ ರಾಜಾಶ್ರಯ ಸ್ಥಿತ್ಯಂತರಗಳು ಈ ಬಗೆಯವು.

ಆಳುವ ಜನರ ಶಕ್ತಿ ಕೇಂದ್ರವನ್ನು ಪಲ್ಲಟಗೊಳಿಸುವ ವಿಚಾರಧಾರೆ ಸಾಮಾಜಿಕವಾಗಿ ಅನುಷ್ಠಾನಗೊಂಡಾಗಲೆಲ್ಲಾ ರಾಜಕೀಯ ಕ್ಷೋಭೆ ಕಾಣಿಸಿಕೊಂಡಿದೆ. ಧರ್ಮವನ್ನು ರಾಜಕೀಯದಿಂದ ದೂರವಿಡಬೇಕೆಂಬ ಕೂಗಿನ ಹಿಂದೆ ಧರ್ಮದ ರಾಜಕೀಯ ಆಯಾಮವನ್ನು ನೋಡಲಾಗದ ಅಜ್ಞಾನ ಅಥವಾ ಅದನ್ನು ಮರೆಮಾಚುವ ಹುನ್ನಾರವಿದೆ. ವ್ಯವಸ್ಥೆಯನ್ನು ಕಲಕದ ಧಾರ್ಮಿಕತೆ ತಾತ್ವಿಕತೆಗಳು ಪರಿಣಾಮದಲ್ಲಿ ವ್ಯವಸ್ಥೆಯನ್ನು ಬಲಪಡಿಸುವ ಸಾಧನಗಳೇ ಆಗುತ್ತವೆ. ಅರಮನೆ ಗುರುಮನೆಗಳ ಸಖ್ಯ ಅಧಿಕಾರ ಕೇಂದ್ರವನ್ನು ಬಲಪಡಿಸಲೇ ಹೊರತು ಜನಸಮುದಾಯದ ಹಿತ ಕಾಯಲು ಅಲ್ಲ ಎಂಬುದು ಇತಿಹಾಸದಲ್ಲಿನ ಅಂಶಗಳಿಂದ ಸ್ಪಷ್ಟವಾಗುತ್ತದೆ. ಆದರೆ ಜೈನ ಧರ್ಮ ಅಹಿಂಸೆಯನ್ನು ತನ್ನ ಜೀವನಕ್ರಮದ ಕೇಂದ್ರವನ್ನಾಗಿಸಿಕೊಂಡಿದೆ. ಆದರೆ ಹಿಂಸೆಯ ಇನ್ನೊಂದು ಅತಿರೇಕವಾದ ಸ್ವಹಿಂಸೆಯನ್ನು ವೈಭವೀಕರಿಸುತ್ತದೆ. ಉಳಿದ ಧರ್ಮಗಳಲ್ಲಿ ಪಾಪಕ್ಕೆ ಪ್ರಾಶ್ಚಿತ್ತವಾಗಿ ಸ್ವಹಿಂಸೆ ಬಳಕೆಯಾದರೆ, ಜೈನ ಧರ್ಮದಲ್ಲಿ ಸ್ವಹಿಂಸೆಯೇ ವ್ಯಕ್ತಿಯ ಬಿಡುಗಡೆಯ ದಾರಿಯಾಗುತ್ತದೆ. ಹೊರಮುಖವಾಗಿ ವ್ಯಕ್ತವಾಗುವ ಹಿಂಸಾಪ್ರವೃತ್ತಿ, ಹಿಂಸಾನಂದ ಇತರರ ಜೀವನ ಹರಣಕ್ಕೆ ದಾರಿ ಮಾಡಿಕೊಡುವಂತೆ ಒಳಮುಖವಾಗಿ ವ್ಯಕ್ತಗೊಂಡಾಗ ಅದೆ ದೇಹದಂಡನೆ ಆತ್ಮಹಿಂಸೆ ಆತ್ಮಹತ್ಯೆಗಳಾಗಿ ಪರಿಣಮಿಸುತ್ತದೆ. ಜೀವನದ ಕಷ್ಟ ಕಾರ್ಪಣ್ಯಗಳಿಂದ ಪಾರಾಗಲು ಸಾವಿನ ಭಯವನ್ನೆದುರಿಸಲು ಪರಹಿಂಸೆಯನ್ನು ಬಳಸುವುದು ಹಿಂಸೆಯ ಹೊರವಿಧಾನವಾದರೆ ಪರಹಿಂಸೆ ಬೇಡವೆಂದು ಹಿಂಸೆಯನ್ನೇ ಅಪ್ಪಿಕೊಂಡು ನರಳಿ ಸಂತೋಷಿಸುವದು ಸ್ವಹಿಂಸೆಯ ಪ್ರತಿವಿಧಾನವಾಗಿದೆ ಎಂಬುದನ್ನು ಜೈನ ಧರ್ಮದ ಪ್ರವರ್ತಕರು, ಆಚಾರ್ಯರು, ಮುನಿಗಳು ತಮ್ಮ ಜೀವನ ವಿಧಾನದಿಂದ ಕಂಡುಬರುತ್ತದೆ. ಅಷ್ಟೇಅಲ್ಲದೇ ತಮ್ಮ ಸಮುದಾಯ ಪರ ದೃಷ್ಟಿಕೋನದಿಂದಾಗಿ ಆಳುವವರ ಆಗ್ರಹಕ್ಕೆ ತುತ್ತಾಗಿ ಪ್ರಾಣತೆತ್ತ ಜ್ಞಾನಿ-ವಿಜ್ಞಾನಿಗಳೂ ಸಮುದಾಯದ ಒಳಿತಿಗಾಗಿ ಪ್ರಾಣಕೊಡುವ ಸಾಮಾನ್ಯರೂ ತಮ್ಮ ಪ್ರಾಣತ್ಯಾಗದಿಂದಾಗಿ ಕಾಲಕ್ರಮೇಣ ಪೂಜ್ಯರಾಗುತ್ತಾರೆ. ಕನ್ನಡ ಜಾನಪದದಲ್ಲಿ ಸಾಕಷ್ಟು ಸಿಗುತ್ತವೆ. ತಮ್ಮ ಲೌಕಿಕ ಕಾಮನೆಗಳನ್ನು ಪೂರೈಸಿಕೊಳ್ಳಲು ಜನ ಸಮುದಾಯ ಆಶ್ರಯಿಸುವ ಕ್ಷುದ್ರದೇವರುಗಳು, ಜೀವನದ ಅಭದ್ರತೆ ಮತ್ತು ದಿನನಿತ್ಯದ ಕಷ್ಟ ಕಾರ್ಪಣ್ಯಗಳಿಂದ ನೆರಳುವ ಬಡಜನರಿಗೆ ಭ್ರಮಾತ್ಮಕ ಸಾಂತ್ವನ ಕೊಡುವ ಅವತಾರಿ ಪ್ರವಾದಿಗಳಾಗಿದ್ದಾರೆ. ತೀರ್ಥಂಕರರು ಈ ಬಗೆಯ ದೇವರುಗಳೇ.

ಹೀಗೆ ಹಿಂದು, ಬೌದ್ಧ, ಜೈನ, ಯಹೂದಿ, ಕ್ರೈಸ್ತ, ಇಸ್ಲಾಂ ಹೀಗೆ ಪ್ರಪಂಚದ ಎಲ್ಲಾ ಧರ್ಮಗಳ ದೇವರುಗಳೂ ಜನಸಮುದಾಯದ ಪಾಲಿಗೆ ಆದರ್ಶಪ್ರಾಯರಾಗಿ ಆಳುವ ಜನರ ಪರವಾದ ತ್ಯಾಗ, ಹಿಂಸೆ ಬಲಿದಾನ ಮತ್ತು ನಿಸ್ವಾರ್ಥತೆಗಳ ಬದುಕನ್ನು ಸಾಗಿಸುವಂತೆ ಪ್ರೇರೇಪಿಸುತ್ತವೆ. ಎಂಬುದನ್ನು ಜೈನಧರ್ಮದ ಸ್ಥಿತ್ಯಂತರಗಳ ಮೂಲಕ ಯಾವ ರೀತಿ ಪರಿಳಿತಗಳನ್ನು ಎದುರಿಸಿತು ಎಂಬುದನ್ನು ವೇದಕಾಲದ ಸಮಾಜ, ಋಷಭ, ಮಹಾವೀರರ

ಕಾಲದ ಜೈನ ಸಮಾಜ ಹಾಗೂ ಕರ್ನಾಟಕ ನಾಟಕದಲ್ಲಿ ಪ್ರಾಚೀನ ಹಾಗೂ ಆಧುನಿಕ ಜೈನ ಸಮಾಜ ಹಾಗೂ ಗದಗ ಜಿಲ್ಲೆಯಲ್ಲಿನ ಜೈನ ಸಮಾಜದ ಸ್ಥಿತಿಗತಿಗಳನ್ನು ಕುರಿತು ಹಾಗೂ ವಿವಿಧ ಕ್ಷೇತ್ರಗಳ ಮೂಲಕ ಯಾವ ರೀತಿಯಲ್ಲಿ ಅಭಿವೃದ್ಧಿ ಹೊಂದುತ್ತದೆ ಎಂಬುದನ್ನು ಶಾಸನಗಳು, ಸಾಹಿತ್ಯ ಕೃತಿಗಳ ಹಾಗೂ ಕ್ಷೇತ್ರ ಅಧ್ಯಯನ ವಿಧಾನಗಳಿಂದ ಅಧ್ಯಯನಕ್ಕೆ ಒಳಪಡಿಸಿ ವಿವಿಧ ಸಂಶೋಧಕರ ಹಾಗೂ ಸಂಶೋಧನ ಕೃತಿಗಳ ಸಮೀಕ್ಷೆಯ ಮೂಲಕ ಅಧ್ಯಯನ ಕೈಗೊಂಡು ವಿವರಣೆಗೆ ಒಳಪಡಿಸಲಾಗಿದೆ.

ಜೈನ ಸಂಸ್ಕೃತಿ ಭಾರತೀಯ ಜೀವನವನ್ನು ರೂಪಿಸುವಲ್ಲಿ ಮೌಲ್ಯಗಳನ್ನು ನಿರ್ಧರಿಸುವಲ್ಲಿ ಹಿರಿದಾದ ಪಾತ್ರವನ್ನಾಡಿದೆ. ಜೀವದಯೆ, ದಾನ, ಸಂಯಮ, ತಪಸ್ಸು ಶೀಲವೆಂಬ ಪಂಚಾಂಗಗಳ ಹಿರಿಮೆಯನ್ನರುಹಿ ಧರ್ಮದ ಸುಭದ್ರವಾದ ತಳಹದಿಯನ್ನು ಜೈನ ಸಂಸ್ಕೃತಿಯು ಹಾಕಿದೆ. ತಾತ್ವಿಕ ಕ್ಷೇತ್ರದಲ್ಲಿ, ಧಾರ್ಮಿಕ ವಿಷಯಗಳಲ್ಲಿ ಸಾಂಸ್ಕೃತಿಕ ರೀತಿ–ನೀತಿಗಳಲ್ಲಿ ಜೈನ ಸಂಪ್ರದಾಯ ವಿಶಿಷ್ಠ ಪಥವನ್ನು ತುಳಿದ್ದು ಅಮೂಲ್ಯ ಕಾಣಿಕೆಯನ್ನಿತ್ತಿದೆ. ಇಂದಿಗೂ ಜೈನ ಸಂಸ್ಕೃತಿಯು ನಮ್ಮ ಜೀವನದಲ್ಲಿ ಹಾಸುಹೊಕ್ಕಾಗಿ ಹೆಣೆದುದರಿಂದ ಪ್ರಸ್ತುತವೆನಿಸುತ್ತದೆ. "ಸಮಾಜವೆನ್ನುವುದು ನಿರಂತರವಾಗಿ ಬದಲಾವಣೆ ಹೊಂದುತ್ತಿರುವ ಸಂಕೀರ್ಣ ವ್ಯವಸ್ಥೆ ಹಾಗೂ ಸಾಮಾಜಿಕ ಸಂಬಂಧಗಳ ಒಂದು ಬಲೆ" (ಮೇಕಾವರ್ & ಪೇಸ್) ಅದು "ಕೆಲವೊಂದು ನಿಶ್ಚಿತ ಉದ್ದೇಶಗಳಿಗಾಗಿ ಪ್ರಜ್ಞಾಪೂರ್ವಕವಾಗಿ ನಿರ್ಮಿಸಿದ ಸಾಧನ" (ಜಾನ್‌ಲಾಕ್ ಮತ್ತು ರೂಸೋ) ಯಾವುದೇ ಸಮಾಜವು ನಾಲ್ಕು ಲಕ್ಷಣಗಳನ್ನು ಹೊಂದಿರುತ್ತದೆ. ಎಂಬ ಸಮಾಜ ಶಾಸ್ತ್ರಜ್ಞರು ಪಟ್ಟಿ ಮಾಡುತ್ತಾರೆ ಆ ಲಕ್ಷಣಗಳು ಇಂತಿವೆ.

೧. ಹೋಲಿಕೆ ಮತ್ತು ವ್ಯತ್ಯಾಸಗಳು

೨. ಪರಸ್ಪರಾವಲಂಬನೆ

೩. ಸಹಕಾರ

೪. ಬಹು ಆಯಾಮವಿರುವಿಕೆ ಅಥವಾ ನಿತ್ಯ ಪರಿವರ್ತಶಿಲತೆ.

ಈ ಅಂಶಗಳನ್ನು ಆಧಾರವಾಗಿಟ್ಟುಕೊಂಡು ಪ್ರಾಚೀನ ಜೈನ ಸಮಾಜ ಹೇಗಿತ್ತು ಎಂಬುದನ್ನು ಸ್ಥೂಲವಾಗಿ ನಿರೂಪಿಸುವುದು ಈ ಅಧ್ಯಯನದ ಉದ್ದೇಶ. ಪ್ರಾಚೀನ ಎಂದು ಹೇಳಿದರೂ ಇಲ್ಲಿನ ಅವಲೋಕನದ ಕಾಲಮಿತಿ ವೇದಗಳ ಕಾಲದಿಂದ ಹಿಡಿದು ೨೧ನೇ ಶತಮಾನದವರೆಗೂ ವ್ಯಾಪಿಸಿಕೊಂಡಿದೆ.

## ೭.೨ ಗದಗ ಪರಿಸರದ ಆಧುನಿಕ ಜೈನ ಸಮಾಜ :

ಜೈನ ಸಮಾಜವೂ ಸಮಗ್ರ ಭಾರತದ ಸಾಂಸ್ಕೃತಿಕ ನೆಯ್ಗೆಯ ಒಂದು ಅವಿಭಾಜ್ಯ ಅಂಗವಾಗಿಯೇ ಬೆಳೆದು ಬಂದಂತೆ ಸ್ಥೂಲ ನೋಟಕ್ಕೆ ತೋರುವುದು. ದಿಟ ಸೂಕ್ಷ್ಮವೂ ತಾಲನಿಕವೂ ಆದ ಒಳನೋಟಕ್ಕೆ ಜೈನತ್ವಕ್ಕಿರುವ

ಸ್ವಾತಂತ್ರ್ಯ ವ್ಯಕ್ತಿತ್ವದ ಸ್ವರೂಪ ಬಯಲಾಗುತ್ತದೆ. ಪ್ರಾಚೀನ ಗದಗ ಪರಿಸರದಲ್ಲಿ ಕ್ರಿ.ಶ. ೨ನೇ ಶತಮಾನದಿಂದ ೧೩ನೆಯ ಶತಮಾನದವರೆಗೆ ಜೈನ ಮತೀಯರೇ ಆವರಿಸಿದ್ದ ಈ ಭಾಗದಲ್ಲಿ ಉಂಟಾದ ಮತಾಂತರ, ರಾಜಪ್ರಾಬಲ್ಯದ ಕೊರತೆಯಿಂದಾಗಿ ಅವನತಿಯಾಗುತ್ತಾ ಬಂದು ಇಂದು ಒಂದೊಂದು ಗ್ರಾಮಗಳಲ್ಲಿ ೧೦ ರಿಂದ ೨೦ ಕುಟುಂಬಗಳಿಗೆ ಮಾತ್ರ ಸಿಮೀತವಾಗಿದೆ ಜೈನಧರ್ಮ. ದಿಗಂಬರ ಪಂಥವೇ ಪ್ರಮುಖವಾಗಿರುವ ಈ ಭಾಗದಲ್ಲಿ ಶ್ವೇತಾಂಬರ ಪಂಥದ ಜೈನರು ಅಲ್ಲಲ್ಲಿ ಕಂಡು ಬರುತ್ತಾರೆ. ಗ್ರಾಮೀಣ ಭಾಗದಲ್ಲಿ ಕೃಷಿಯನ್ನೇ ಮೂಲ ವೃತ್ತಿಯನ್ನಾಗಿ ಮಾಡಿಕೊಂಡಿರುವ ಇವರು ಪಟ್ಟಣನಗರ ಪ್ರದೇಶಗಳಲ್ಲಿ ವಾಸಿಸುವ ಜೈನರು ವ್ಯಾಪಾರವನ್ನೇ ಮೂಲ ವೃತ್ತಿಯನ್ನಾಗಿ ಮಾಡಿಕೊಂಡು ಜೀವನವನ್ನು ಸಾಗಿಸುತ್ತಿದ್ದಾರೆ.

ಗದಗ ಜಿಲ್ಲೆಯು ಐದು ತಾಲೂಕುಗಳಿಂದ ೩೦೨ ಗ್ರಾಮಗಳಿಂದ ಕೂಡಿದೆ. ಇದರಲ್ಲಿ ಸರಿಸುಮಾರು ೨೫೦ಕ್ಕಿಂತ ಹೆಚ್ಚಿನ ಗ್ರಾಮಗಳಲ್ಲಿ ಜೈನರು ವಾಸವಾಗಿದ್ದು ಒಟ್ಟು ಜನಸಂಖ್ಯೆಯಲ್ಲಿ ಶೇ.೮% ರಷ್ಟು ಜನ ಜೈನ ಧರ್ಮೀಯರು ಇದ್ದಾರೆ.[೧] ಪ್ರಾಚೀನ ಜೈನ ಧರ್ಮದ ವೃತ, ಆಚರಣೆಗಳನ್ನೇ ಮುಂದುವರಿಸಿಕೊಂಡು ಬಂದಿರುವ ಇವರು ಇಂದು ಆರ್ಥಿಕವಾಗಿ, ಶೈಕ್ಷಣಿಕವಾಗಿ, ಸಾಂಸ್ಕೃತಿಕವಾಗಿ, ಧಾರ್ಮಿಕವಾಗಿ, ಸಾಮಾಜಿಕವಾಗಿ ತಮ್ಮ ಧರ್ಮದ ತತ್ವಗಳಿಗೆ ಅನುಸಾರವಾಗಿ ಬೆಳೆಯುತ್ತಿದ್ದಾರೆ. ಈ ಭಾಗದ ಪ್ರಮುಖ ಪಟ್ಟಣ ನಗರಗಳಾದ ಗದಗ, ಲಕ್ಷ್ಮೇಶ್ವರ, ಶಿರಹಟ್ಟಿ, ಗಜೇಂದ್ರಗಡ, ರೋಣ, ನರಗುಂದ, ಮುಳಗುಂದ, ಹುಲಕೋಟಿ, ಮುಂಡರಗಿ, ಬನ್ನಿಕೊಪ್ಪ, ಬೆಳ್ಳಟ್ಟಿಗಳಲ್ಲಿ ಜೈನ ಧರ್ಮೀಯರು ಹೆಚ್ಚಾಗಿ ಕಂಡುಬರುತ್ತಾರೆ. ಅಷ್ಟೇ ಅಲ್ಲದೆ ಹರ್ತಿ, ವೆಂಕಟಾಪೂರ, ಸೊರಟೂರು, ಡೋಣಿ, ಡಂಬಳ, ಸವಡಿ, ಕುರ್ತಕೋಟಿ ಗ್ರಾಮಗಳಲ್ಲಿಯೂ ಜೈನರು ಕಂಡು ಬರುತ್ತಾರೆ. ಅವರು ಯಾವುದೇ ಸ್ಥಳದಲ್ಲಿದ್ದರೂ ತಮ್ಮ ಪರಂಪರೆಯ ಸಂಪ್ರದಾಯಗಳನ್ನು ಯಥಾವತ್ತಾಗಿ ಮುನ್ನಡೆಸಿಕೊಂಡು ಸಾಗುತ್ತಿದ್ದಾರೆ. ಅದಕ್ಕೆ ಪ್ರೇರಕವಾಗಿ ಜಿಲ್ಲಾ ಮಟ್ಟದಲ್ಲಿ ದಿಗಂಬರ ಸಂಘಗಳನ್ನು ಸ್ಥಾಪಿಸಿ ಅದರ ಮೂಲಕ ಜೈನ ಸ್ವಾಮಿಗಳನ್ನು ಕರೆಯಿಸಿ ಆಚರಣೆ ವ್ರತಗಳನ್ನು ಮುನ್ನಡೆಸಿಕೊಂಡು ಸಾಗುತ್ತಿದ್ದಾರೆ. ಭಾರತದ ಜನಗಣತಿಯಲ್ಲಿಯೂ ಸಹ ಜೈನರು ತಮ್ಮನ್ನು ಹಿಂದುಗಳೆಂದು ಅದರಡಿ ಸೇರಿಸದೆ 'ಜೈನರು' ಎಂದು ನಮೂದಿಸಿ ಪ್ರತ್ಯೇಕ ವ್ಯಕ್ತಿತ್ವದ ಗುರುತನ್ನು ಕಾಪಾಡುತ್ತಿದ್ದಾರೆ.

ಗದಗ ಜಿಲ್ಲಾ ಜೈನ ಸಮುದಾಯದವರು ಒಗ್ಗಟ್ಟಿನಿಂದ ತಮ್ಮ ಧರ್ಮದ ತತ್ವಗಳನ್ನು ಸಂಘ, ಸಂಸ್ಥೆಗಳ ಮೂಲಕ ಒಂದು ಸಮಾನ ಸಂಸ್ಕೃತಿ, ನಂಬಿಕೆ ಆಚರಣೆ ಮತ್ತು ಸಮಾನ ಆಸಕ್ತಿಯನ್ನು ಅನ್ವಯಿಸಿಕೊಂಡು ಉಳಿದ ಮತ್ತು ಅದರ ನೆರೆಹೊರೆಯಲ್ಲಿರುವ ಸಮಾಜದವರಿಗಿಂತ ತಮ್ಮ ಸಂಸ್ಕೃತಿಯ ನಂಬಿಕೆ ಆಚರಣೆ ಆಸಕ್ತಿಗಳ ಭಿನ್ನತೆಗಳನ್ನು ಸ್ಪಷ್ಟಗೊಳಿಸಿ ತನ್ನ ಸ್ವಂತಿಕೆ ಮತ್ತು ಪ್ರತ್ಯೇಕತೆಯ ವಿಚಾರದಲ್ಲಿ ಪ್ರಜ್ಞಾವಂತವಾಗಿದೆ.

---

೧. ಗದಗ ಜಿಲ್ಲಾ ಗೆಜೆಟಿಯರ್ ೨೦೧೧

ಎಂಬುದನ್ನು ಮನಗಾಣುವಂತೆ ಈ ಭಾಗದ ಜೈನಧರ್ಮದ ಮುಖಂಡರು ಇಂದು ದಾಪುಗಾಲು ಇಟ್ಟಿದ್ದಾರೆ. ಎಂಬುವುದು ನನ್ನ ಅಧ್ಯಯನದ ಸಮಯದಲ್ಲಿ ಕಂಡುಕೊಂಡೆನು. ಇಂದು ಈ ಭಾಗದ ಜೈನರು ಸಾಮಾಜಿಕ, ರಾಜಕೀಯ, ಆರ್ಥಿಕ, ಸಾಹಿತ್ಯಿಕ, ಶೈಕ್ಷಣಿಕ ರಂಗಗಳಲ್ಲಿ ತಮ್ಮನ್ನು ಹಾಗೂ ಸಮುದಾಯವನ್ನು ಪರಿಣಾಮಕಾರಿಯಾಗಿ ತೊಡಗಿಸಿಕೊಂಡು ಸಾಗುತ್ತಿದ್ದಾರೆ. ತುಂಡು ತುಂಡಾಗಿರುವ ತಮ್ಮ ಮತಿಯರನ್ನು ಗುಂಪನ್ನು ಆಗಿ ಪುನರುತ್ಪಾದಿಸುವ ಚೈತನ್ಯವನ್ನು ಹೊಂದಿ ಅದಕ್ಕೆ ವಿಶಿಷ್ಟವಾದ ಸ್ವರೂಪದಿಂದ ಅದು ಉಳಿದ ಸಮಾಜದಿಂದ ಅನನ್ಯವೆನಿಸುವಂತೆ ಕಾರ್ಯಗಳನ್ನು ಇಂದು ಕೈಗೊಳ್ಳುತ್ತಿದ್ದಾರೆ. ನಾನು ನನ್ನ ಕ್ಷೇತ್ರ ಅಧ್ಯಯನದ ಸಮಯದಲ್ಲಿ ಸಂಘದ ಮುಖ್ಯಸ್ಥರನ್ನು ಭೇಟಿಯಾಗುವುದಕ್ಕೆ ಹೋದಾಗ ಪಕ್ಕದ ರಾಜ್ಯದಿಂದ ಒಬ್ಬ ಜೈನ ಮುನಿಗಳನ್ನು ಕರೆಯಿಸಿಕೊಂಡು ಆಚರಣೆ ಮಾಡುತ್ತಿದ್ದ ಕಾರ್ಯಕ್ರಮದಲ್ಲಿ ಭಾಗಿಯಾಗುವ ಸಂದರ್ಭ ಒದಗಿಬಂದಿತ್ತು. ಆದ್ದರಿಂದ ಈ ಭಾಗದಲ್ಲಿನ ಜೈನ ಮುಖಂಡರು ಭಾಗಿಯಾಗುವ ಸಂದರ್ಭ ಒದಗಿ ಬಂದಿತ್ತು. ಆದ್ದದರಿಂದ ಈ ಭಾಗದಲ್ಲಿನ ಜೈನ ಮುಖಂಡರು ಜೈನ ಧರ್ಮೀಯರು ಅಪಾರ ಸಂಖ್ಯೆಯಲ್ಲಿ ಭಾಗವಹಿಸಿದ್ದನ್ನು ಕಂಡು ಜೈನ ಧರ್ಮಿಯರ ಬಗ್ಗೆ ಧರ್ಮದ ಬಗ್ಗೆ ಗೌರವ ಹೆಚ್ಚಿತು.

ಜೈನ–ಅಜೈನ ಸಮಾಜಗಳಲ್ಲಿ ವೈದೃಶ್ಯಗಳಿಗಿಂತ ಸಾದೃಶ್ಯಗಳೇ ಗೋಚರಿಸುತ್ತವೆ. ಜೈನರು ಹಿಂದೂ ಹಬ್ಬಗಳನ್ನು ಆಚರಿಸುತ್ತಾರೆ. ಉಪವಾಸ ಆಚರಣೆ ನೂಂಪಿಗಳ ಪೂಜಾವಿಧಾನ ಬಳಸುವ ಪೂಜಾ ವಸ್ತುಗಳು ಮತ್ತು ಪೂಜೆಯ ಪರಿಭಾಷೆಯಲ್ಲಿ ಸಮಾನತೆಯಿದೆ. ಜೈನ ಭಟ್ಟಾರಕರೂ ಸ್ಥೂಲವಾಗಿ ಹಿಂದು ಮಠಾಧೀಶರು–ಜಗದ್ಗುರುಗಳ ರೀತಿಯಲ್ಲಿ ಇದ್ದಾರೆ. ಹಿಂದೂವರ್ಣ ವ್ಯವಸ್ಥೆ ಅಲ್ಲೂ ಇದೆ. ಹಿಂದುಗಳು ಹಿಂದೂ ಸನ್ಯಾಸಿಗಳಿಗೆ ತೋರುವಂತೆ ಜೈನ ಮುನಿಗಳಿಗೆ ಜೈನರು ಪೂಜ್ಯತೆ ತೋರುತ್ತಾರೆ. ಜೈನ ಬ್ರಾಹ್ಮಣರೆಂಬ ಮುರು ಎಳೆಗಳಿಗೆ ಬೇರೆ ವಿವರಣೆ ಕೊಡುತ್ತಾರೆ. ಜೈನರೂ ಶ್ರಷ್ದಾದಿ ಅಪರಕರ್ಮಗಳನ್ನು ಆಚರಿಸುತ್ತಾರೆ. ಇಂಥಹ ಇನ್ನು ಕೆಲವು ಸಾಮ್ಯತೆ ಎದ್ದು ಕಾಣುತ್ತವೆ. ಆದರೆ ಇಂಥ ಸದೃಶ್ಯಗಳನ್ನು ಹಾಗೂ ಹಿಂದೂ ಪ್ರಭಾವವನ್ನು ಅವಲಂಬಿಸಿ ಜೈನ ಸಮಾಜವನ್ನು ಅರ್ಥೈಸುವುದಕ್ಕೆ ಆಗುವುದಿಲ್ಲ. ಜೈನ ಜೀವನ ವಿಧಾನ, ಸಿದ್ಧಾಂತ ಮತ್ತು ಸಾಹಿತ್ಯಗಳಲ್ಲಿ ಅಂತರಗಳು ನಿಚ್ಚಳವಾಗಿವೆ. ಜೈನ ದೇವಾಲಯ, ಪೂಜೆ, ಜೈನಮುನಿ, ಜೀವನ ಕ್ರಮ ವಿಶಿಷ್ಟವಾಗಿದೆ.[೨]

ಜೈನ ಸಮಾಜದ ವಿಸ್ತಾರವಾದ ಸ್ವರೂಪವನ್ನು ಅದರ ಹಲವು ಮಗ್ಗಲುಗಳಿಂದ ಜೀನಸೇನಾಚಾರ್ಯರು ನಿರೂಪಿಸಿದ್ದಾರೆ. ಪಂಚ ಪರಮೇಷ್ಠಿಗಳಲ್ಲಿ ಸಿದ್ಧರ ಮೂರ್ತಿಯಿಟ್ಟು ಅದರ ಮುಂದೆ ಪೂಜಾಚರಣೆಯೊಂದಿಗೆ ಮದುವೆಯ ಕ್ರಿಯೆಗಳು ಪ್ರಾರಂಭವಾಗಬೇಕು ಎಂದಿದ್ದಾರೆ. ಜೈನ ಸಮಾಜದಲ್ಲಿಯೇ ಪತಿ–ಪತ್ನಿಯರನ್ನು ಆರಿಸಿಕೊಳ್ಳಬೇಕೆಂಬ ಗ್ರಹಿಕೆ ಸೂಚಿಸಲ್ಪಟ್ಟಿದೆ. ನೂತನ ವಧೂವರರು ಮದುವೆಯಾದ ದಿನದಿಂದ ಏಳು ದಿನಗಳವರೆಗೆ

---

೨. ಲಿಂಗಾಯತ, ಜೈನ ಮತ್ತು ಬ್ರಾಹ್ಮಣ ಧರ್ಮಗಳು : ಮಠಗಳು ಒಂದು ತೌಲನಿಕ ಅಧ್ಯಯನ – ಹಿರೇಮಲ್ಲೂರ್ ಈಶ್ವರನ್ – ಪುಟ – ೧೮೩.

ಬ್ರಹ್ಮಚರ್ಯವನ್ನು ಪಾಲಿಸಬೇಕು. ಮತ್ತು ಆ ಸಪ್ತವಾರಗಳಲ್ಲಿ ಅವರು ಪವಿತ್ರ ಸ್ಥಳಗಳಿಗೆ ಹೋಗಿ ಬರುವುದು ಒಳ್ಳೆಯದೆಂದಿದ್ದಾರೆ. ಈ ರೀತಿ ಒಂದು ವಾರ ನಂತರ ಸ್ವಗ್ರಹ ಸೇರಿ ಸಂಸಾರವನ್ನು ಪ್ರಾರಂಭಿಸಬೇಕು. ಎಂದು ಜಿನಸೇನಾಚಾರ್ಯರು ಆದಿಪುರಾಣದ ೩೯ನೇ ಶ್ಲೋಕದಲ್ಲಿ ವಿವರಿಸಿದ್ದಾರೆ. ಇದೇ ಸಂಪ್ರದಾಯವನ್ನು ಗದಗ ಪರಿಸರದ ಜೈನರು ಅನುಸರಿಸಿಕೊಂಡು ಸಾಗುತ್ತಿದ್ದಾರೆ. ಹೀಗಾಗಿ ಜೈನರು ತಮ್ಮ ಪರಂಪರಾಗತವಾದ ಆಚರಣೆಗಳನ್ನು ಅನುಸರಿಸಿಕೊಂಡು ಮುನ್ನಡೆದಿದ್ದಾರೆ.

ಇಂದಿನ ಜೈನ ಸಮಾಜದೊಳಗಡೆ ಇರುವ ಆಚರಣೆಗಳೆಲ್ಲವೂ ಹಿಂದಿನ ಕಾಲದಲ್ಲಿ ಜಾರಿಯಲ್ಲಿದ್ದವುಗಳೇ ಜೈನ ಧರ್ಮ ಮೂಲಭೂತವಾಗಿ ಬ್ರಹ್ಮ ಸೃಷ್ಟಿಯನ್ನು ಒಪ್ಪುವುದಿಲ್ಲ. ಆಧ್ಯಾತ್ಮಿಕ, ಸಾಮಾಜಿಕ, ಜಾತೀಯ ವ್ಯವಸ್ಥೆಯಲ್ಲಿ ಶ್ರೇಣಿಕೃತ ವರ್ಗೀಕರಣವನ್ನಾಗಲಿ, ಬ್ರಾಹ್ಮಣ ಶ್ರೇಷ್ಠತೆಯನ್ನಾಗಲಿ ಜೈನಧರ್ಮ ಮಾನ್ಯ ಮಾಡುವುದಿಲ್ಲ. ಇದನ್ನೇ ಪಂಪ ಮಹಾಕವಿ 'ಮನುಷ್ಯಜಾತಿ ತಾನೊಂದೆ ವಲಂ' ಎಂದು ಕನ್ನಡಿಸಿರುವುದು ಇಡೀ ಮಾನವ ಕುಲ ಒಂದು ಮತ್ತು ಸಮಾನವೆಂದು ಸಾರಿದ ಜಿನಧರ್ಮ ಕಾಲಕ್ರಮೇಣ ಉಳಿದ ಧರ್ಮಗಳೊಂದಿಗೆ ಹೊಂದಾಣಿಕೆ ಮಾಡಿಕೊಳ್ಳುವ ಐತಿಹಾಸಿಕ ಜರೂರು ಒದಗಿತು. ಜೈನರು, ಬೌದ್ಧರು, ಅಲ್ಪಸಂಖ್ಯಾತರು, ಬೌದ್ಧರಿಗಿಂತ ಜೈನರೂ, ಜೈನರಿಗಿಂತ ಬ್ರಾಹ್ಮಣರು ಅಧಿಕ ಸಂಖ್ಯೆಯಲ್ಲಿದ್ದಾರೆ. ಒಟ್ಟು ಭಾರತದ ಜನಸಂಖ್ಯೆಯಲ್ಲಿ ಅವರು ಕಡಿಮೆ. ಬ್ರಾಹ್ಮಣರು ೨%ವರೆಗೂ ಇದ್ದರೆ ಜೈನರು ೦.೪% ರಷ್ಟೇ ಇದ್ದಾರೆ. ಗದಗ ಪರಿಸರದಲ್ಲಿ ಜೈನರು/ಮತೀಯರ ಒಟ್ಟು ಜನಸಂಖ್ಯಾ ಶೇಖಡವಾರು ಇನ್ನೂ ಕಡಿಮೆಯಾಗುತ್ತಿದೆ. ಭಾರತದಲ್ಲಿ ಇಂದಿಗೂ ಉಳಿದು ಬಂದಿರುವ ಅವೈದಿಕ ಮತಗಳಲ್ಲಿ ಜೈನಮತ ಪ್ರಧಾನವಾಗಿದೆ.[೩] ಜೈನಮತ ಅವೈದಿಕ ಶ್ರಮಣ ಸಮಾಜವಾಗಿದ್ದು ಅದಕ್ಕೆ ಸುದೀರ್ಘ ಚಾರಿತ್ರಿಕ ಹಿನ್ನಲೆಯ ಸಾತತ್ಯವಿದೆ. ಈ ಭಾಗದಲ್ಲಿ ಆಳ್ವಿಕೆ ನಡೆಸಿದ ರಾಜ ಮನೆತನಗಳ ರಾಜರು, ರಾಣಿಯರು, ಆಡಳಿತ ಅಧಿಕಾರಿಗಳು, ಜೈನ ಧರ್ಮದ ವ್ರತ ಸಂಪನ್ನರಾದ ಮುನಿಗಳು ಆಚಾರ್ಯರು ಈ ಪರಿಸರದಲ್ಲಿ ಜೈನ ಪರಂಪರೆ ಅಭಿವೃದ್ಧಿಯಾಗುವುದನ್ನು ಅಪಾರವಾದ ಕೊಡುಗೆಗಳನ್ನು ಸಲ್ಲಿಸಿದ್ದರ ಪರಿಣಾಮ ಇಂದಿಗೂ ಈ ಪರಿಸರದಲ್ಲಿ ಜೈನ ಧರ್ಮ ತನ್ನ ನೆಲೆಯನ್ನು ಕಂಡುಕೊಂಡಿದೆ. ಸದೃಢವಾದ ಜೈನ ಸಮಾಜವನ್ನು ನಿರ್ಮಿಸಿದ್ದರ ಪರಿಣಾಮವಾಗಿ ಇಂದಿಗೂ ಈ ಪರಿಸರದಲ್ಲಿ ಜೈನ ಯಾತ್ರಾ ಸ್ಥಳಗಳಿವೆ. ಜೈನ ಆಚರಣೆಗಳನ್ನು ಯಥಾ ಪ್ರಕಾರವಾಗಿ ಕಾಲದಿಂದ ಕಾಲಕ್ಕೆ ಆಚರಣೆ ಮಾಡಿಕೊಂಡು ಬರುತ್ತಿದ್ದಾರೆ.

ಜೈನ ಧರ್ಮೀಯರು ಇಂದು ಸಮಾಜದ ಎಲ್ಲಾ ಕ್ಷೇತ್ರಗಳಲ್ಲಿಯೂ ಮುನ್ನುಗ್ಗುತ್ತಿದ್ದಾರೆ. ಎಂಬುದಕ್ಕೆ ಹಲವು ಉದಾಹರಣೆಗಳಿವೆ. ಸಾಮಾಜಿಕ ಕ್ಷೇತ್ರದಲ್ಲಿ ಜೈನ ತತ್ವಗಳನ್ನು ಪ್ರಸಾರ ಮಾಡುವುದರೊಂದಿಗೆ ಪ್ರಸ್ತುತ ಸಮಾಜಕ್ಕೆ ಅವಶ್ಯಕವಾದ ಮೌಲ್ಯಗಳನ್ನು ತನ್ನ ಗರ್ಭದೊಳಗೆ ಮೈಗೂಡಿಸಿಕೊಂಡಿರುವ ಜೈನಧರ್ಮದ ಆ ಮೌಲ್ಯಗಳು

---

೩. ಜೈನ ಸಂಸ್ಕೃತಿ ಮತ್ತು ಸಿದ್ಧಾಂತಗಳು –ಡಾ. ಪಿ. ಕೆ. ಖಂಡೋಬಾ – ಪುಟ– ೭೫ ರಿಂದ ೮೫

ಇಂದಿಗೂ ಪ್ರಸ್ತುತವೆನಿಸುತ್ತವೆ. ದಾನ, ದತ್ತಿಗಳನ್ನು ನೀಡುವುದರಲ್ಲಿ ಜೈನ ಧರ್ಮೀಯರು ತಮ್ಮ ಧಾರ್ಮಿಕ ಮನೋಭಾವವನ್ನು ಮೈಗೂಡಿಸಿಕೊಂಡು ಇಡೀ ಸಮಾಜಕ್ಕೆ ಮಾದರಿಯಾಗಿದ್ದಾರೆ. ಗದಗ ಪರಿಸರದಲ್ಲಿ ಜನಿಸಿದ ದಾನಚಿಂತಾಮಣಿ ಅತ್ತಿಮಬ್ಬೆಯೇ ಸ್ಫೂರ್ತಿಯ ಸೆಲೆಯಾಗಿದ್ದಾಳೆ. ಎಲ್ಲಾ ಧರ್ಮೀಯರಿಗೂ ಇನ್ನೂ ಶೈಕ್ಷಣಿಕ ಕ್ಷೇತ್ರದಲ್ಲಿ ಜೈನರು ಸ್ತ್ರೀ ಪುರುಷರೆನ್ನದೇ ಅಕ್ಷರಸ್ಥರಾಗುತ್ತಿದ್ದಾರೆ. ಮತ್ತು ಶಿಕ್ಷಣ, ಸಂಸ್ಥೆಗಳನ್ನು ತೆರೆದು ಬಡವರು, ನಿರ್ಗತಿಕರು, ದೀನ ದುರ್ಬಲರು ಶಿಕ್ಷಣ ಪಡೆಯುವುದಕ್ಕೆ ಅನುಕೂಲ ಮಾಡಿಕೊಟ್ಟಿದ್ದಾರೆ. ಇನ್ನು ಸಾಂಸ್ಕೃತಿಕ ವಲಯದಲ್ಲಿಯೂ ಈ ಭಾಗದ ಜೈನರು ತಮ್ಮ ಧರ್ಮದ ಸಾಂಸ್ಕೃತಿಕ ಮೌಲ್ಯಗಳನ್ನು ವಿವಿಧ ಹಬ್ಬ ಆಚರಣೆಗಳನ್ನು ಆಚರಿಸುವುದರ ಮೂಲಕ ಸಾಂಸ್ಕೃತಿಕ ಹಿರಿಮೆ ಗರಿಮೆಯನ್ನು ಮೆರೆದಿದ್ದಾರೆ. ಹೀಗೆ ಜೈನ ಸಮಾಜದ ಅಂತರಂಗದಲ್ಲಿಯೇ ಕಾಣಿಸಿಕೊಂಡು ಕೆಲವು ವಿಕಸನಾತ್ಮಕ ಧೋರಣೆಗಳು ಈ ಮತಾಂತರ ಪ್ರಕ್ರಿಯೆಯಲ್ಲಿಯೂ ಪ್ರತಿಫಲಿಸಿವೆ. ಜೈನ ಸಮಾಜವು ಚರಿತ್ರೆಯಿಂದ ಪರಿವರ್ತಿತವಾಗುವ ಸಾಧ್ಯತೆಯನ್ನು ಹೊಂದಿರುವ ಜೀವಂತ, ಶಕ್ತಿಯುತ ಬಲಿಷ್ಠ ಸಮಾಜ ಅದು ನಿಂತ ನೀರಲ್ಲ. ತಾನು ಬಾಳುತ್ತಿರುವ ಭಾರತೀಯ, ಕರ್ನಾಟಕ, ಗದಗ ಜಿಲ್ಲೆಯ ಐತಿಹಾಸಿಕ ಮತ್ತು ಸಾಮಾಜಿಕ ವಾಸ್ತವತೆಯೊಂದಿಗೆ ಹೊಂದಿರುವ ಸಂಬಂಧ ಚಲನರಹಿತವಾದದ್ದಲ್ಲ. ಜೈನ ಸಮಾಜ ತನ್ನ ಸಾವಿರಾರು ವರ್ಷಗಳ ಚರಿತ್ರೆಯ ಉದ್ದಕ್ಕೂ ಹೊಸ ತಂತ್ರ, ಪ್ರಯೋಗ ಚಿಂತನ, ಪರಿಕಲ್ಪನೆಗಳ ಪರಿವರ್ತನೆಗೆ ಲೋಪ, ಅಗಮ, ಆದೇಶಗಳ ಆಯಾಮಗಳಿಗೆ ತನ್ನನ್ನು ಒಪ್ಪಿಕೊಳ್ಳುತ್ತ ಬಂದಿದೆ. ಜೈನ ಅಗಮ ಪರಂಪರೆಯ ಚೌಕಟ್ಟಿನೊಳಗೆ ಸ್ವತಂತ್ರ ಆಲೋಚನೆಗಳಿಂದ ಹೊಸ ಸಂಗತಿಗಳಿಗೆ ಕೈಚಾಚಲು ಮಾಡಿದ ಧೀಮಂತರ ಪ್ರಯತ್ನಗಳೂ ಇದರಲ್ಲಿ ಬೆರೆತಿವೆ.[೪]

ಜೈನ ಸಮಾಜ ಏಕಕಾಲದಲ್ಲಿ ಸ್ಥಿರವೂ ಚರವೂ ಆಗಿದೆ. ಸ್ಥಿರತೆಯನ್ನು ಚರತೆಯೇ ತಂದುಕೊಟ್ಟಿದೆ. ಅದರಲ್ಲಿ ಘಟಿಸುತ್ತ ಬಂದಿರುವ ಸ್ಥಿತ್ಯಂತರಗಳು ಅದರ ಸ್ಥಿರತೆಗೆ ಧಕ್ಕೆ ತರದೆ ಕಾಯಕಲ್ಪವೆಸಗಿವೆ. ಸ್ಥಾವರಕ್ಕೆ ಅಳಿವು ಉಂಟಾಗದಿರಬೇಕಾದರೆ ಅದರಲ್ಲಿ ಜಂಗಮತೆಗೂ ಅವಕಾಶವಿರಬೇಕು. ಜೈನ ಸಮಾಜದ ಸ್ಥಿರತೆ ಸ್ಥಾವರತೆ ಸಾಧ್ಯವಾಗಿರುವುದು ಅದರ ಚರಿತ್ರೆಯುದ್ಧಕ್ಕೂ ನಿರಂತರವಾಗಿ ನಡೆಯುತ್ತ ಬಂದಿರುವ ಚರತೆ ಸ್ಥಿತ್ಯಂತರತೆ ಮತ್ತು ಜಂಗಮತೆಯಿಂದ ಈ ಬಗೆಯ ಚರಿತ್ರೆಯ ನಿಕಷಕ್ಕೆ ಒಪ್ಪಿದಾಗಲೇ ಅದರ ಜನಿಕ ಆಯಾಮಗಳನ್ನು ವಿಶ್ಲೇಷಿಸುವುದಕ್ಕೆ ಸಾದ್ಯ. ಇದರ ಫಲಿತವಾಗಿ ಜೈನ ಸಮಾಜದ ಕ್ರಿಯಾತ್ಮಕ ಮೌಲ್ಯ ಪ್ರಕಟಗೊಳ್ಳುತ್ತಿದೆ. ಚರಿತ್ರೆಯ ಹಾಸಿನಲ್ಲಿ ನಡೆದಿರುವ ಘಟನೆಗಳ ಸಾಂಗತ್ಯವನ್ನು ತಿಳಿಯದಿದ್ದರೆ ಜೈನ ಸಮಾಜ ವಾಸ್ತವ ಚಿತ್ರ ಸಂವೇದ್ಯವಾಗುವುದಿಲ್ಲ. ಅಂತ್ಯಜರಾದಿಯಾಗಿ ಅನ್ಯಜಾತಿಯವರು ಜೈನ ಸಮಾಜದೊಳಗೆ ಮಿಳಿತಗೊಳ್ಳುವುದನ್ನು ಎಲ್ಲ ಕಡೆಯೂ ಮಾನ್ಯ ಮಾಡಿದ್ದರೂ ಒಂದು ಜೈನ ಶಾಸನ ಮಾತ್ರ ಇದನ್ನು ನಿಬಂಧಿಸಿದೆ. 'ಮನುಷ್ಯ ಜಾತಿ ತಾನೊಂದೆ ವಲಂ'[೫]

---

೪ ತಿರುಳಗನ್ನಡ ನಾಡು ಪುಲಿಗೇರಿ – ಡಾ. ಸದಾನಂದ ಕನವಳ್ಳಿ – ಪುಟ – ೭೨ ರಿಂದ ೮೦

೫. ಆದಿಪುರಾಣ – ಪಂಪ

ಎಂದು ಹೇಳಿದ್ದು ಒಂದು ತುದಿಯಾದರೆ 'ಆಕುಲೀನರಪ್ಪವರೊಂದಿಗೆ ಕೊಳ್ಕೊಡೆಯಾದರೆ ಕುಲಕ್ರಮಂ ಕಿಡುಗುಂ' ಎಂಬುದು ಇನ್ನೊಂದು ತುದಿಯಾಗಿದೆ. ಜೈನ ಸಮಾಜ ಎರಡು ತುದಿಗಳ ನಡುವಣ ಸುವರ್ಣ ಮಾಧ್ಯಮವನ್ನು ಹಿಡಿದು ಬೆಳೆದಿದೆ ಎಂಬುದು ವಾಸ್ತವ ಸಂಗತಿ.

ಹೀಗಾಗಿ ಪ್ರಸ್ತುತ ಜೈನ ಗದಗ ಪರಿಸರದ ಜೈನರು ತಮ್ಮ ಮೂಲ ವೃತ್ತಿಗೆ ಅನುಗುಣವಾಗಿ ಸಾಗುತ್ತಿದ್ದಾರೆ. ಆದರೂ ಅಲ್ಪಸಂಖ್ಯಾತರಾಗಿರುವ ಇವರು ಒಗ್ಗಟ್ಟಿನಿಂದ ಮುಂದುವರಿಯಬೇಕಾದ ಅನಿವಾರ್ಯತೆಯನ್ನು ಇಂದಿನ ಸಾಮಾಜಿಕ ಕ್ಷೇತ್ರದಲ್ಲಿ ತನ್ನಲ್ಲಿ ಅಡಗಿರುವ ಮೌಲ್ಯಗಳ ಪ್ರತಿಪಾದನೆಗೆ ಸವಾಲು ಹೊಡ್ಡಿದೆ. ವಿಜಯನಗರದ ಅರಸರು ಹಿಂದೂ ಧರ್ಮದೆಡೆಗೆ ತೋರಿಸಿದ ಒಲವು, ಜೈನ ವ್ಯಾಪಾರಿ ವರ್ಗಗಳು ವೀರಶೈವಕ್ಕೆ ಮತಾಂತರಗೊಂಡಿದ್ದು ಜೈನ ಧರ್ಮಕ್ಕೆ ಕಂಟಕಪ್ರಾಯವಾದವು. ಇದರ ಪರಿಣಾಮವಾಗಿ ಧಾರ್ಮಿಕ ಕಾರ್ಯಗಳಿಗೆ ಸಿಗುತ್ತಿದ್ದ ಆರ್ಥಿಕ ಸಹಾಯವು ನಿಂತು ಜೈನರ ಧಾರ್ಮಿಕ, ಸಾಮಾಜಿಕ ಚಟುವಟಿಕೆಗಳು ಕಳಾಹೀನವಾದವು. ಇದಲ್ಲದೆ ಇನ್ನೂ ಅನೇಕ ಆಂತರಿಕ ಕಾರಣಗಳಿಗಾಗಿಯೂ ಜೈನಧರ್ಮ ಇತರ ಧರ್ಮಗಳೊಂದಿಗಿನ ಸ್ಪರ್ಧೆಯಲ್ಲಿ ಹಿಂದೆ ಬೀಳಬೇಕಾಯಿತು. ಈ ಎಲ್ಲಾ ಏಳುಬೀಳುಗಳ ಮಧ್ಯೆಯೂ ಗದಗ ಪರಿಸರದಲ್ಲಿ ಜೈನ ಪರಂಪರೆಯು ಉನ್ನತವಾಗಿದ್ದು ರಾಜಕೀಯ, ಧಾರ್ಮಿಕ, ನೈತಿಕ, ಸಾಹಿತ್ಯಿಕ, ಸಾಮಾಜಿಕ, ಕ್ಷೇತ್ರಗಳಲ್ಲಿ ಬಹಳಷ್ಟು ಪರಿಣಾಮ ಬೀರಿದೆ ಎಂದರೆ ತಪ್ಪಾಗಲಾರದು. ಲಕ್ಕುಂಡಿ, ಲಕ್ಷ್ಮೇಶ್ವರ, ಮುಳಗುಂದ, ಗದಗ, ಸೊರಟೂರು, ಚಿಂಚಲಿ, ಹರ್ತಿ, ಬನ್ನಿಕೊಪ್ಪ, ರೋಣ, ಗಜೇಂದ್ರಗಡ, ಬೆಳ್ಳಟ್ಟಿ ಮುಂತಾದ ಸ್ಥಳಗಳು ಜೈನರ ಪ್ರಮುಖ ಶ್ರಮಣ, ಶ್ರಾವಕ ಕೇಂದ್ರಗಳಾಗಿದ್ದು ಶಿಕ್ಷಣ, ಧಾರ್ಮಿಕ, ಕೇಂದ್ರಗಳಾಗಿಯೂ ಪ್ರಾಚೀನ ಕಾಲದಿಂದ ಪ್ರಸ್ತುತ ಸಮಾಜಕ್ಕೆ ಅಪಾರವಾದ ಸೇವೆಯನ್ನು ಸಲ್ಲಿಸುತ್ತ ಬಂದಿವೆ. ಜೈನಾಚಾರ್ಯ ಅನೇಕರು ಜೀವನ, ಸಾಧನೆ, ಸಿದ್ಧಿಗಳು ಅಂದಿನ-ಇಂದಿನ ಸಮುದಾಯಕ್ಕೆ ಮಾರ್ಗದರ್ಶಕವಾಗಿದ್ದು ಅವರು ಉತ್ತಮ ಸಂಸ್ಕೃತಿಯ ತಳಿಗೆ ಕಾರಣರಾದವರು ಇಂತಹ ಭವ್ಯ ಪರಂಪರೆಯನ್ನು ಜೈನ ಸಂಸ್ಕೃತಿ ಒಳಗೊಂಡಿದ್ದು ಈ ಹಿನ್ನೆಲೆಯಲ್ಲಿ ಕರ್ನಾಟಕದ ಮತ್ತು ಜೈನಧರ್ಮದ ಸಂಬಂಧವನ್ನು ಕುರಿತು ಶಾಸನ ಕವಿಯೊಬ್ಬ ಬಣ್ಣಿಸಿದಂತೆ.

"ಜಿನಧರ್ಮೋರ್ವಾಸಮಾದತ್ತಮಳ ವಿನಯದಾಗಾರ ಮಾದತ್ತು ಪದ್ಮ
ಸನನಿರ್ಪಾ ಸದ್ಯಮಾದತ್ತತಿ ವಿಶದ ಯಶೋಧಮ ಮಾದುತ್ತಾ ವಿದ್ಯಾ
ಧನ ಜನ್ಮಸ್ಥಾನ ಮಾದತ್ತ ಸಮ ತೆರಳ ಗಂಭೀರ ಸದ್ಗೇಹಮಾದ
ತ್ತೆನಿಸಿಲ್ಕಿಂತುಳ್ಳ ನಾನುಮಹಿ ಮೆಯೊಳೆಸೆಗುಂ ಚಾರುಕರ್ನಾಟ ದೇಶಂ ॥"[೬]

ಇದು ಕೇವಲ ಕವಿ ಕಲ್ಪಿತವಲ್ಲ. ಅಂದಿನ ಕರ್ನಾಟಕದ ಜೈನ ಪರಂಪರೆಗೆ ಹಿಡಿದ ಕನ್ನಡಿ ಕರ್ನಾಟಕದಲ್ಲಿ ಜಿನಧರ್ಮ ಜನಧರ್ಮವಾಗಿ ಬೆಳಗಿದುದು ಹೀಗೆ.

೬. E.C. VIII (BLR)ಸೊರಬ - ೨೬೧-೧೪೦೮ರ ಶಾಸನ.

ಈ ರೀತಿಯಾಗಿ ಜೈನ ಧರ್ಮವು ತನ್ನದೇ ಆದ ತತ್ವಗಳಿಂದ ತನ್ನ ಸಮಾಜವನ್ನು ನಿರ್ಮಿಸಿ ಅದನ್ನು ಆಧುನಿಕ ಸಾಮಾಜಿಕ ವ್ಯವಸ್ಥೆಯಲ್ಲಿಯೂ ಬದ್ಧತೆಯಿಂದ ಈ ಧರ್ಮವು ಮುನ್ನಡೆಸಿಕೊಂಡು ಹೋಗುತ್ತಿರುವುದೇ ಸಾಧಾರಪಡಿಸುತ್ತದೆ. ಭೋಗಭೂಮಿಯನ್ನು ಕರ್ಮಭೂಮಿಯನ್ನಾಗಿ ಪರಿವರ್ತಿಸಿದ ವೃಷಭ, ಭೋಗಿಸಬೇಕಾದರೆ ದುಡಿಯಬೇಕೆಂಬ ಕಾರ್ಯದ ವಿಚಾರ ಪ್ರಣಾಳಿಕೆಯನ್ನು ಜಾರಿಗೆ ತಂದರು. ಸ್ವಾವಲಂಬನೆ ತಿಳಿಸಿದರೂ ಜಗತ್ತನ್ನು ಜಪದಿಂದ ಚೇತನದತ್ತ ಆಹಾರ ಸಂಚಯದಿಂದ ಉತ್ಪಾದನೆಯತ್ತ ಕೊಂಡೊಯ್ದು ಕೀರ್ತಿ ವೃಷಭನದು. ಕರ್ಮ ಪ್ರಾಧಾನ್ಯತೆ ಆರಂಭವಾದದ್ದು ವೃಷಭನಿಂದ ಅದರಲ್ಲಿ 'ಡಿವಿಜನ್ ಆಫ್ ಲೇಬರ್' ಮಾದರಿಯ ವೃತ್ತಿ ವ್ಯವಸ್ಥೆ ಸಂಪಾದಿಸಿದ ದ್ರವ್ಯದಲ್ಲಿ ತನಗೆ ಆಗಿ ಉಳಿಯುವುದನ್ನು ಇತರರಿಗೆ ಹಂಚಬೇಕೆಂದು ಅಸಂಗ್ರಹತತ್ವ ತಿಳಿಸುತ್ತದೆ. ಇದು ತ್ಯಾಗ ಗುಣಗಳನ್ನು ಪ್ರೇರೆಪಿಸುತ್ತದೆ. 'ದ್ರವ್ಯ ಅಸಮಾನ ಹಂಚಿಕೆ' ಇರಬಾರದೆಂಬ ಇಂದಿನ ಅರ್ಥಶಾಸ್ತ್ರಜ್ಞರ ವಿಚಾರ ಹೊಸದೇನಲ್ಲ ಅದು ವೃಷಭನಿಂದ ಅಂದಿನ ಸಮಾಜದಲ್ಲಿ ಆಗಲೇ ಜಾರಿಗೆ ಬಂದಿದೆ. 'ಅಂತ್ಯ ಜನವರೆಗೆ' ಎಂಬ ರಸ್ಕಿನ್-ಗಾಂಧಿ ವಿಚಾರಗಳಿಗೆ ಮೊದಲೇ ಜೈನ ಧರ್ಮ ತನ್ನ ಸಮಾಜದಲ್ಲಿ ಅಂಥ ವಿಚಾರಗಳನ್ನು ಜಾರಿಗೊಳಿಸಿತ್ತು. ಇಂತ ಅನೇಕ ಸಂದರ್ಭಗಳಲ್ಲಿ ಜೈನ ವಿಚಾರ ಸರಣಿಯ ಹಿಂದಿನ ವೈಜ್ಞಾನಿಕತೆ ವ್ಯವಹಾರಿಕತೆಯನ್ನು ನಾವು ಕಾಣಬಹುದು, ಕರ್ಮಸಿದ್ಧಾಂತ, ಅಪರಿಗ್ರಹದ ಸಿದ್ಧಾಂತಗಳಿಂದ ಜನತೆ, ಸಮಾಜ ದೇಶಗಳ ಆರ್ಥಿಕ ಸ್ಥಿತಿಗತಿ ಚೆನ್ನಾಗಿರುವುದಲ್ಲದೆ ಜನರಲ್ಲಿ ಅಸೂಯೆ ಅಸಮಾಧಾನಗಳಿಗೆ ಅವಕಾಸವಿಲ್ಲದಂತಾಗುತ್ತದೆ. ಆದ್ದರಿಂದ ಪ್ರಸ್ತುತ ಜೈನ ಸಮಾಜವು ಕರ್ಮಸಿದ್ಧಾಂತವನ್ನೇ ತನ್ನ ಮೂಲ ವೃತ್ತಿಯನ್ನಾಗಿ ಮಾಡಿಕೊಂಡು ಆಧುನಿಕ ಸಮಾಜದಲ್ಲಿ ತನ್ನ ಬದುಕನ್ನು ನಿರ್ಮಿಸಿಕೊಳ್ಳುವುದರಲ್ಲಿ ಮುನ್ನುಗ್ಗುತ್ತಿದ್ದಾರೆ. ಜೈನ ಧರ್ಮೀಯರು.[೭]

ಪ್ರತಿಯೊಂದು ಧರ್ಮ ತಾನು ಉಳಿಯಬೇಕು, ಬೆಳೆಯಬೇಕು ಎಂಬ ಹಂಬಲವನ್ನು ಹೊಂದಿರುವುದು ಸಹಜ. ಇದು ಗದಗ ಪರಿಸರದಲ್ಲಿ ಪ್ರಸ್ತುತ ಜೈನ ಧರ್ಮಿಯರು ಇನ್ನಷ್ಟು ಪ್ರಬಲವಾಗಿ ಬೆಳೆಯದೆ ಇರುವುದಕ್ಕೆ ಹಲವಾರು ಕಾರಣಗಳುಂಟು. ಈ ಭಾಗದಲ್ಲಿ ಶೈವ-ಲಿಂಗಾಯತ ಧರ್ಮಗಳ ಪ್ರಾಬಲ್ಯ ಹಾಗೂ ಜೈನ ಪರಿಸರದ ಸಂಘಟನಾ ಕೊರತೆಗಳು ಮುಖ್ಯ ಕಾರಣವಾಗಿವೆ. ಇಂಥ ಅವಸರ್ಪಿಣೀ ಕಾಲದಲ್ಲಿಯೂ ಧಾರ್ಮಿಕ ಆಚರಣೆ-ನಂಬಿಕೆ-ಸಂಪ್ರದಾಯ ಮತ್ತು ಸಾಂಸ್ಕೃತಿಕ ಚಟುವಟಿಕೆಗಳ ಮೂಲಕ ಗದಗ ಪರಿಸರದಲ್ಲಿ ಜೈನ ಧರ್ಮವು ತನ್ನ ಅಸ್ತಿತ್ವವನ್ನು ಬೆಳೆಸಿಕೊಂಡು ಬಂದಿರುವುದು ಸಾಹಸದ ಕೆಲಸವೆನ್ನಬಹುದು. ಪ್ರಾಚೀನ ಕಾಲದಿಂದಲೂ ಧರ್ಮ ಸಾಹಿತ್ಯ ಸಂಸ್ಕೃತಿಯನ್ನು ಸಂರಕ್ಷಿಸಿಕೊಂಡು ಬೆಳೆಸುತ್ತಾ ಬಂದಿದೆ. ಈ ಪರಿಸರ ಇದರಿಂದ ನಾಡಿನ ಜೈನ ಧರ್ಮಕ್ಕೆ ಹಾಗೂ ಸಾಹಿತ್ಯ, ಶೈಕ್ಷಣಿಕ ಕ್ಷೇತ್ರಗಳಿಗೆ ಈ ಭಾಗದ ಜೈನ ಧರ್ಮೀಯರ ಸೇವೆ ಅಪಾರವಾಗಿದೆ. ಈ

---

೭. ಲಿಂಗಾಯತ, ಜೈನ ಮತ್ತು ಬ್ರಾಹ್ಮಣ ಧರ್ಮಗಳು : ಮಠಗಳು ಒಂದು ತೌಲನಿಕ ಅಧ್ಯಯನ - ಹಿರೇಮಲ್ಲೂರ್ ಈಶ್ವರನ್

ಕ್ಷೇತ್ರದ ಜೈನ ಧಾರ್ಮಿಕ ಕೇಂದ್ರಗಳು ನಿರಂತರವಾಗಿ ಧಾರ್ಮಿಕ, ಸಾಹಿತ್ಯಿಕ ಸಾಂಸ್ಕೃತಿಕ ಪೋಷಣೆ ಬೆಳವಣಿಗೆಗೆ ನಿರಂತರ ಶ್ರಮಿಸುತ್ತಾ ಬಂದಿದ್ದಾರೆ. ಎಂಬುದು ವಿವಿಧ ಆಕರಗಳಿಂದ ತಿಳಿಯಬಹುದು. ಹಾಗೂ ಪ್ರಸ್ತುತ ಅಂಶಗಳನ್ನು ನನ್ನ ಕ್ಷೇತ್ರಅಧ್ಯಯನದ ಕಾಲದಲ್ಲಿ ಇಂದಿನ ಜೈನ ಸಮಾಜದ ಸ್ವರೂಪ, ಆಚಾರ-ವಿಚಾರ ಆಚರಣೆಗಳು ಹಾಗೂ ಸಮಾಜ ಸೇವೆಯ ಕಾರ್ಯಗಳನ್ನು ಕುರಿತು ತಿಳಿದುಕೊಳ್ಳುವಂತೆ ಆಯಿತು. ಹೀಗಾಗಿ ಈ ಕ್ಷೇತ್ರದಲ್ಲಿ ಜೈನ ಧರ್ಮವು ಸರ್ವತೋಮುಖ ಏಳಿಗೆಯನ್ನು ಕಾಣುತ್ತಾ ಮುನ್ನಡೆದಿದೆ.

ಜೈನ ಪರಂಪರೆಯು ಭಿನ್ನಭಿನ್ನ ಸಂಸ್ಕೃತಿಯನ್ನು ಪೋಷಿಸಿಕೊಂಡು ಬಂದ ಈ ಪರಿಸರದಲ್ಲಿ ಬೆಳೆದು ಬಂದುದರ ಪರಿಣಾಮವಾಗಿ ಅವು ಹಲವಾರು ವಿಶಿಷ್ಠ ಲಕ್ಷಣಗಳನ್ನು, ಪ್ರತ್ಯೇಕತೆಯನ್ನು ವ್ಯಕ್ತಪಡಿಸುತ್ತವೆ. ಗದಗ ಪರಿಸರದಲ್ಲಿ ಜೈನ ಧರ್ಮದ ಅಭಿವೃದ್ಧಿಗೆಂದು ಶ್ರಮಿಸಿದ ಪವಿತ್ರ ಜೀವಿಗಳೆಲ್ಲರೂ ಸಮಾಜದಿಂದ ಸಿಡಿದು ನಿಂತು ಏಕಾಂಗಿಯಾಗಿ ಬಾಳದೆ ಅದರ ಪರಿಸರದಿಂದ ಪ್ರೇರಣೆ, ಪೋಷಣೆಗಳನ್ನು ಪಡೆದರು. ಅವರು ಬೆಳೆಸಿಕೊಂಡುಬಂದ ಧಾರ್ಮಿಕ, ಸಾಹಿತ್ಯ ಅದರಲ್ಲಿ ವ್ಯಕ್ತವಾದ ನಂಬುಗೆ, ಮೌಲ್ಯಗಳು, ಶೀಲ, ನಡತೆಗಳು ಅವರ ಪರಿಸರದಲ್ಲಿ ನೆಲೆಗೊಂಡಿದ್ದ ಸಂಸ್ಕೃತಿಯ ಪ್ರಭಾವಕ್ಕೂ, ಪ್ರತಿಕ್ರಿಯೆಗೂ ಒಳಗಾಗಿದ್ದವು.

ಗದಗ ಪರಿಸರದ ಜೈನರ ಧಾರ್ಮಿಕ ಸಂಸ್ಕೃತಿಯು ಜನಪದ ಸಮಷ್ಟಿ ಸಮುದಾಯದ ದರ್ಪಣವಾಗಿದೆ. ಜೈನ ಸಮುದಾಯವು ಅನೇಕ ತತ್ವವಾದದ ಮೇಲೆ ರಚಿತವಾಗಿರುವ ಪ್ರಾಮಾಣಿಕ ವ್ಯವಸ್ಥೆಯೂ, ಸಾಮಾಜಿಕ ಸಮಗ್ರ ಘಟನೆಯೇ ಆಗಿದೆ. ಆದರೂ ನಿರ್ಧಿಷ್ಠವಾದ ಪ್ರದೇಶದ ಚೌಕಟ್ಟಿನಲ್ಲಿ ಅದು ಬೆಳೆದುಬಂದಿರುವುದರಿಂದ ಆ ಪ್ರದೇಶಗಳಲ್ಲಿ ಎದ್ದುತೋರುವ ಸಾಂಸ್ಕೃತಿಕ ಗುಂಪುಗಳು ಅದರೊಂದಿಗೆ ಸಡಿಲವಾಗಿ ಹೋಮದಿಕೊಂಡಿರುವುದರ ಪರಿಣಾಮವಾಗಿ ಅದು ಪರಸ್ಪರ ಸಹಕಾರ ಮತ್ತು ಸಹಜೀವನದ ಮನೋಭಾವನೆಯನ್ನು ವ್ಯಕ್ತಪಡಿಸುತ್ತದೆ. ನೂತನ ಮೌಲ್ಯಗಳಿಗೆ, ಅನ್ಯೋನ್ಯ ಹಾಗೂ ಅನುಪೂರಕ ಸಂಬಂಧಿಗಳಿಗೆ ವಿಶೇಷ ಪ್ರಶಸ್ತಿಯುಳ್ಳ ಸಾಂಸ್ಕೃತಿಕ ಪರಿಸರವನ್ನು ಗದಗ ಪರಿಸರದಲ್ಲಿ ಜೈನ ಪರಂಪರೆಯು ಬೆಳೆಸಿದೆ.

ಪ್ರತಿ ವರ್ಷವೂ ಜೂನ್ ಮಧ್ಯದಿಂದ ಸಪ್ಟೆಂಬರ್‌ವರೆಗಿನ ಅವಧಿಯನ್ನು ಚಾತುರ್ಮಾಸವೆಂದು ಸಾಂಪ್ರದಾಯಿಕವಾಗಿ ಕರೆಯಲಾಗುತ್ತದೆ. ಆದರೆ ವಾಸ್ತವಿಕವಾಗಿ ಜುಲೈ ೧೧ರಿಂದ ಆಗಸ್ಟ್ ೭ರವರೆಗಿನ ಅವಧಿಯನ್ನು ಅನುಕೂಲಕ್ಕಾಗಿ ಕಟ್ಟಾ ಚಾತುರ್ಮಾಸದ ಅವಧಿಯೆಂದು ಸಂಪ್ರದಾಯಿಗಳು ನಂಬುತ್ತಾರೆ. ಇದು ಮಳೆಗಾಲವಾದುದರಿಂದ ದಾರಿಯಲ್ಲಿ ಹುಳು, ಹುಪ್ಪಡಿ, ಕ್ರಿಮಿಗಳ ಸಂಚಾರವಿರುತ್ತದೆಯಾದುದರಿಂದ ತಮ್ಮ ಪ್ರವಾಸದಲ್ಲಿ ಅದು ಸಿಕ್ಕಿ ಸಾವು-ನೋವುಗಳಿಗೆ ಈಡಾಗಬಾರದೆಂಬ ಆಶಯವನ್ನು ಜೈನ ಮುನಿಗಳು ತಳೆದಿರುತ್ತಾರೆ.

ಸಮಾಜದ ಎಲ್ಲಾ ಸಂಬಂಧಗಳನ್ನು ಮುರಿದು ಏಕಾಂತ ವಾಸದಲ್ಲಿ ಕುಳಿತು ಜಿನಸೇವೆ, ಜಿನಧರ್ಮ ಪಾಲನೆ ಮಾಡುತ್ತ ನಿರ್ಮಾಣ ಪದವಿಯನ್ನು ಕುಡುಕಿಕೊಂಡು ಹೊರಟ ಜೈನ ಮುನಿಗಳ ಮುಖ್ಯ ಉದ್ದೇಶ ಮತ್ತು ಬದುಕಿನ ಶ್ರೇಷ್ಠ ಮೌಲ್ಯ ನಿರ್ವಾಣ ಸಾಧನೆ.

ಗದಗ (ಜಿಲ್ಲೆಯಲ್ಲಿ) ಪರಿಸರದಲ್ಲಿ ಜೈನ ಸಮಾಜದವರು ಇಂದು ಸಂಘ, ಸಂಸ್ಥೆಗಳನ್ನು ಕಟ್ಟಿಕೊಂಡು ಜೈನ ಸಮಾಜದ ಭೌತಿಕ ಹಾಗೂ ಪಾರಮಾರ್ಥಿಕ ಬೇಡಿಕೆಗಳನ್ನು, ಕೊರತೆಗಳನ್ನು ತುಂಬಿಕೊಡಲು ಯತ್ನಿಸುತ್ತಿವೆ. ಧರ್ಮಬೋಧನೆಯ ಜೊತೆಗೆ ಧಾರ್ಮಿಕ, ಉತ್ಸವ, ಮೂರ್ತಿಗಳ ಆರಾಧನೆ, ಭಕ್ತರ ಗೃಹ್ಯ ಸಂಸ್ಕಾರಗಳನ್ನು ಉಪಾಧ್ಯಾಯರ, ಮುನಿಗಳ ನೆರವಿನಿಂದ ನಡೆಸಿಕೊಡುವರು. ಜೈನ ಮಹಿಳೆಯರು ಸಹ ಜೈನ ವೀರ ಮಹಿಳೆಯಾದ ದಾನಚಿಂತಾಮಣಿ ಅತ್ತಿಮಬ್ಬೆಯ ಹೆಸರಿನಲ್ಲಿ ಮಹಿಳಾ ಸ್ವಸಹಾಯ ಸಂಘಗಳನ್ನು ಕಟ್ಟಿಕೊಂಡು ಮುನ್ನುಗ್ಗುತ್ತಿರುವುದನ್ನು ನಾನು ನರಗುಂದಕ್ಕೆ ಕ್ಷೇತ್ರ ಕಾರ್ಯದ ಸಂದರ್ಭದಲ್ಲಿ ಕಂಡೆನು. ಈ ಸಂಘಗಳಲ್ಲಿ ಕೇವಲ ಜೈನ ಧರ್ಮದ ಮಹಿಳೆಯರು ಸಹ ದಿಟ್ಟ ಹೆಜ್ಜೆ ಇಡುತ್ತಿದ್ದಾರೆ. ಇದು ಗದಗ ಪರಿಸರದ ನರಗುಂದ, ಮುಳಗುಂದ, ಗದಗ, ಲಕ್ಷ್ಮೇಶ್ವರ, ಬನ್ನಿಕೊಪ್ಪ, ಗಜೇಂದ್ರಗಡ ನಗರ ಪಟ್ಟಣ ಪ್ರದೇಶದಲ್ಲಿ ಈರೀತಿಯ ಬದಲಾವಣೆಗಳನ್ನು ನನ್ನ ಕಾರ್ಯಕ್ಷೇತ್ರದ ಅಧ್ಯಯನದ ಸಂದರ್ಭದಲ್ಲಿ ಅರಿವಿಗೆ ಬಂದಿತ್ತು.

ಲಕ್ಷ್ಮೇಶ್ವರದ ಅನಂತನಾಥ ಬಸದಿಯಲ್ಲಿ ಜೈನ ಕ್ಷುಲ್ಲಕ ಜಿನ ಮುನಿಗಳು ವರ್ತಮಾನದ ಜೈನ ಮಾಜದ ಕುರಿತು ನಗರಪ್ರದೇಶದಲ್ಲಿನ ಜೈನರೇ ಬಸದಿಗಳಿಗೆ ಬರುವದಿಲ್ಲ. ಜೈನ ಪರಂಪರೆಯ ಬಗ್ಗೆ ಕಾಳಜಿಯೇ ಇಲ್ಲ. ಉನ್ನತ ಹುದ್ದೆಯಲ್ಲಿದ್ದರೂ ಆಸೆಗೆ ಮಿತಿ ಇಲ್ಲಾ, ಎಲ್ಲ ವ್ಯವಹಾರಗಳು ಕೇವಲ ಯಾಂತ್ರಿಕವಾಗಿವೆ. ಲಾಭಕ್ಕಾಗಿ ಮಾತ್ರ ಹೊಂದಾಣಿಕೆ ಮಾಡಿಕೊಳ್ಳುವ ಮನೋಭಾವ ತಾಳಿದ್ದಾರೆ ಇಂದಿನ ಜೈನ ಧರ್ಮೀಯರು." ಎಂದರು. ವೃತ್ತಿಯಿಂದ ವ್ಯಾಪಾರವನ್ನು ಮುಖ್ಯ ಉದ್ಯೋಗ ಮಾಡಿಕೊಂಡಿರುವರು. ಇವರು ಮೂಲತಃ ಆರ್ಥಿಕವಾಗಿ ಪ್ರಬಲರಾಗಿದ್ದಾರೆ. ಆದರೆ ವ್ಯಾಪಾರದಲ್ಲಿ ತ್ರಾಸ, ಸಹಾಯ ಸಹಕಾರ ಗುಣಗಳು ಕಡಿಮೆಯಾಗಿವೆ ಎಂದರು. ಅವರು ತಮ್ಮ ಅಲೆದಾಟದಲ್ಲಿ ಆದ ಹಲವಾರು ಅನುಭವಗಳನ್ನು ಹಂಚಿಕೊಂಡು ಇನ್ನೂ ಬಹಳ ವರ್ಷ ಜೈನ ಧರ್ಮ ಬಾಳುವುದು ಕಷ್ಟ ಎಂಬ ಅಭಿಪ್ರಾಯವನ್ನು ವ್ಯಕ್ತಪಡಿಸಿದರು.

ಸಮಕಾಲೀನ ಜೈನ ಸಮಜದಲ್ಲಿ ಅದರಲ್ಲಿಯೂ ಗದಗ ಪರಿಸರದಲ್ಲಿರುವ ಜೈನ ಧರ್ಮೀಯರು ಉತ್ತರ ಭಾರತ, ಬಿಜಾಪುರ, ದಕ್ಷಿಣ ಕರಾವಳಿ ಪ್ರದೇಶಗಳಿಂದ ವಲಸೆ ಬಂದವರೇ ಎಂಬುದನ್ನು ಕ್ಷುಲ್ಲಕ ಮುನಿಗಳು ಸಂದರ್ಶನದ ವೇಳೆ ತಿಳಿಸಿದರು. ಇವರು ಸಂಚಾರಿ ಮುನಿಗಳು. ಇವರ ವಾಸ್ತವ್ಯ ಬಸದಿಯಲ್ಲಿ ಮಾತ್ರ.

ಉತ್ತರ ಭಾರತದಲ್ಲಿ ಜನಿಸಿದ ಜೈನ ಧರ್ಮದ ದಿಗಂಬರ ಶಾಖೆಗೆ ಕರ್ನಾಟಕವು ತವರುಮನೆಯಾಗಿದೆ. ಗದಗ ಪರಿಸರವು ಜೈನ ಧರ್ಮದ ಪ್ರಸಾರಕ್ಕೆ, ಮುನಿ ಪರಂಪರೆಯ ಹೆಚ್ಚಳಕ್ಕೆ ಸಂಜೀವಿನಿ ಶಕ್ತಿ ಪ್ರಾಪ್ತವಾದಂತಿದೆ.

ಗದಗ ಪರಿಸರದಲ್ಲಿನ ಜೈನ ಧರ್ಮೀಯರು ದಿಗಂಬರ ಶಾಖೆಯಲ್ಲಿ ವೀಸಪಂಥಿ, ತೇರಾಪಂಥಿ, ತಾರಣಪಂಥಿ, ಸಮಯಪಂಥಿಗಳು ೪ ಶಾಖೆಗಳಿವೆ. ವೀಸಪಂಥಿಗಳ ಭಟ್ಟಾರಕರನ್ನು ತಮ್ಮ ಧರ್ಮಗುರುಗಳೆಂದೂ, ತಮ್ಮ ಮಠದ ಆಚಾರ್ಯರೆಂದೂ ಕರೆಯುವರು. ಅವರು ದೇವಾಲಯದಲ್ಲಿನ ತೀರ್ಥಂಕರರ ವಿಗ್ರಹಗಳ ಜೊತೆಗೆ ಕ್ಷೇತ್ರಪಾಲ, ಭೈರವ ಮುಂತಾದ ವಿಗ್ರಹಗಳನ್ನಿರಿಸಿ ಕುಳಿತುಕೊಂಡೇ ಅವುಗಳನ್ನು ಪೂಜಿಸುತ್ತಾರೆ. ದೇವರಿಗೆ

ಆರತಿಯನ್ನು ಪೂಜೆ ಹೂ, ಹಣ್ಣು ಮತ್ತು ಸಿಹಿ ಪದಾರ್ಥಗಳನ್ನು ಅರ್ಪಿಸುವರು. ಗದಗ, ಲಕ್ಷ್ಮೇಶ್ವರ, ಗಜೇಂದ್ರಗಡ, ನರಗುಂದಗಳಲ್ಲಿ ವಾಸ.

ತೇರಾಪಂಥಿಗಳು ಭಟ್ಟಾರಕರ ಪಟ್ಟವನ್ನು ಮನ್ನಿಸುವುದಿಲ್ಲ. ಮೂರ್ತಿಪೂಜಕರಾದ ಇವರು ವೀಸ ಪಂಥಿಗಳಂತೆ ಕುಳಿತುಕೊಳ್ಳದೆ ಎದ್ದುನಿಂತು ಪೂಜೆ ಮಾಡುವರು. ತೀರ್ಥಂಕರರೊಬ್ಬರನ್ನುಳಿದು ಇತರ ವಿಗ್ರಹಗಳನ್ನು ತಮ್ಮ ದೇವಾಲಯದಲ್ಲಿ ಅವರು ಇಡುವುದಿಲ್ಲ. ವೀಸಪಂಥಿಗಳ ಹಾಗೆ ದೇವರ ಪೂಜೆಗೆ ಹೂ, ಹಣ್ಣುಗಳನ್ನು ಕೊಡದೆ ಅವುಗಳ ಬದಲಾಗಿ ಅಕ್ಷತೆ, ಲವಂಗ, ಧೂಪ, ತೆಂಗಿನಕಾಯಿ, ಬಾದಾಮಿ, ಖರ್ಜೂರಗಳನ್ನು ಕೊಡುವರು. ಆರತಿಯನ್ನು ಉಪಯೋಗಿಸುವುದಿಲ್ಲ. ಇವರು ನಗರವಾಸಿಗಳಾಗಿದ್ದಾರೆ. ಗದಗ ಪರಿಸರದ ಅನೇಕ ಗ್ರಾಮಗಳಲ್ಲಿಯೂ ಸಹ ಕಾಣಸಿಗುತ್ತಾರೆ.

ತೇರಾ ಪಂಥಿಗಳು ವಿಗ್ರಹ ಪೂಜೆ ಮಾಡದೆ ತಮ್ಮ ಧಾರ್ಮಿಕ ಗ್ರಂಥಗಳ ಪೂಜೆ ಮಾಡುವರು. ಪ್ರಸ್ತುತ ಈ ಪಂಥದವರು ಗದಗ ಪರಿಸರದಲ್ಲಿ ೩೦ ಮನೆಗಳಿವೆ. ಅಷ್ಟೇ ಅಲ್ಲ ಕರ್ನಾಟಕದಲ್ಲೇ ಈ ಪಂಥದವರು ನಗರ ಪ್ರದೇಶಗಳಲ್ಲಿ ಮಾತ್ರ ವಾಸವಾಗಿದ್ದಾರೆಂಬುದನ್ನು ಜೈನ ಮುನಿಗಳೊಬ್ಬರು ತಿಳಿಸಿದರು.

ಶ್ವೇತಾಂಬರದಲ್ಲಿ ಪೂಜೇರ, ಸ್ಥಾನಿಕವಾಸಿ, ತೇರಾಪಂಥಿಗರು ಎಂಬ ೩ ಶಾಖೆಗಳಿವೆ. ಪೂಜೇರ ಶಾಖೆಯ ಜೈನರು ಮಾತ್ರ ಮೂರ್ತಿ ಪೂಜಕರಾಗಿರುವರು. ಈ ಮೂರು ಪಂಥದವರು ಗದಗ ಪರಿಸರದಲ್ಲಿ ವಾಸವಾಗಿದ್ದು ಜೈನ ಪರಂಪರೆಯನ್ನು ಬೆಳೆಸಿಕೊಂಡು, ಉಳಿಸಿಕೊಂಡು ಹೋಗುತ್ತಿದ್ದಾರೆ.

ಗದಗನಲ್ಲಿರುವ ದಿಗಂಬರ ಸಂಗದ ಮೂಲಕ ಜೈನ ಪರಂಪರೆಯ ಆಚರಣೆಗಳನ್ನು, ಮುನಿಗಳನ್ನು ಕರೆಸಿಕೊಂಡು ಉಪದೇಶ ಮಾಡುವದು, ಜಯಂತಿಗಳನ್ನು ಆಚರಿಸುವುದು, ಜೈನ ಧರ್ಮೀಯರನ್ನು ಒಂದುಗೂಡಿಸುವುದು, ಸರ್ಕಾರದಿಂದ ಸಿಗುವ ಸೌಲಭ್ಯಗಳನ್ನು ಒದಗಿಸಿಕೊಡುವುದು, ಶಿಕ್ಷಣಾಲಯಗಳನ್ನು, ಸಮಾಜಸೇವಾ ಕೇಂದ್ರಗಳನ್ನು, ಗೋ ಸೇವಾ ಸಮಿತಿಗಳನ್ನು, ನೀರಿನ ಅರವಟಿಗೆಗಳನ್ನು ಸ್ಥಾಪಿಸುವುದು, ಅನ್ನಪ್ರಸಾದವನ್ನು ಮಾಡುವುದು, ಸರ್ಕಾರಿ ಖಾಸಗಿ ಸಂಸ್ಥೆಗಳಿಗೆ ಭೂಮಿದಾನ ಮಾಡುವದನ್ನು ಗದಗ ಪರಿಸರದ ಜೈನ ಧರ್ಮೀಯರಲ್ಲಿ ಕ್ಷೇತ್ರಕಾರ್ಯದ ವೇಳೆ ಕಂಡುಬಂದಿತು.

ರಾಜಕೀಯ ಮತ್ತು ಧಾರ್ಮಿಕ ಸಂಸ್ಕೃತಿಯ ಪೋಷಣೆಯನ್ನು, ಲೌಕಿಕ ಮತ್ತು ಧಾರ್ಮಿಕ ಶಕ್ತಿಗಳ ಅನ್ಯೋನ್ಯ ಸಹಕಾರ, ಸಾಮರ್ಥ್ಯಗಳನ್ನು ನೆರವಾಗಿದ್ದಿತು. ಜೈನರ ಧಾರ್ಮಿಕ ವ್ಯವಸ್ಥೆ ಕ್ರಿಯಾ ಮಟ್ಟದಲ್ಲಿ ಪ್ರಗಲ್ಭ ಘಟಕವಾಗಿ ಕಾಣಿಸಿಕೊಂಡಿದ್ದರೂ ಸಹನೆ, ಸಹಕಾರ ಮತ್ತು ಮಾರಕ ನಡತೆಗಳಿಗೆ ಪರಿಚಿತರಾಗಿರುವ ಜೈನೇತರರೊಂದಿಗೆ ಹೊಂದಿಕೊಂಡು ಧರ್ಮದ ಪ್ರಸಾರ ಕಾರ್ಯದಲ್ಲಿ ಮಾತ್ರವಲ್ಲ, ಸಾಮಾಜಿಕ ಸಹಕಾರ, ಶ್ರೇಣಿರಹಿತವಾದ ಬದುಕು ಮತ್ತು ಆಚಾರಾರ್ಥಕ ಪ್ರಾವಿಣ್ಯವನ್ನು ಹೆಚ್ಚಿಸುವುದಕ್ಕೆ ಕಾರಣರಾಗಿರುವರು. ಗದಗ ಪರಿಸರದ ಜೈನರು, ಪಂಡಿತರು, ಮುನಿಗಳು, ಮುಖಂಡರಾಗಿರುವವರು ಈ ಭಾಗದ ಇನ್ನಿತರ ಧಾರ್ಮಿಕ ಕೇಂದ್ರಗಳಿಗೆ ಸಂದರ್ಶಿಸಿ

ಸಹಕಾಯ, ಸಹಕಾರ ನೀಡಿ, ಪರಸ್ಪರ ಸಂಪರ್ಕ, ಸಹಕಾರಿ ಮನೋಭಾವ ಮತ್ತು ಕ್ರಿಯೆಗಳನ್ನು ಹೆಚ್ಚಿಸುವುದಲ್ಲದೆ ವಿಸ್ತೃತಮಟ್ಟದಲ್ಲಿ ಅನೇಕತ್ವ ವ್ಯವಸ್ಥೆಯು ನೆಲೆಗೊಳ್ಳುವುದಕ್ಕೆ ಕಾರಣರಾಗಿರುವರು. ಜೈನರು ಸ್ಥಾಪಿಸಿದ ಶಿಕ್ಷಣ ಸಂಸ್ಥೆಗಳಲ್ಲಿ ಎಲ್ಲಾ ಮತೀಯರಿಗೂ ಪ್ರವೇಶವನ್ನು ಕೊಟ್ಟಿರುವುದು ಅವರು ಬೆಳೆಸಿಕೊಂಡುಬಂದಿರುವ ಧಾರ್ಮಿಕ ಸಂಸ್ಕೃತಿಯ ವೈಶಿಷ್ಟ್ಯ. ಇತರರೊಂದಿಗೆ ಹೊಂದಿಕೊಂಡು ಬಾಳುವ ಮನೋಭಾವವನ್ನು ಸೂಚಿಸುತ್ತದೆ.

## ೭.೩. ಆಧುನಿಕ ಜೈನ ಸಮಾಜದ ಸಾಧನೆಗಳು[೮] :

ಜೈನ ಸಮಾಜವು ಅಹಿಂಸೆಯ ಮೂಲಕ ಕಾಯಕ ತತ್ವ, ಸ್ವಾವಲಂಬನೆ, ಸಹಕಾರ, ಸೇವಾಮನೋಭಾವನೆಯನ್ನು ಅಳವಡಿಸಿಕೊಂಡು ಇಡೀ ಸಮಾಜಕ್ಕೆ ಮಾದರಿಯಾಗಿದ್ದಾರೆ. ಗದಗ ಪರಿಸರದಲ್ಲಿ ಜೈನ ಪರಂಪರೆಯನ್ನು ಪ್ರಾಚೀನ ಕಾಲದಿಂದ ಇಂದಿನವರೆಗೂ ಬೆಳೆಸಿಕೊಂಡು ಬಂದಿರುವ ದಿಗಂಬರ ಪಂಥದವರು ಗ್ರಾಮಗಳಲ್ಲಿ ಆವರಿಸಿದ್ದಾರೆ. ಉತ್ತರ ಭಾರತದಿಂದ ವ್ಯಾಪಾರ ವೃತ್ತಿಯನ್ನು ಮಾಡುತ್ತ ಗದಗ ಪರಿಸರದಲ್ಲಿ ನೆಲೆ ನಿಂತಿರುವ ಶ್ವೇತಾಂಬರರು ಬಟ್ಟೆ ಅಂಗಡಿ, ಕಿರಾಣಿ ಅಂಗಡಿ, ಕೈಗಾರಿಕಾ ಉಪಕರಣಗಳ ಅಂಗಡಿ, ಕೃಷಿ ಉಪಕರಣಗಳ ಅಂಗಡಿ, ಆಹಾರಧಾನ್ಯದ ಅಂಗಡಿಗಳನ್ನು ತೆರೆದಿದ್ದಾರೆ. ಗದಗ ಜಿಲ್ಲೆಯ ಗದಗ, ಲಕ್ಷ್ಮೇಶ್ವರ, ಬೆಳ್ಳಟ್ಟಿ, ಮುಂಡರಗಿ, ನರಗುಂದ, ಗಜೇಂದ್ರಗಡ, ಶಿರಹಟ್ಟಿ ಪಟ್ಟಣಗಳಲ್ಲಿ ನೆಲೆ ನಿಂತು ಶ್ವೇತಾಂಬರ ಪಂಥದ ಜೈನ ಸಮಾಜದವರು ಗುಜರಾತ, ರಾಜಸ್ಥಾನ, ಮಹಾರಾಷ್ಟ್ರ ಮತ್ತು ಉತ್ತರಪ್ರದೇಶ, ಮಧ್ಯಪ್ರದೇಶ ರಾಜ್ಯಗಳಿಂದ ಬಂದವರಾಗಿದ್ದಾರೆ. ತಮ್ಮ ಧರ್ಮದ ತತ್ವಗಳನ್ನು ಪರಿಪಾಲಿಸಿಕೊಂಡು ಹೋಗಲು ಶ್ವೇತಾಂಬರ ಪಂಥದವರು ಜಿನಮಂದಿರಗಳನ್ನು ಸ್ಥಾಪಿಸಿದ್ದಾರೆ. ಗದಗ ಪರಿಸರದಲ್ಲಿ ಹತ್ತು ಜಿನ ಶ್ವೇತಾಂಬರ ಮಂದಿರಗಳನ್ನು ಕಾಣಬಹುದು. ಗದಗನಲ್ಲಿ ಐದು ಶಿಖರ ಮಂದಿರಗಳು, ಬೆಳ್ಳಟ್ಟಿ ಒಂದು ಘರಮಂದಿರ, ಲಕ್ಷ್ಮೇಶ್ವರ, ಮುಂಡರಗಿ, ನರಗುಂದ ಮತ್ತು ಶಿರಹಟ್ಟಿಗಳಲ್ಲಿ ಒಂದೊಂದು ಶಿಖರ ಮಂದಿರಗಳನ್ನು ನಿರ್ಮಿಸಿಕೊಂಡು ಜೈನ ಶ್ವೇತಾಂಬರ ಪರಂಪರೆಯನ್ನು ಈ ಪ್ರದೇಶಗಳಲ್ಲಿ ಹಬ್ಬಿಸಿದ್ದಾರೆ. ಅಷ್ಟೇ ಅಲ್ಲದೇ ಗುಜರಾತನಿಂದ ಬಂದ ಶ್ವೇತಾಂಬರ ಪಂಥದವರು ಕಚ್ಚಿ ದರವಾ ಓಸವಾಲ (ಸಿ.ಡಿ.ಓ.) ಹೆಸರಿನಲ್ಲಿ ೧೯೧೦ರಲ್ಲಿಯೇ ಜೈನ ಆಂಗ್ಲಮಾಧ್ಯಮ ಶಾಲೆಯನ್ನು ಸ್ಥಾಪಿಸಿ ಮುನ್ನಡೆಸಿಕೊಂಡುಬಂದಿದ್ದಾರೆ. ಈ ಶಾಲೆಯು ೨೦೦೫ರಲ್ಲಿಯೇ ಶತಮಾನೋತ್ಸವವನ್ನು ಆಚರಿಸಿಕೊಂಡಿದ್ದು, ರಾಜಸ್ಥಾನದಿಂದ ಆಗಮಿಸಿದ ಶ್ವೇತಾಂಬರಿಗಳು ಸಹ ಗದಗನಲ್ಲಿ ಒಂದು ಶಿಕ್ಷಣ ಸಂಸ್ಥೆಯನ್ನು ಕಟ್ಟಿದ್ದಾರೆ. ಶ್ರೀ ಮಹಾವೀರ ಶಿಕ್ಷಣ ಸಂಸ್ಥೆಯ ಶ್ರೀ ಪಾರ್ಶ್ವನಾಥ ಆಂಗ್ಲಮಾಧ್ಯಮ ಶಾಲೆಯನ್ನು ೨೦೦೫ರಲ್ಲಿ ಸ್ಥಾಪಿಸಿದ್ದಾರೆ. ಇವು ಗದಗ ಪರಿಸರದ ಜೈನ ಸಮಾಜದ ಶೈಕ್ಷಣಿಕ ಸಾಧನೆಗಳಾದರೆ ಸಮಾಜಕಾರ್ಯಗಳೂ ಬಹಳಷ್ಟು ಇವೆ. ನೀರಿನ ಅರವಟಿಗೆಗಳ ನಿರ್ಮಾಣ, ಗೋಶಾಲೆಯ ನಿರ್ವಹಣೆ, ಜೈನ ಸಂಸ್ಕೃತಿಯ ಆಚರಣೆಗಳನ್ನು ಆಚರಿಸಿಕೊಂಡು

---

೮. ಕ್ಷೇತ್ರಕಾರ್ಯದ ಅವಧಿಯಲ್ಲಿ ಮಾಹಿತಿದಾರರು ನೀಡಿದ ವಿವರಣೆಗಳ ಮೇಲೆ ವಿವರಿಸಲಾಗಿದೆ.

ಬಂದಿದ್ದಾರೆ. ಮುಳಗುಂದದ ಶ್ರೀ ಆರ್.ಎನ್. ದೇಶಪಾಂಡೆಯವರು ಸಮಾಜಸೇವಾ ಕಾರ್ಯದಲ್ಲಿ ತಮ್ಮನ್ನು ತಾವು ತೊಡಗಿಸಿಕೊಂಡು ನಿಸ್ವಾರ್ಥ ಸೇವೆಯನ್ನು ಮಾಡಿಕೊಂಡು ಹೋಗುತ್ತಿರುವುದರ ಸಂಕೇತ. ಇವರು ಸರಕಾರಿ ಪ್ರಥಮ ದರ್ಜೆ ಕಾಲೇಜಿಗೆ ಐದು ಎಕರೆ ಭೂಮಿ ದಾನ ಮಾಡಿದ್ದಾರೆ. ಅದರ ಪರಿಣಾಮವಾಗಿ ಕಾಲೇಜಿನ ಭವ್ಯವಾದ ಕಟ್ಟಡ ನಿರ್ಮಾಣವಾಗಿ ಈ ಭಾಗದ ಬಡವಿದ್ಯಾರ್ಥಿಗಳಿಗೆ ಉನ್ನತ ಶಿಕ್ಷಣ ಪಡೆದುಕೊಳ್ಳಲು ಸಹಕಾರಿಯಾಗಿದೆ. ಪ್ರಾಚೀನ ಪರಂಪರೆಯನ್ನು ಆಧುನಿಕತೆಯ ಈ ಒತ್ತಡದ ಬದುಕಿನಲ್ಲಿ ತಮ್ಮ ಕಠಿಣವಾದ ಜೈನ ತತ್ವಗಳನ್ನು ಅನುಸರಿಸಿಕೊಂಡು ಉತ್ತಮವಾದ ಜೀವನವನ್ನು ಸಾಗಿಸಿಕೊಂಡು ಹೋಗುತ್ತಿದ್ದಾರೆ ಜೈನ ಸಮಾಜದವರು. ಇನ್ನುಳಿದ ಜೈನೇತರ ಸಮಾಜಗಳಿಗೆ ಮಾದರಿಯಾಗಿದ್ದಾರೆ.

**೭.೩.೧. ಧಾರ್ಮಿಕ ಸಾಧನೆಗಳು :**

**೧. ಕಚ್ಚಿ ದರವಾ ಓಸವಾಲ (ಸಿ.ಡಿ.ಓ.) ಶ್ರೀ ಪಾರ್ಶ್ವನಾಥ ಶ್ವೇತಾಂಬರ ಜಿನಮಂದಿರ ಪಂಚಕಮಿಟಿ ಗದಗ:**

ಗುಜರಾತಿನಿಂದ ವಲಸಿಗರಾಗಿ ಬಂದು ಗದಗ ಪಟ್ಟಣದಲ್ಲಿ ಸುಮಾರು ೧೯ನೇ ಶತಮಾನದ ಮಧ್ಯಭಾಗದಲ್ಲಿ ಆಗಮಿಸಿದ ಇಲ್ಲಿಯೇ ನೆಲೆ ಕಂಡುಕೊಂಡಿರುವ ಗುಜರಾತಿ ಮೂಲದ ಶ್ವೇತಾಂಬರ ಪಂಥದವರು ಮುಖ್ಯವಾಗಿ ವ್ಯಾಪಾರ ಇವರ ಮೂಲ ಉದ್ಯೋಗ. ತಕ್ಕಮಟ್ಟಿನ ಶಿಕ್ಷಣ ಪಡೆದವರಾದ ಇವರು, ಗದಗ ಪಟ್ಟಣದಲ್ಲಿ ಪಂಚಕಮಿಟಿಯನ್ನು ಸ್ಥಾಪಿಸಿಕೊಂಡು ಈ ಪರಿಸರದಲ್ಲಿ ಶೈಕ್ಷಣಿಕ, ಧಾರ್ಮಿಕ, ಸಾಮಾಜಿಕ ಕಾರ್ಯಗಳನ್ನು ಮಾಡಿಕೊಂಡು ಸಾಗುತ್ತಿದ್ದಾರೆ. ಆರ್ಥಿಕವಾಗಿ ಪ್ರಬಲರಾಗಿರುವ ಇವರು ಸ್ವಾವಲಂಬನೆ, ನಿಷ್ಠೆ, ಪರಿಶ್ರಮ, ಶ್ರದ್ಧೆ ಮತ್ತು ಧಾರ್ಮಿಕ ನಂಬಿಕೆಗಳ ಮೇಲೆ ಅಪಾರ ಗೌರವವನ್ನಿಟ್ಟಿದ್ದಾರೆ. ಗದಗನಲ್ಲಿರುವ ಜೈನ ಸಮಾಜಕ್ಕೆ ಸಹಾಯಧನ ನೀಡುವ ತಮ್ಮ ಆರಾಧ್ಯದೈವ ಕಚ್ಚಿ ದರವಾ ಓಸವಾಲ ಹೆಸರಿನಲ್ಲಿ ಅನೇಕ ಧಾರ್ಮಿಕ ಕೇಂದ್ರಗಳನ್ನು, ವ್ಯಾಪಾರ ಮಳಿಗೆಗಳನ್ನು ಸ್ಥಾಪಿಸಿಕೊಂಡು ಜೀವನ ಸಾಗಿಸಿಕೊಂಡು ಹೋಗುತ್ತಿದ್ದಾರೆ. ಶ್ರೀ ಪಾಶ್ವರನಾಥ ಶ್ವೇತಾಂಬರ ಜಿನ ಮಂದಿರವು ಭವ್ಯವಾಗಿದ್ದು ಸುಂದರವಾದ ಸಂಗಮರಿ ಕಲ್ಲಿನಿಂದ ನಿರ್ಮಾಣಗೊಂಡಿದೆ. ಪೂರ್ವಕ್ಕೆ ಮುಖ ಮಾಡಿದ ಮೂರ್ತಿಗಳ ಪ್ರತಿಷ್ಠಾಪನೆ ಮಾಡಿದ್ದಾರೆ. ಈ ಜಿನ ಮಂದಿರದ ಆಡಳಿತವನ್ನು ಗುಜರಾತಿ ಶ್ವೇತಾಂಬರಿಗಳ ಪಂಚಕಮಿಟಿಯು ನಿರ್ವಹಿಸಿಕೊಂಡುಹೋಗುತ್ತಿದೆ.

**೨. ಶ್ರೀ ಪಾರ್ಶ್ವನಾಥ ಶ್ವೇತಾಂಬರ ಜಿನಮಂದಿರ ಗದಗ :**

ಶ್ರೀ ರಾಜಸ್ಥಾನಿ ಶ್ವೇತಾಂಬರ ಸಂಘ ಗದಗ ಇವರು ಗದಗ ಪಟ್ಟಣದಲ್ಲಿ ತಮ್ಮ ಧಾರ್ಮಿಕ ಪೂಜೆ-ಪುನಸ್ಕಾರಗಳನ್ನು ನಿರ್ವಹಿಸಲು ಕಟ್ಟಿಕೊಂಡಿರುವ ಜಿನಮಂದಿರವಿದು. ಈ ಜಿನಮಂದಿರವು ರಾಜಸ್ಥಾನಿ ಶೈಲಿಯಲ್ಲಿ ನಿರ್ಮಾಣಗೊಂಡಿದ್ದು, ಶ್ರೀ ಪಾರ್ಶ್ವನಾಥ, ಶ್ರೀ ಮಹಾವೀರ, ಶ್ರೀ ಮುನಿಸತ್ವ ಮೂರ್ತಿಗಳನ್ನು ಮೇಲಂತಸ್ತಿನ

ಪಾದಪೀಠದಲ್ಲಿ ಸ್ಥಾಪಿಸಿ, ಕೆಳಅಂತಸ್ತಿನ ಪಾದಪೀಠದಲ್ಲಿ ತಮ್ಮ ಆಧುನಿಕ ಜೈನಮುನಿಗಳ ಮೂರ್ತಿಗಳನ್ನು ಪ್ರತಿಷ್ಠಾಪನೆ ಮಾಡಿದ್ದಾರೆ. ಜಿನಮಂದಿರದ ಪಕ್ಕದಲ್ಲಿ ಪ್ರಾರ್ಥನಾ ಮಂದಿರ, ವಿವಾಹ ಭವನ ಹಾಗೂ ಸಭೆ–ಸಮಾರಂಭಕ್ಕೆ ಅನುಕೂಲವಾಗುವ ಭವ್ಯ ಕಟ್ಟಡಗಳನ್ನು ನಿರ್ಮಿಸಿಕೊಂಡಿದ್ದಾರೆ. ಜೈನ ಸಮಾಜದವರು ಸೊರಟೂರಿನ ಶ್ರೀ ಶಾಂತಿನಾಥ ಜೈನ ದಿಗಂಬರ ಬಸದಿ ನಿರ್ಮಾಣಕ್ಕೆ ೫೦ ಸಾವಿರ ರೂಪಾಯಿಗಳ ಸಹಾಯಧನ ನೀಡಿದ್ದಾರೆ. ಹಾಗೂ ಈ ಕಮಿಟಿಯವರ ಮುಖ್ಯಸ್ಥದಲ್ಲೇ ಗೋಶಾಲೆ ಸಮಿತಿ ನಿರ್ವಹಣೆ, ಶ್ರೀ ಮಹಾವೀರ ಶಿಕ್ಷಣ ಸಂಸ್ಥೆ ನಿರ್ವಹಣೆಯನ್ನು ಮಾಡಿಕೊಂಡು ಸಾಗುತ್ತಿದ್ದಾರೆ. ಕೇವಲ ವ್ಯಾಪಾರವನ್ನೇ ಮಾಡದೇ ಶೈಕ್ಷಣಿಕ, ಸಾಮಾಜಿಕ, ಆರ್ಥಿಕ ಮತ್ತು ಧಾರ್ಮಿಕ ಕಾರ್ಯಗಳಲ್ಲಿ ನಿಸ್ವಾರ್ಥ ಮನೋಭಾವದಿಂದ ಗದಗ ಪರಿಸರದಲ್ಲಿ ಜೈನ ಪರಂಪರೆಯನ್ನು ಬೆಳೆಸಿಕೊಂಡುಹೋಗುತ್ತಿದ್ದಾರೆ.

### ೩. ಶ್ರೀ ವರ್ಧಮಾನ ಸ್ಥಾನಿಕ ವಾಸಿಗಳ ಶ್ರಾವಕ ಸಂಘ ಗದಗ :

ಜೈನ ಸಮಾಜದವರು ಜೈನ ಶ್ರಾವಕರಿಗೆ ನಿರ್ಮಿಸಿರುವ ವಸತಿ ಕೇಂದ್ರವಿದು. ಗದಗ ಪಟ್ಟಣದಲ್ಲಿ ೪೦ ಮನೆಗಳಿರುವ ಶ್ವೇತಾಂಬರ ಸ್ಥಾನಿಕ ವಾಸಿಗಳ ಶ್ರಾವಕರಿಗೆ ಊಟ–ವಸತಿಯನ್ನು ಒದಗಿಸುವುದರೊಂದಿಗೆ ಜೈನ ಪಾರಂಪರಿಕ ಕೇಂದ್ರಗಳಿಗೆ ಭೇಟಿ ನೀಡುವ ಜೈನ ಮುನಿಗಳಿಗೆ ಶ್ರಾವಕರಿಗೆ ವಸತಿ ವ್ಯವಸ್ಥೆಯನ್ನು ಈ ಕೇಂದ್ರ ಮಾಡುತ್ತಿದೆ. ಸಧ್ಯ ಈ ಸ್ಥಾನಿಕ ವಾಸಿಗಳ ಅಧ್ಯಕ್ಷರಾಗಿರುವವರು ಶ್ರೀ ಬಾಬುಲಾಲಜಿ ಲೂಖಡ್ ಅವರು ಗದಗ ಪಟ್ಟಣದಲ್ಲಿ ನೆಲೆ ನಿಂತು ಸ್ಥಾನಿಕ ವಾಸಿಗಳ ಪೂಜಾ ವಿಧಾನಗಳನ್ನು ಈ ಕೇಂದ್ರದ ಮೂಲಕ ಮುನ್ನಡೆಸಿಕೊಂಡುಹೋಗುತ್ತಿದ್ದಾರೆ. ಭವ್ಯವಾಗಿ ನಿರ್ಮಾಗೊಂಡಿರುವ ಈ ಕಟ್ಟಡವು ಒಬ್ಬ ಹಿರಿಯ ಶ್ರಾವಕರು ಈ ಕೇಂದ್ರದ ದಿನನಿತ್ಯದ ಕಾರ್ಯವನ್ನು ನೋಡಿಕೊಂಡುಹೋಗುತ್ತಿದ್ದಾರೆ. ನಾನು ಈ ಕೇಂದ್ರಕ್ಕೆ ಭೇಟಿ ನೀಡಿದ ಸಂದರ್ಭದಲ್ಲಿ ಆ ಹಿರಿಯ ಜೈನ ಶ್ರಾವಕರು ಗದಗ ಪರಿಸರದ ಜೈನ ಸಮಾಜದ ಸೇವಾಕಾರ್ಯಗಳ ಬಗ್ಗೆ ವಿವರಿಸಿದರು.

### ೪. ಶ್ರೀ ಜೈನ ಶ್ವೇತಾಂಬರ ತೇರಾಪಂಥ ಸಭಾ ಪ್ರಾರ್ಥನಾ ಭವನ ಗದಗ :

ಶ್ವೇತಾಂಬರ ಪಂಥದ ಉಪಪಂಗಡವಾದ ತೇರಾಪಂಥದವರು ತಮ್ಮ ಪೂಜಾಕಾರ್ಯಗಳನ್ನು ಪಾಲಿಸಿಕೊಂಡುಹೋಗಲು ನಿರ್ಮಿಸಿಕೊಂಡಿರುವ ಪ್ರಾರ್ಥನಾ ಭವನವಿದು. ಒಂದು ಶಿಖರ ಜಿನಮಂದಿರ ಸ್ಥಾಪಿಸಿಕೊಂಡಿರುವ ಇವರು ತಮ್ಮ ಧರ್ಮದ ಗುರುಗಳನ್ನು ತೀರ್ಥಂಕರರನ್ನು ಪೂಜಿಸುವರು. ಸುಮಾರು ಇಪ್ಪತ್ತೈದರಿಂದ ಮೂವತ್ತು ಮನೆಗಳಿರುವ ತೇರಾಪಂಥದವರು ೧೯೭೮ರಲ್ಲೇ ಈ ಭವನವನ್ನು ನಿರ್ಮಿಸಿದ್ದಾರೆ. ಶ್ರೀ ಜಾವುಜಿಯವರು ಇದರ ನಿರ್ಮಾಪಕರು. ತೇರಾಪಂಥದವರು ಇಬ್ಬರು ಮಹಿಳೆಯರು ಸಾಧ್ವಿಗಳಾಗಿ ದೀಕ್ಷೆಯನ್ನು

ಪಡೆದುಕೊಂಡಿದ್ದಾರೆ. ೨೦೧೦ರಲ್ಲಿ ಕಾರ್ತಿಕ ಏಸಾಜಿ ಹಾಗೂ ೨೦೧೨ರಲ್ಲಿ ಹೇಮಪ್ರಭಾ ಅವರು ಆಚಾರ್ಯ ಶ್ರೀ ಮಹಾಶ್ರಮಣರ ಶಿಷ್ಯರಾಗಿ ಸಾಧ್ವಿಗಳಾಗಿ ದೀಕ್ಷೆಯನ್ನು ಪಡೆದಿದ್ದಾರೆ. ಸಧ್ಯ ಶ್ರೀ ಪ್ಯಾರೇಲಾಲ್ ಬೋರಾ ತೇರಾಪಂಥದ ಅಧ್ಯಕ್ಷರಾಗಿ ಕಾರ್ಯನಿರ್ವಹಿಸುತ್ತಿದ್ದಾರೆ. ನಾನು ಈ ಕೇಂದ್ರಕ್ಕೆ ಭೇಟಿ ಇತ್ತ ಸಂದರ್ಭದಲ್ಲಿ ಹಿರಿಯ ಶ್ರಾವಕರಾದ ಶ್ರೀ ಶಾಂತಿಲಾಲಜಿ ಹಾಗೂ ಶ್ರೀ ಸುರೇಶ ಕೋಠಾರಿಯವರು ತಮ್ಮ ಸಂಘದ ಸಾಧನೆಗಳನ್ನು ಕುರಿತು ವಿವರಿಸಿದರು.

**೫. ಶ್ರೀ ಪಾರ್ಶ್ವನಾಥ ಜೈನ ಶ್ವೇತಾಂಬರ ಮಂದಿರಮಾರ್ಗಿ ಜಿನ ಮಂದಿರ ಏವ್ ದಾದಾವಾಡಿ ಗುರುದೇವನಗರ, ಗದಗ:**

ಗದಗಿನ ಶ್ರೀ ಪಾರ್ಶ್ವನಾಥ ಕುಶಾಲಧಾಮ ಗುರುದೇವನಗರ ಗದಗಿನಲ್ಲಿ ೨೦೦೮ರಲ್ಲಿ ನಿರ್ಮಿಸಿರುವ ಈ ಜಿನಮಂದಿರವು ಸುಂದರವಾಗಿದೆ. ಮೇಲಂತಸ್ತಿನಲ್ಲಿ ಮಹಾವೀರ, ಪಾರ್ಶ್ವನಾಥ ಹಾಗೂ ತಮ್ಮ ಹಿಂದಿನ ಗುರುಗಳ ಮೂರ್ತಿ ಪ್ರತಿಷ್ಠಾಪಿಸಿದ್ದಾರೆ. ಕೆಳಅಂತಸ್ತಿನಲ್ಲಿ ತಮ್ಮ ಇಂದಿನ ಐದು ಗುರುಗಳ ಮೂರ್ತಿಗಳನ್ನು ಸ್ಥಾಪಿಸಿದ್ದಾರೆ. ಈ ಜಿನ ಮಂದಿರದ ಪೂಜಾಕಾರ್ಯವನ್ನು ಆಚರಿಸಿಕೊಂಡು ಹೋಗಲು ಒಬ್ಬ ಶ್ರಾವಕರಿದ್ದಾರೆ. ಇವರು ಜಿನಮಂದಿರದ ಎಲ್ಲ ಚಟುವಟಿಕೆಗಳನ್ನು ನೋಡಿಕೊಂಡು ಹೋಗುತ್ತಾರೆ. ಶ್ರೀ ಜಗನ್‌ಲಾಲ್ ಬಾಪಣಾ ಇದರ ಸ್ಥಾಪಕರು. ಸಧ್ಯ ಇವರ ಮಗ ಶ್ರೀ ವಿಶ್ರಾಮಜಿ ಬಾಪಣಾರವರು ಈ ಜಿನಮಂದಿರದ ಚಟುವಟಿಕೆಗಳನ್ನು ನಿರ್ವಹಿಸಿಕೊಂಡು ಹೋಗುತ್ತಿದ್ದಾರೆ. ಗದಗ ಪರಿಸರದಲ್ಲಿ ನೆಲೆ ನಿಂತು ತಮ್ಮ ಧಾರ್ಮಿಕ ವ್ಯಾಪಾರ ಮನೋಭಾವದಿಂದ ಬದುಕನ್ನು ಸಾಗಿಸಿಕೊಂಡು ಹೋಗುತ್ತಿರುವ ಶ್ವೇತಾಂಬರರು, ಸ್ಥಾನಿಕ ವಾಸಿಗಳು, ಮಂದಿರಮಾರ್ಗಿಗಳು ಈ ಪ್ರದೇಶದಲ್ಲಿ ಅಲ್ಪಸಂಖ್ಯಾಕರಾಗಿದ್ದರೂ ತಮ್ಮ ಧರ್ಮದ ಆಚಾರ–ಆಚರಣೆಗಳನ್ನು ಕಟ್ಟುನಿಟ್ಟಾಗಿ ಆಚರಿಸಿಕೊಂಡು ಸಾಗುತ್ತಿದ್ದಾರೆ. ಗದಗ ಪರಿಸರದಲ್ಲಿ ಜೈನ ಸಂಸ್ಕೃತಿಯ ಬೆಳವಣಿಗೆಗೆ ಶ್ವೇತಾಂಬರ ಪಂಥದವರ ಕೊಡುಗೆ ಅಪಾರ.

ಗದಗ ಜಿಲ್ಲೆಯ ಇನ್ನುಳಿದ ಪಟ್ಟಣಗಳಾದ ಲಕ್ಷ್ಮೇಶ್ವರ, ಬೆಳ್ಳಟ್ಟಿ, ನರಗುಂದ, ಮುಂಡರಗಿ ಮತ್ತು ಶಿರಹಟ್ಟಿಗಳಲ್ಲಿ ಘರಮಂದಿರ, ಶಿಖರಮಂದಿರಗಳನ್ನು ನಿರ್ಮಿಸಿಕೊಂಡು ಯಾವುದೇ ರೀತಿಯ ಸರ್ಕಾರದ ಸಹಾಯವಿಲ್ಲದೆಯೇ ಸ್ವಾವಲಂಬನೆಯಿಂದ ತಮ್ಮ ಧಾರ್ಮಿಕ ವಿಧಿ–ವಿಧಾನಗಳನ್ನು ಈ ಕೇಂದ್ರಗಳ ಮೂಲಕ ಆಚರಿಸಿಕೊಂಡು ಸಾಗುತ್ತಿದ್ದಾರೆ. ಶ್ವೇತಾಂಬರ ಪಂಥದವರು ಮತ್ತು ದಿಗಂಬರ ಪಂಥದವರು ಗದಗ ಪರಿಸರದಲ್ಲಿ ಜೈನ ಪಾರಂಪರಿಕ ಕೇಂದ್ರಗಳನ್ನು ನಿರ್ಮಿಸಿ, ಶಿಕ್ಷಣ ಸಂಸ್ಥೆಗಳನ್ನು ಸ್ಥಾಪಿಸಿ, ಸಾಮಾಜಿಕ ಚಟುವಟಿಕೆಗಳಲ್ಲಿ ತಮ್ಮನ್ನು ತಾವು ತೊಡಗಿಸಿಕೊಂಡು ಸಾಗುತ್ತಿರುವದು ಕಂಡುಬರುತ್ತದೆ. ಜೈನ ದಿಗಂಬರ ಪಂಥದವರು ಸೊರಟೂರು, ಮಲ್ಲಸಮುದ್ರ, ಬನ್ನಿಕೊಪ್ಪ, ಕಳಸಾಪುರದಲ್ಲಿ ಜೈನ ಬಸದಿಗಳನ್ನು ನಿರ್ಮಿಸಿದ್ದಾರೆ.

**೬. ತ್ರಿಮೂರ್ತಿ ಜಿನಮಂದಿರ ಮಲ್ಲಸಮುದ್ರ :**

ಪ್ರಾಚೀನ ಕಾಲದಲ್ಲಿ ಬಳ್ಳಗೇರಿ ಎಂಬ ಹೆಸರು ಹೊಂದಿದ್ದ ಈಗಿನ ಮಲ್ಲಸಮುದ್ರವು ಗದಗಿನ ದಕ್ಷಿಣಕ್ಕೆ ಇದೆ. ಇಲ್ಲಿ ಜೈನ ದಿಗಂಬರ ಸಂಘದ ಶ್ರೀ ಪಾರ್ಶ್ವನಾಥ ಬಸದಿ ಇತ್ತು ಎಂಬುದು ಶಾಸನಗಳಲ್ಲಿ ಕಂಡುಬಂದಿದೆ.

ಆದರೆ ಇಂದು ಯಾವುದೇ ರೀತಿಯ ಕುರುಹು ಅಲ್ಲಿಲ್ಲ. ಶ್ರೀ ಕಲ್ಲನಗೌಡ ಪಾಟೀಲರು ತಮ್ಮ ಸ್ವಂತ ಸ್ಥಳದಲ್ಲಿ ಸ್ವಂತ ಖರ್ಚಿನಲ್ಲಿ ಇಲ್ಲಿ ತ್ರಿಮೂರ್ತಿ ಜಿನಮಂದಿರವನ್ನು ಪೂರ್ವಾಭಿಮುಖವಾಗಿ ೨೦೧೨ರಲ್ಲಿ ನಿರ್ಮಿಸಿದ್ದಾರೆ. ಪಾದಪೀಠದಲ್ಲಿ ಮಹಾವೀರ, ಪಾರ್ಶ್ವನಾಥ, ಸುಪಾರ್ಶ್ವನಾಥನ ಮೂರ್ತಿಗಳನ್ನು ಪ್ರತಿಷ್ಠಾಪಿಸಲಾಗಿದೆ. ಪಾಶ್ವನಾಥ ಮತ್ತು ಸುಪಾರ್ಶ್ವನಾಥನ ಮೂರ್ತಿಗಳು ಹಳೆಯ ಮೂರ್ತಿಗಳಾದರೆ, ಮಹಾವೀರನ ಮೂರ್ತಿಯು ಹೊಸದಾಗಿದೆ. ಮಲ್ಲಸಮುದ್ರದಲ್ಲಿ ಕೇವಲ ಐದು ದಿಗಂಬರ ಜೈನರ ಮನೆಗಳಿರುವ ಕಾರಣ ಸರಕಾರದ ಯಾವುದೇ ಸೌಲಭ್ಯ ಪಡೆಯದೇ ಸ್ವತಃ ತಾವೇ ತಮ್ಮ ಸ್ವಂತ ಹಣದಿಂದ ಬಸದಿ ನಿರ್ಮಾಣ ಮಾಡಿದ್ದಾರೆ. ಆದರೆ ಇಂದು ಅದರ ಪೂಜಾಕಾರ್ಯಗಳನ್ನು ನೆರವೇರಿಸಿಕೊಂಡುಹೋಗುವುದು ಆಗುತ್ತಿಲ್ಲ ಎಂಬ ಆತಂಕವನ್ನು ಶ್ರೀ ಕಲ್ಲನಗೌಡ ಪಾಟೀಲರು ವ್ಯಕ್ತಪಡಿಸಿದರು. ಇದೇ ಜಿನಮಂದಿರದ ಹಿಂದುಗಡೆ ಒಂದು ರೂಮಿನಲ್ಲಿರುವ ೧೧ನೇ ಶತಮಾನದ ಮಹಾವೀರನ ಮೂರ್ತಿ ಅಪರೂಪದ್ದಾಗಿದೆ. ಧ್ಯಾನದಲ್ಲಿ ಕುಳಿತಿರುವ ಮೂರ್ತಿಯ ಕೆಳಭಾಗದಲ್ಲಿ ಶಾಸನವಿದೆ. ಯಕ್ಷ-ಯಕ್ಷಿಣಿಯರ ಚಿತ್ರಗಳಿವೆ. ಪದ್ಮಾವತಿಯ ಚಿತ್ರವೂ ಇದೆ. ಕರ್ನಾಟಕದಲ್ಲಿ ಇಂತಹ ಮೂರ್ತಿ ಇರುವದು ಮಲ್ಲಸಮುದ್ರದಲ್ಲಿ ಮಾತ್ರ ಎಂದು ಶ್ರೀ ಕಲ್ಲನಗೌಡ ಪಾಟೀಲರು ತಿಳಿಸಿದರು. ಇದೇ ಊರಿನ ಶ್ರೀ ಮಾರುತಿ ದೇವಾಲಯದ ಮುಂದೆ ಪೂರ್ವಾಭಿಮುಖವಾಗಿ ನಿಲ್ಲಿಸಿರುವ ಒಂದು ಜೈನ ಶಾಸನವಿದೆ. ಈ ಶಾಸನದಲ್ಲಿ ತೀರ್ಥಂಕರರು ಧ್ಯಾನಮಗ್ನರಾಗಿ ಕುಳಿತಿರುವ ಚಿತ್ರವಿದೆ. ಈ ಪ್ರಾಚೀನ ಶಾಸನದಿಂದ ಇಲ್ಲಿ ಒಂದು ಬಸದಿ ಇತ್ತು ಎಂಬ ವಿಷಯ ತಿಳಿದುಬರುತ್ತದೆ. ಶ್ರೀ ಕಲ್ಲನಗೌಡ ಪಾಟೀಲರು ಹೇಳಿದಂತೆ "ಜಿನಮಂದಿರದ ಪೂಜಾ ಕಾರ್ಯ ಮಾಡಲು ಶ್ರಾವಕರೂ ಇಲ್ಲ, ಇದ್ದರೂ ಅವರ ಖರ್ಚು-ವೆಚ್ಚ ನೋಡಿಕೊಂಡು ಹೋಗುವುದು ಕಷ್ಟವಾಗುತ್ತಿದೆ. ನಮ್ಮ ನಂತರ ಇದನ್ನು ನಡೆಸಿಕೊಂಡು ಹೋಗುವುದು ಆಗುತ್ತದೋ ಇಲ್ಲವೋ" ಎಂದು ಕಳವಳ ವ್ಯಕ್ತಪಡಿಸಿದರು.

**೭. ಶಾಂತಿನಾಥ ಜೈನ ದಿಗಂಬರ ಮಂದಿರ ಸೊರಟೂರ :**

ಪ್ರಾಚೀನ ಕಾಲದಲ್ಲಿ ಯಾಪನಿಯ ಪಂಥದ ಪ್ರಮುಖ ನೆಲೆಯಾಗಿದ್ದ ಸೊರಟೂರಿನಲ್ಲಿ ಬಲದೇವ ಬಸದಿ ಇತ್ತು ಎಂಬುದನ್ನು ಕ್ರಿ.ಶ. ೧೦೭೧ರ ಕಲ್ಯಾಣ ಚಾಲುಕ್ಯರ ೨ನೇ ಸೋಮೇಶ್ವರನ ಶಾಸನವು ಉಲ್ಲೇಖಿಸುತ್ತದೆ. ಆದರೆ ಇಂದು ಈ ಬಸದಿಯ ಯಾವುದೇ ಕುರುಹುಗಳು ಇಲ್ಲಿ ಇಲ್ಲ. ಕಾರಣ ಅನ್ಯಮತೀಯರು ಈ ಪ್ರದೇಶವನ್ನು ಆಕ್ರಮಿಸಿಕೊಂಡು ಅಲ್ಲಿ ಈಶ್ವರ, ಮಾರುತಿ ದೇವಾಲಯಗಳನ್ನು ನಿರ್ಮಿಸಿದ್ದಾರೆ. ಶ್ರೀ ಶಾಂತಿನಾಥ ಜೈನ ದಿಗಂಬರ ಬಸದಿಯನ್ನು ೧೯೮೨ರಲ್ಲಿ ನಿರ್ಮಿಸಿದ್ದು ಸುಸ್ಥಿತಿಯಲ್ಲಿದೆ. ಈ ಪ್ರದೇಶದಲ್ಲಿ ೮೦ ಜೈನ ದಿಗಂಬರ ಮನೆಗಳು ಇದ್ದು, ಶ್ರೀ ಕೆ. ಎನ್. ಮಲ್ಲಾಡದವರು ಮುಖ್ಯಸ್ಥರಾಗಿದ್ದಾರೆ. ಈ ಜನಾಂಗದವರೆಲ್ಲ ಕೂಡಿ ಶ್ರೀ ಮಹಾವೀರ ಯುವಕ ಸಂಘ, ರೈತರ ಸಂಘ, ಮಹಿಳೆಯರ ಸ್ವಸಹಾಯ ಸಂಘಗಳನ್ನು ಸ್ಥಾಪಿಸಿಕೊಂಡಿದ್ದಾರೆ. ಈ ಜಿನಮಂದಿರ ನಿರ್ಮಾಣಕ್ಕೆ ಶ್ರೀ ರಾಜಸ್ಥಾನ ಜೈನ ಶ್ವೇತಾಂಬರ ಸಂಘ, ಶ್ರೀ ಪಾರ್ಶ್ವನಾಥ ಮಂದಿರ ಗದಗ ಇವರು ಐವತ್ತು

ಸಾವಿರ ರೂಪಾಯಿಗಳನ್ನು ಸಹಾಯಧನ ನೀಡಿದ್ದಾರೆ. ಸರಕಾರದ ಯಾವುದೇ ರೀತಿಯ ಸಹಾಯವನ್ನು ಇವರು ಪಡೆದಿಲ್ಲ. ಈ ಜಿನ ಮಂದಿರದ ಪೂಜಾ ಕಾರ್ಯವನ್ನು ಇಲ್ಲಿಯ ಶ್ರೀ ರಾಮಚಂದ್ರ ಬೆಂತೂರ ಅವರು ಶ್ರಾವಕರಾಗಿ ೩೫ ವರ್ಷಗಳಿಂದ ಮಾಡುತ್ತಾ ಬಂದಿದ್ದಾರೆ. ಯಾವುದೇ ಫಲಾಪೇಕ್ಷೆಗಳಿಲ್ಲದೆ ಜೈನ ಪರಂಪರೆಯನ್ನು ಉಳಿಸಿ ಬೆಳೆಸಿಕೊಂಡು ಹೋಗುವುದರಲ್ಲಿ ತಮ್ಮನ್ನು ತಾವು ತೊಡಗಿಸಿಕೊಂಡಿದ್ದಾರೆ. ಸರಕಾರದ ಯಾವುದೇ ಸೌಲಭ್ಯಗಳನ್ನು ಪಡೆಯದೇ ತಮ್ಮ ಸ್ವಂತ ಆದಾಯದಲ್ಲಿ ಈ ಧಾರ್ಮಿಕ ಪರಂಪರೆಯನ್ನು ಬೆಳೆಸಿಕೊಂಡು ಹೋಗುತ್ತಿರುವ ಈ ಜೈನ ಸಮಾಜದ ಕಡೆ ಸರಕಾರವು ಗಮನಹರಿಸಬೇಕು. ಅವರ ಪೂಜಾ ಕಾರ್ಯಕ್ಕೆ ಅನುಕೂಲವಾಗುವಂತೆ ವ್ಯವಸ್ಥೆ ಮಾಡಬೇಕು ಅಂದರೆ ಮಾತ್ರ ಈ ಪ್ರಾಚೀನ ಪರಂಪರೆ ಮುಂದಿನ ಪೀಳಿಗೆಗೆ ಉಳಿಯುವುದು ಸಾಧ್ಯ.

### ೮. ಶ್ರೀ ಪಾರ್ಶ್ವನಾಥ ತೀರ್ಥಂಕರ ಜೈನ ದಿಗಂಬರ ಬಸದಿ ಬನ್ನಿಕೊಪ್ಪ :

ಪ್ರಾಚೀನ ಪುಲಿಗೆರಿ ೩೦೦ರ ಆಡಳಿತಕ್ಕೆ ಒಳಪಟ್ಟಿದ್ದ ಈ ಪ್ರದೇಶ ಈಗ ಗದಗ ಜಿಲ್ಲೆಯ ಶಿರಹಟ್ಟಿ ತಾಲೂಕಿನ ಕಡೆಯ ಹಳ್ಳಿಯಾಗಿದೆ. ಇಲ್ಲಿ ಪ್ರಾಚೀನ ಶ್ರೀ ಪಾರ್ಶ್ವನಾಥ ಬಸದಿ ಇತ್ತು ಎಂಬ ಉಲ್ಲೇಖ ಶಾಸನದಲ್ಲಿದ್ದರು ಇಂದು ಇಲ್ಲಿ ಅದರ ಅಳಿದು ಉಳಿದ ಅವಶೇಷಗಳನ್ನು ಬಳಸಿಕೊಂಡು ಆಧುನಿಕವಾಗಿ ಶ್ರೀ ಪಾರ್ಶ್ವನಾಥ ತೀರ್ಥಂಕರರ ಬಸದಿಯನ್ನು ೧೯೭೬ರಲ್ಲಿ ನಿರ್ಮಿಸಿದ್ದಾರೆ. ಈ ಊರಿನಲ್ಲಿ ೩೦೦ ಜೈನ ದಿಗಂಬರ ಮನೆಗಳಿವೆ. ಇವರ ಮೂಲ ಉದ್ಯೋಗ ಕೃಷಿ. ಆರ್ಥಿಕವಾಗಿ ಬಲಹೀನವಾಗಿರುವ ಈ ಪಂಥದವರ ಏಳ್ಗೆಯ ಬಗ್ಗೆ ಚಿಂತಿಸಬೇಕಾದ ಅವಶ್ಯಕತೆ ಇದೆ. ಜಿನಮಂದಿರದ ಪೀಠದಲ್ಲಿ ಪಾರ್ಶ್ವನಾಥನ ಆಧುನಿಕ ಮೂರ್ತಿಯನ್ನು ಪ್ರತಿಷ್ಠಾಪಿಸಲಾಗಿದೆ. ಪ್ರಾಚೀನ ಮೂರ್ತಿಯನ್ನು ಗರ್ಭಗುಡಿಯ ಮೇಲಿರುವ ಶಿಖರದ ಒಂದು ಗೂಡಿನಲ್ಲಿ ಇಡಲಾಗಿದೆ. ಸಧ್ಯ ಶಾಸಕರ ಅನುದಾನದಲ್ಲಿ ಸಮುದಾಯ ಭವನ ನಿರ್ಮಾಣ ಕಾರ್ಯವು ನಾನು ಸಂದರ್ಶನ ಮಾಡಿದ ಸಮಯದಲ್ಲಿ ಭರದಿಂದ ಸಾಗುತ್ತಿತ್ತು. ಇಲ್ಲಿನ ಶ್ರೀ ಅಜೀತ ಡಿ. ಪಿಡ್ಡಿಯವರು ಉತ್ತರ ಭಾರತದಲ್ಲಿರುವ ತೀರ್ಥಂಕರರ ಸಮಾಜ ಸ್ಥಳಗಳ ದರ್ಶನವನ್ನು ಪಡೆದುಕೊಂಡು ಬಂದಿದ್ದರ ಬಗ್ಗೆ ತಿಳಿಸಿದರು. ಸಧ್ಯ ಶ್ರೀ ಫಕ್ಕೀರಪ್ಪ ಅಂಶಿಯವರು ಈ ಸಂಘದ ಅಧ್ಯಕ್ಷರಾಗಿ ಕಾರ್ಯನಿರ್ವಹಿಸುತ್ತಿದ್ದಾರೆ.

### ೯. ಶಾಂತಿನಾಥ ಜೈನ ದಿಗಂಬರ ಬಸದಿ ಕಳಸಾಪೂರ :

ಗದಗದಿಂದ ದಕ್ಷಿಣಕ್ಕಿರುವ ಕಳಸಾಪೂರದಲ್ಲಿ ಪ್ರಾಚೀನ ಶಾಂತಿನಾಥನ ಮೂರ್ತಿಯನ್ನು ಪ್ರತಿಷ್ಠಾಪಿಸಿ ಆಧುನಿಕ ಬಸದಿಯನ್ನು ನಿರ್ಮಿಸಿದ್ದಾರೆ. ೨೦೧೪ರಲ್ಲಿ ಇದರ ನಿರ್ಮಾಣವಾಗಿದ್ದು ಸುಂದರವಾದ ಕಲ್ಲನ್ನು ಕಟ್ಟಡಕ್ಕೆ ಅಳವಡಿಸಲಾಗಿದೆ.

### ೭.೩.೨. ಶೈಕ್ಷಣಿಕ ಸಾಧನೆಗಳು :

ಆರ್ಥಿಕವಾಗಿ ಪ್ರಬಲವಾಗಿರುವ ವ್ಯಾಪಾರವನ್ನೇ ಮೂಲ ಉದ್ಯೋಗವನ್ನಾಗಿ ಮಾಡಿಕೊಂಡು ಉತ್ತರ ಭಾರತದಿಂದ ಆಗಮಿಸಿ ಗದಗ ಪರಿಸರದ ಬೇರೆ ಬೇರೆ ಸ್ಥಳಗಳಲ್ಲಿ ನೆಲೆಕಂಡುಕೊಂಡಿರುವ ಶ್ವೇತಾಂಬರ ಪಂಥದವರು ಗದುಗಿನಲ್ಲಿ ೨ ಶಿಕ್ಷಣ ಸಂಸ್ಥೆಗಳನ್ನು ಸ್ಥಾಪಿಸಿ ಈ ಪ್ರದೇಶದ ಶೈಕ್ಷಣಿಕ ಅಭಿವೃದ್ಧಿಗೆ ಕಾರಣರಾಗಿದ್ದಾರೆ. ಸಿ.ಡಿ.ಓ. ಜೈನ ಶಾಲೆಯು ಶತಮಾನೋತ್ಸವವನ್ನು ಆಚರಿಸಿಕೊಂಡ ಶಿಕ್ಷಣ ಸಂಸ್ಥೆಯಾದರೆ ಶ್ರೀ ಪಾರ್ಶ್ವನಾಥ ಶಿಕ್ಷಣ ಸಂಸ್ಥೆಯು ದಶಮಾನೋತ್ಸವವನ್ನು ಆಚರಿಸಿಕೊಂಡಿದೆ. ಇದಲ್ಲದೇ ಜೈನ ದಿಗಂಬರ ಪಂಥದ ಶ್ರೀ ಆರ್. ಎನ್. ದೇಶಪಾಂಡೆಯವರು ಮುಳಗುಂದ ಪರಿಸರದಲ್ಲಿ ೨೦೦೭ರಲ್ಲಿ ಸ್ಥಾಪಿಸಲ್ಪಟ್ಟ ಸರಕಾರಿ ಪದವಿ ಮಹಾವಿದ್ಯಾಲಯದ ಕಟ್ಟಡ ನಿರ್ಮಾಣಕ್ಕೆ ಸ್ಥಳದ ಅವಶ್ಯಕತೆ ಇದ್ದಾಗ ತಮ್ಮ ಸ್ವಂತ ಐದು ಎಕರೆ ಭೂಮಿಯನ್ನು ದಾನವಾಗಿ ನೀಡಿ ಈ ಭಾಗದ ಶೈಕ್ಷಣಿಕ ಪ್ರಗತಿಗೆ ಕಾರಣವಾಗಿದ್ದಾರೆ.

### ೧. ಶ್ರೀ ಸಿ.ಡಿ.ಓ. ಜೈನ ಆಂಗ್ಲ ಮಾಧ್ಯಮ ಶಾಲೆ ಗದಗ :

ಗುಜರಾತನಿಂದ ಆಗಮಿಸಿದ ಜೈನ ಶ್ವೇತಾಂಬರ ಪಂಥದವರು ಕೂಡಿಕೊಂಡು ಶ್ರೀ ಮಹಾಜನ್ ಟ್ರಸ್ಟ ಕಮೀಟಿ ಹೆಸರಿನಲ್ಲಿ ಶ್ರೀ ಕಚ್ಚಿದದವಾ ಓಲವಾಲ್ ಜೈನ ಆಂಗ್ಲ ಮಾಧ್ಯಮ ಶಾಲೆಯನ್ನು ೧೯೦೫ರಲ್ಲಿ ಸ್ಥಾಪಿಸಿದರು. ಅಂದಿನಿಂದ ಇಂದಿನವರೆಗೂ ಈ ಭಾಗದಲ್ಲಿ ಯು.ಕೆ.ಜಿ.ಯಿಂದ ೧೦ನೇ ತರಗತಿಯವರೆಗೆ ಶಿಕ್ಷಣವನ್ನು ನೀಡಿ ಶಿಕ್ಷಣ ಕ್ಷೇತ್ರದಲ್ಲಿ ಕ್ರಾಂತಿಯನ್ನೇ ಮಾಡಿದೆ. ೧೯೦೫ರಿಂದ ೨೦೦೫ರವರೆಗೆ ಶತಮಾನೋತ್ಸವವನ್ನು ಆಚರಿಸಿಕೊಂಡು ೧೧೨ ವರ್ಷಗಳ ಹಳೆಯದಾದ ಈ ಶಿಕ್ಷಣ ಸಂಸ್ಥೆಯು ಗುಣಮಟ್ಟ ಉತ್ತಮವಾಗಿದೆ. ಉತ್ತಮವಾದ ಕಟ್ಟಡ ಹೊಂದಿರುವ ಈ ಶಾಲೆ ಆಟದ ಮೈದಾನ, ಗ್ರಂಥಾಲಯ ಹಾಗೂ ವಿಜ್ಞಾನದ ಪ್ರಯೋಗಾಲಯವನ್ನು ಹೊಂದಿದೆ. ಸದ್ಯ ೬೦ಜನ ಬೋಧಕ–ಬೋಧಕೇತರ ಸಿಬ್ಬಂದಿಯನ್ನು ಹೊಂದಿದೆ. ೫೫೦ ಗಂಡು ಮಕ್ಕಳು ೪೯೯ ಹೆಣ್ಣು ಮಕ್ಕಳು ಒಟ್ಟು ೧೦೭೬ ವಿದ್ಯಾರ್ಥಿಗಳನ್ನು ಹೊಂದಿರುವ ಈ ಶಾಲೆಯು ಸರ್ಕಾರದಿಂದ ಸಿಗುವ ಎಲ್ಲ ಸೌಲಭ್ಯಗಳನ್ನು ವಿದ್ಯಾರ್ಥಿಗಳಿಗೆ ಸಿಗುವ ವ್ಯವಸ್ಥೆಯನ್ನು ಶಾಲಾ ಸಿಬ್ಬಂದಿ ಮಾಡಿದ್ದಾರೆ. ಪಠ್ಯದ ಜೊತೆಗೆ ಸಹಪಠ್ಯ ಚಟುವಟಿಕೆಗಳಲ್ಲಿ ವಿದ್ಯಾರ್ಥಿಗಳು ಪಾಲ್ಗೊಳ್ಳುವಂತೆ ಶಿಕ್ಷಕರ ಕಾರ್ಯ ಶ್ಲಾಘನೀಯವಾಗಿದೆ. ಶಿಸ್ತು, ಶ್ರದ್ಧೆ, ಸಮಯಪ್ರಜ್ಞೆ, ಅಭ್ಯಾಸ, ಪರಿಶ್ರಮ, ಕ್ರೀಡಾ ಮನೋಭಾವಗಳನ್ನು ಬೆಳೆಸುವಲ್ಲಿ ಈ ಶಾಲೆಯ ಪರಿಸರ ಸೂಕ್ತವಾಗಿದೆ. ಸರಕಾರದ ಅನುದಾನ ಪಡೆಯದೇ ಕೇವಲ ಟ್ರಸ್ಟ್ ಕಮೀಟಿ ವತಿಯಿಂದ ಸುಸ್ಥಿತಿಯಲ್ಲಿ ಮುನ್ನುಗ್ಗುತ್ತಿರುವುದು ಈ ಜೈನ ಸಮಾಜದ ಸ್ವಾವಲಂಭನೆ ಸೇವಾ ಮನೋಭಾವದ ಪ್ರತೀಕವಾಗಿದೆ. ಸದ್ಯ ಈ ಶಾಲೆಯ ಪ್ರಾಥಮಿಕ ವಿಭಾಗದ ಮುಖ್ಯೋಪಾಧ್ಯಾನಿಯರಾದ ಶ್ರೀಮತಿ ಆರ್. ಪಿ. ಕೋಲಾರರವರು ನಮ್ಮನ್ನು ಪ್ರೀತಿ ವಿಶ್ವಾಸದಿಂದ ಬರಮಾಡಿಕೊಂಡು ತಮ್ಮ ಸಂಸ್ಥೆಯ ಕುರಿತು ಮಾಹಿತಿ ನೀಡಿದರು.

**೨. ಶ್ರೀ ಮಹಾವೀರ ಶಿಕ್ಷಣ ಸಂಸ್ಥೆಯ ಶ್ರೀ ಪಾರ್ಶ್ವನಾಥ ಆಂಗ್ಲ ಮಾಧ್ಯಮ ಶಾಲೆ, ಗದಗ :**

ಶ್ರೀ ರಾಜಸ್ಥಾನಿ ಜೈನ ಶ್ವೇತಾಂಬರ ಸಂಘದಿಂದ ೨೦೦೫ರಲ್ಲಿ ಸ್ಥಾಪಿಸಲ್ಪಟ್ಟ ಶಾಲೆಯು ಇಂದು ಐದು ವಿಭಾಗಗಳನ್ನು ಹೊಂದಿದ್ದು ಪೂರ್ವ ಪ್ರಾಥಮಿಕದಿಂದ ಶಿಕ್ಷಕರ ತರಬೇತಿ ಕೇಂದ್ರಗಳನ್ನು ಸ್ಥಾಪಿಸಿದ್ದಾರೆ. ಉತ್ತಮವಾದ ಕಟ್ಟಡ, ವಾಹನ ಸೌಕರ್ಯ, ಆಟದ ಮೈದಾನ ಪ್ರಯೋಗಾಲಯವನ್ನು ಹೊಂದಿದ ಈ ಶಾಲೆಯು ವಿದ್ಯಾರ್ಥಿಗಳಲ್ಲಿ ಶಿಸ್ತು, ಶ್ರದ್ಧೆ, ಸಮಯಪ್ರಜ್ಞೆ, ಸ್ವಾವಲಂಬನೆ ಜೀವನವನ್ನು ಬೆಳೆಸಿಕೊಳ್ಳಲು ಮನವರಿಕೆ ಮಾಡಿದೆ.ಒಂದು ದಶಕವನ್ನೇ ಕಳೆದಿರುವ ಈ ಶಿಕ್ಷಣ ಸಂಸ್ಥೆ ಈ ಭಾಗದ ಶೈಕ್ಷಣಿಕ ಅಭಿವೃದ್ಧಿಗೆ ಸಹಾಯಕವಾಗಿದೆ. ಗದಗ ಭಾಗದ ಜೈನ ಹಾಗೂ ಜೈನೇತರರು ಉತ್ತಮ ಗುಣಮಟ್ಟದ ಶಿಕ್ಷಣವನ್ನು ಈ ಸಂಸ್ಥೆಯ ಮೂಲಕ ಪಡೆಯುತ್ತಿದ್ದಾರೆ. ಇದು ಈ ಪರಿಸರದ ಜೈನ ಸಮಾಜದ ಮೆಚ್ಚಿಕೊಳ್ಳುವಂತಹ ಕೊಡುಗೆಯಾಗಿದೆ.

**೩. ಶ್ರೀ ಆರ್. ಎನ್. ದೇಶಪಾಂಡೆ ಸರಕಾರಿ ಪ್ರಥಮ ದರ್ಜೆ ಕಾಲೇಜು ಮುಳಗುಂದ :**

ಜೈನ ದಿಗಂಬರ ಪಂಥದ ಹಿರಿಯರಾದ ಶ್ರೀ ಆರ್. ಎನ್. ದೇಶಪಾಂಡೆಯವರು ಮುಳಗುಂದ ಭಾಗದಲ್ಲಿ ಲ್ಯಾಂಡಲಾರ್ಡ್‌ಗಳೆಂದೆ ಹೆಸರುವಾಸಿ. ಇವರು ಶಿಕ್ಷಣ, ಸಮಾಜ, ಧಾರ್ಮಿಕ, ಆರ್ಥಿಕವಾಗಿ ಹಿಂದುಳಿದ ಜನರಿಗೆ ಸಹಾಯ ಹಸ್ತ ಚಾಚೀದ್ದಾರೆ. ಈ ಭಾಗದ ಶಿಕ್ಷಣ ಸಂಸ್ಥೆಗಳಲ್ಲಿ ತಮ್ಮನ್ನು ತಾವು ತೊಡಗಿಸಿಕೊಂಡಿರುವ ಶ್ರೀಯುತರು ೨೦೦೭ರಲ್ಲಿ ಮುಳಗುಂದದಲ್ಲಿ ಸ್ಥಾಪನೆಯಾದ ಸರಕಾರಿ ಪ್ರಥಮ ದರ್ಜೆ ಕಾಲೇಜಿಗೆ ಕಟ್ಟಡ ನಿರ್ಮಿಸಲು ಸ್ಥಳದ ಅವಶ್ಯಕತೆ ಇದ್ದಾಗ ತಮ್ಮ ಸ್ವಂತ ಐದು ಎಕರೆ ಭೂಮಿಯನ್ನು ಕಾಲೇಜಿಗೆ ದಾನವಾಗಿ ನೀಡಿ ದಾನಶೂರರು ಎನಿಸಿಕೊಂಡಿರುವರು. ಇಂದು ಉತ್ತಮವಾದ ಕಟ್ಟಡ ನಿರ್ಮಿಸಿಕೊಂಡಿರುವ ಮಹಾವಿದ್ಯಾಲಯವು ಶ್ರೀ ಆರ್. ಎನ್. ದೇಶಪಾಂಡೆ ಸರಕಾರಿ ಪ್ರಥಮ ದರ್ಜೆ ಕಾಲೇಜು ಎಂದೇ ಹೆಸರಿಡಲಾಗಿದೆ. ೧೧ ಬೋಧಕ ಸಿಬ್ಬಂದಿ, ೨ ಬೋಧಕೇತರ ಸಿಬ್ಬಂದಿ, ೧೦ ಅತಿಥಿ ಉಪನ್ಯಾಸಕರು, ೪ ಅರೇ ಕೆಲಸಗಾರರು ಇರುವ ಈ ಮಹಾವಿದ್ಯಾಲಯದಲ್ಲಿ ೮೫ ಗಂಡುಮಕ್ಕಳು, ೧೪೮ ಹೆಣ್ಣುಮಕ್ಕಳು ಒಟ್ಟು ೨೩೩ ವಿದ್ಯಾರ್ಥಿಗಳನ್ನು ಒಳಗೊಂಡಿದೆ. ಪಠ್ಯದ ಜೊತೆಗೆ ಸಹಪಠ್ಯ ಚಟುವಟಿಕೆಗಳು ಸಹ ಅತ್ಯಂತ ಉತ್ಸುಕತೆಯಿಂದ ಸಾಗುತ್ತಿವೆ. ೨೦೧೪ರಲ್ಲಿ ಎನ್.ಎಸ್.ಎಸ್. ಘಟಕ ಸ್ಥಾಪನೆಗೊಂಡಿದೆ. ಮಹಾವಿದ್ಯಾಲಯ ಸ್ಥಾಪನೆಗೊಂಡಿದ್ದರಿಂದ ಇಲ್ಲಿಯವರೆಗೆ ವಿಶ್ವವಿದ್ಯಾಲಯ ಮಟ್ಟಕ್ಕೆ ೭ ಕ್ರೀಡಾ ಪ್ರತಿಭೆಗಳನ್ನು ನೀಡಿರುವ ಗೌರವ ಹೊಂದಿದೆ. ಸಾಂಸ್ಕೃತಿಕ ವಿಭಾಗದಲ್ಲಿ ನಾಟಕ, ಭಾಷಣ, ಜಾನಪದ ಗೀತೆಯ ಸ್ಪರ್ಧೆಗಳಲ್ಲಿ ಅಂತರಾಜ್ಯ ವಿಶ್ವವಿದ್ಯಾಲಯಗಳ ಮಟ್ಟಕ್ಕೆ ಹೋಗಿ ಬಂದ ಕೀರ್ತಿ ಈ ಕಾಲೇಜಿಗೆ ಸಲ್ಲುತ್ತದೆ. ೨೦೧೬-೧೭ನೇ ಸಾಲಿನಲ್ಲಿ ಯು.ಜಿ.ಸಿ.ಯ ನ್ಯಾಕ್ ಕಮೀಟಿಯು ಭೇಟಿ ನೀಡಿ ಬಿ. ಗ್ರೇಡ್ ಮಾನ್ಯತೆಯನ್ನು ನೀಡಿದೆ. ಹೀಗೆ ಈ ಭಾಗದ ಬಡ ವಿದ್ಯಾರ್ಥಿಗಳಿಗೆ ಉನ್ನತ ಶಿಕ್ಷಣ ಪಡೆಯಲು ಸಹಾಯಕವಾಗಿರುವ ಈ ಕಾಲೇಜಿಗೆ ಭೂಮಿದಾನ ನೀಡಿದ ಶ್ರೀ ಆರ್. ಎನ್. ದೇಶಪಾಂಡೆಯವರ ಕಾರ್ಯ ಶ್ಲಾಘನೀಯವಾಗಿದೆ.

### ೭.೩.೩. ಸಾಮಾಜಿಕ ಸಾಧನೆಗಳು :

ನಗರಗಳಲ್ಲಿ ಆವರಿಸಿರುವ ಶ್ವೇತಾಂಬರ ಪಂಥದವರು ಗ್ರಾಮಗಳಲ್ಲಿರುವ ದಿಗಂಬರ ಪಂಥದವರು ಜೈನೇತರರ ಜೊತೆಗೆ ಸಾಮರಸ್ಯದಿಂದಿದ್ದಾರೆ. ಆದರೆ ಜೈನ ಧರ್ಮೀಯರಿಗೆ ಇಂದು ವೈವಾಹಿಕ ಸಂಬಂಧಗಳನ್ನು ಬೆಸೆಯುವಲ್ಲಿ ಬಹಳಷ್ಟು ತೊಂದರೆಯಾಗುತ್ತಿದೆ. ಶ್ವೇತಾಂಬರರು ಅವರದೇ ಆದ ಉಪಪಂಗಗಡಗಳ ಜೊತೆಗೆ ಮತ್ತು ದಿಗಂಬರರ ಜೊತೆಗೂ ಸಂಬಂಧ ಬೆಳೆಸಿಕೊಳ್ಳುತ್ತಿದ್ದಾರೆ. ಅಲ್ಲದೇ ದಿಗಂಬರರು ಪಂಚಮಶಾಲಿ, ಕುರುಬ, ಬಣಜಿಗ, ಬ್ರಾಹ್ಮಣರ ಜೊತೆಗೂ ವೈವಾಹಿಕ ಸಂಬಂಧಗಳನ್ನು ಮಾಡಿಕೊಳ್ಳುತ್ತಿದ್ದಾರೆ. ಆಧುನಿಕ ಜೈನ ಸಮಾಜವು ಗದಗ ಪರಿಸರದಲ್ಲಿ ಶ್ರೀ ಮಹಾವೀರ, ಪಾರ್ಶ್ವನಾಥ, ಶಾಂತಿನಾಥ ಮತ್ತು ನೇಮಿನಾಥರ ಹೆಸರಿನಲ್ಲಿ ಸಂಘ-ಸಂಸ್ಥೆಗಳನ್ನು ಕಟ್ಟಿಕೊಂಡು ಈ ಭಾಗದಲ್ಲಿ ತಮ್ಮ ಪರಂಪರೆಯ ಆಚರಣೆಗಳನ್ನು, ಜಯಂತಿಗಳನ್ನು ಚಾತುರ್ಮಾಸ್ಯ, ದಶಲಕ್ಷಣ ಪರ್ವ ಹಾಗೂ ಅನಂತನ ಹುಣ್ಣಿಮೆ ಹಬ್ಬಗಳನ್ನು ಆಚರಿಸಿಕೊಂಡು ಜೈನೇತರರ ಜೊತೆಗೆ ಸಾಮರಸ್ಯದಿಂದ ಸಾಗುತ್ತಿದ್ದಾರೆ. ಇದರೊಂದಿಗೆ ಸಮಾಜಸೇವಾ ಕಾರ್ಯಗಳನ್ನು ಮಾಡುತ್ತಾ, ಸಹಾಯ-ಸಹಕಾರ, ಸಂಸ್ಕೃತಿ ರಕ್ಷಣೆ, ಅನ್ಯಮತೀಯರಿಗೆ ಯಾವುದೇ ರೀತಿಯ ತೊಂದರೆಯಾಗದಂತೆ ಉತ್ತಮವಾದ ಬಾಂಧವ್ಯವನ್ನು ಹೊಂದಿದ್ದಾರೆ. ಗೋಶಾಲೆಯ ನಿರ್ವಹಣೆ, ಅರವಟಿಗೆಗಳ ನಿರ್ಮಾಣ, ದೀನ-ದುರ್ಬಲ ವರ್ಗದವರಿಗೆ ಸಹಾಯ ಮಾಡುವುದು, ಧನ ದಾನ, ಅಕ್ಷರ ದಾನ, ಅನ್ನದಾನ, ಭೂಮಿದಾನಗಳಲ್ಲಿ ತಮ್ಮನ್ನು ತಾವು ಸಕ್ರೀಯವಾಗಿ ತೊಡಗಿಸಿಕೊಂಡಿದ್ದಾರೆ. ಜೈನ ಸಂಸ್ಕೃತಿಯನ್ನು ಗದಗ ಪರಿಸರದಲ್ಲಿ ಇರುವ ಜೈನ ಸಮಾಜವು ಅನ್ಯಮತೀಯರ ಜೊತೆಗೆ ಸರ್ವಧರ್ಮ ಸಹಿಷ್ಣುತಾ ಭಾವನೆಯಿಂದ ಬದುಕುತ್ತಿದ್ದಾರೆ.

### ೧. ಶ್ರೀ ಮಹಾವೀರ ಗೋ ಸೇವಾ ಸಮಿತಿ, ಪಾಂಜರಪೋಳ, ಕಳಸಾಪುರ, ಗದಗ :

ಮೊದಲು ಶ್ರೀ ಈಶ್ವರಗೌಡ ಎಂಬುವವರು ಈ ಗೋಶಾಲೆಯನ್ನು ಸ್ಥಾಪಿಸಿದ್ದರು. ಆದರೆ ಮುಂದೆ ಇದರ ನಿರ್ವಹಣೆಯನ್ನು ನೋಡಿಕೊಂಡುಹೋಗದಿದ್ದ ಸಂದರ್ಭದಲ್ಲಿ ಗದುಗಿನ ಜೈನ ಸಮಾಜದವರು ೨೦೦೭ರಲ್ಲಿ ಇದರ ಉಸ್ತುವಾರಿಯನ್ನು ತೆಗೆದುಕೊಂಡು ಇಂದಿನವರೆಗೂ ಅಚ್ಚುಕಟ್ಟಿನಿಂದ ನಡೆಸಿಕೊಂಡು ಬಂದಿದ್ದಾರೆ. ೨೪ ಜನ ಸದಸ್ಯರಿರುವ ಈ ಸಮಿತಿ ಇದರ ಎಲ್ಲ ಕಾರ್ಯ ನಿಭಾಯಿಸಿಕೊಂಡು ಹೋಗುತ್ತಿದೆ. ಸಧ್ಯ ೨೦೨ ಹಸುಗಳು ಹಾಗೂ ೭ ಕುದುರೆಗಳು ಒಟ್ಟು ೨೦೯ ಪ್ರಾಣಿಗಳು ಈ ಗೋಶಾಲೆಯಲ್ಲಿವೆ. ಇವುಗಳ ಯೋಗಕ್ಷೇಮವನ್ನು ನೋಡಿಕೊಳ್ಳಲು ಇಬ್ಬರು ವ್ಯವಸ್ಥಾಪಕರು, ಐದು ಜನ ಕೆಲಸಗಾರರು ಇದ್ದಾರೆ. ಕೆಲಸಗಾರರಿಗೆ ವಸತಿ ವ್ಯವಸ್ಥೆಯನ್ನು ಕಮೀಟಿಯವರು ಮಾಡಿದ್ದಾರೆ. ಲಕ್ಷ್ಮೇಶ್ವರದಿಂದ ಹಸುಗಳಿಗೆ, ಕುದುರೆಗಳಿಗೆ ಬೇಕಾದ ಆಹಾರವನ್ನು ತರಿಸಿಕೊಂಡು ಅದರ ಖರ್ಚನ್ನು ಕಮೀಟಿಯವರು ನಿಭಾಯಿಸುತ್ತಾರೆ. ಇಲ್ಲಿಯವರೆಗೂ ಸರಕಾರದಿಂದ ಯಾವದೇ ಸೌಲಭ್ಯಗಳನ್ನು ಪಡೆದುಕೊಂಡಿಲ್ಲ. ಸಧ್ಯ ಶ್ರೀ ಮನೀಷ ಕೋಠಾರಿ ಅವರು ಈ ಸಮಿತಿಯ ಅಧ್ಯಕ್ಷರಾಗಿ ಕಾರ್ಯ ನಿರ್ವಹಿಸಿಕೊಂಡು

ಹೋಗುತ್ತಿದ್ದಾರೆ. ನಾನು ಈ ಕೇಂದ್ರಕ್ಕೆ ಭೇಟಿ ನೀಡಿದ ಸಂದರ್ಭದಲ್ಲಿ ಇಲ್ಲಿಯ ವ್ಯವಸ್ಥಾಪಕರಾದ ಶ್ರೀ ಜೀವರಾಜ ಜೈನರು ಈ ಮಾಹಿತಿಯನ್ನು ನೀಡಿದರು.

**೨. ಅರವಟಿಗೆಗಳ ನಿರ್ಮಾಣ :**

ಗದಗ ಪರಿಸರದ ಬಸ್ ನಿಲ್ದಾಣ, ರೇಲ್ವೆ ನಿಲ್ದಾಣ, ಸರ್ಕಲ್‌ಗಳಲ್ಲಿ ನೀರಿನ ಅರವಟಿಗೆಗಳನ್ನು ಶ್ರೀ ಮಹಾವೀರ, ಪಾರ್ಶ್ವನಾಥ, ಶಾಂತಿನಾಥರ ಹೆಸರಿನಲ್ಲಿ ನಿರ್ಮಿಸಿ ಸಮಾಜ ಉಪಯುಕ್ತ ಕಾರ್ಯಗಳನ್ನು ಜೈನ ಸಮಾಜವು ಮಾಡಿಕೊಂಡು ಸಾಗುತ್ತಿದ್ದಾರೆ. ಮುಖ್ಯವಾಗಿ ನಗರಪ್ರದೇಶಗಳಲ್ಲಿ ಅಲ್ಲದೇ ಗ್ರಾಮೀಣ ಪ್ರದೇಶಗಳಲ್ಲಿಯೂ ನೀರಿನ ಟ್ಯಾಂಕರ್‌ಗಳನ್ನು ನಿರ್ಮಿಸಿ ಜೈನ ಸಮಾಜವು ಸೇವಾಮನೇಭಾವನೆಯನ್ನು ಈ ಕಾರ್ಯದ ಮೂಲಕ ಮಾಡುತ್ತಬಂದಿದೆ.

**೩. ಜೈನ ಸಂಸ್ಕೃತಿಯ ಜಯಂತಿ-ಹಬ್ಬಗಳ ಆಚರಣೆ :**

ಜೈನ ಸಮಾಜದವರು ಶ್ರೀ ಮಹಾವೀರ ಜಯಂತಿ, ದಶಲಕ್ಷಣ ಪರ್ವ, ಚಾತುರ್ಮಾಶ್ಯ ಮತ್ತು ಅನಂತನ ಹುಣ್ಣಿವೆಯ ಆಚರಣೆಗಳನ್ನು ಈ ಭಾಗದ ಜೈನ ಸಮಾಜವು ಆಚರಿಸಿಕೊಂಡು ಜೈನೇತರ ಸಮಾಜದೊಂದಿಗೆ ಉತ್ತಮ ಬಾಂಧವ್ಯದೊಂದಿಗೆ, ಸಾಮರಸ್ಯದೊಂದಿಗೆ ಸಮಾಜದಲ್ಲಿ ಉಪಯುಕ್ತ ಕಾರ್ಯಗಳನ್ನು ಮಾಡುತ್ತಾ ಸಾಗುತ್ತಿರುವದು ಕಂಡುಬರುತ್ತದೆ. ಈ ರೀತಿಯಾಗಿ ಗದಗ ಪರಿಸರದ ಜೈನ ಸಮಾಜದವರು ಸಾಮಾಜಿಕ ಕಾರ್ಯಗಳನ್ನು ನಿಸ್ವಾರ್ಥ ಭಾವನೆಯಿಂದ ಸ್ವಾವಲಂಬಿಗಳಾಗಿ ಮಾಡುತ್ತಾ ಜೈನ ಸಂಸ್ಕೃತಿಯ ತತ್ವಗಳನ್ನು ಅನ್ಯ ಸಮಾಜಕ್ಕೆ ಉಪಯುಕ್ತವಾಗುವಂತೆ ಮಾಡಿಕೊಂಡುಬಂದಿದೆ.

**೭.೩.೪. ಆರ್ಥಿಕ ಸಾಧನೆಗಳು :**

ಪಟ್ಟಣ ಪ್ರದೇಶಗಳಲ್ಲಿ ವ್ಯಾಪಾರದ ಮಳಿಗೆಗಳನ್ನು ತೆರೆದು ಕೃಷಿ, ಕೈಗಾರಿಕೆ, ಕಿರಾಣಿ, ಆಹಾರಧಾನ್ಯ ಹಾಗೂ ಪುಸ್ತಕ ಭಂಡಾರದ ಕೇಂದ್ರಗಳನ್ನು ಸ್ಥಾಪಿಸಿಕೊಂಡು ವ್ಯಾಪಾರವನ್ನೇ ಮೂಲ ಉದ್ಯೋಗ ಮಾಡಿಕೊಂಡು ಶ್ವೇತಾಂಬರ ಪಂಥದವರು ಬದುಕನ್ನು ಸಾಗಿಸುತ್ತಿದ್ದರೆ, ದಿಗಂಬರ ಪಂಥದವರು ಗ್ರಾಮೀಣ ಪ್ರದೇಶದಲ್ಲಿ ಕೃಷಿಯನ್ನೇ ಅವಲಂಬಿಸಿದ್ದಾರೆ. ಹೀಗಾಗಿ ಆರ್ಥಿಕವಾಗಿ ಸ್ಥಿತವಂತರಾಗಿರುವ ಶ್ವೇತಾಂಬರರಂತೆ ದಿಗಂಬರರು ಇಂದು ನಗರಪ್ರದೇಶಗಳಲ್ಲಿ ವ್ಯಾಪಾರ ವೃತ್ತಿಯನ್ನು ಆರಿಸಿಕೊಂಡು ಅವರೂ ಆರ್ಥಿಕವಾಗಿ ಪ್ರಬಲರಾಗುವತ್ತ ಸಾಗುತ್ತಿರುವದು ಗದಗ ಪರಿಸರದಲ್ಲಿ ಕಂಡುಬರುತ್ತದೆ. ಜೈನ ಮಹಿಳೆಯರೂ ಸಹ ಅತ್ತಿಮಬ್ಬೆ, ಪದ್ಮಾವತಿಯ ಹೆಸರಿನಲ್ಲಿ ಮಹಿಳಾ ಸ್ವಸಹಾಯ ಸಂಘಗಳನ್ನು ಸ್ಥಾಪಿಸಿಕೊಂಡು ಸರಕಾರದಿಂದ ಧನಸಹಾಯ ಪಡೆದುಕೊಂಡು ಸ್ವಯಂ ಉದ್ಯೋಗಗಳನ್ನು ಪಡೆದುಕೊಂಡು ಮಾಡುತ್ತಾ ತಮ್ಮ ಬದುಕನ್ನು ಸಾಗಿಸುತ್ತಿರುವದು ನನ್ನ ಕ್ಷೇತ್ರಕಾರ್ಯದ ಸಂದರ್ಭದಲ್ಲಿ ಕಂಡುಬಂದಿತು.

ನರಗುಂದ, ಗಜೇಂದ್ರಗಡ, ಸೊರಟೂರು, ಬನ್ನಿಕೊಪ್ಪ, ಗದಗ, ಮುಳಗುಂದ ಹಾಗೂ ಲಕ್ಷ್ಮೇಶ್ವರದಲ್ಲಿ ಮಹಿಳೆಯರು ಹಾಗೂ ಪುರುಷರೂ ಸ್ವ-ಸಹಾಯ ಸಂಘಗಳನ್ನು ಸ್ಥಾಪಿಸಿಕೊಂಡಿರುವದು ಕಂಡುಬಂದಿತು. ಈರೀತಿ ಗದಗ ಪರಿಸರದಲ್ಲಿ ಜೈನ ಸಮಾಜವು ಆರ್ಥಿಕ ಪ್ರಗತಿಯನ್ನು ಹೊಂದುತ್ತಿರುವುದು ಉತ್ತಮ ಬೆಳವಣಿಗೆಯಾಗಿದೆ.

**೬.೨.೫. ಆಧುನಿಕ ಜೈನ ಸಮಾಜದ ರಾಜಕೀಯ ಸ್ಥಾನಮಾನ :**

ಒಂದು ಕಾಲದಲ್ಲಿ ರಾಜರನ್ನೇ ಅವಲಂಬಿಸಿ ಬೆಳೆದ ಜೈನ ಸಂಸ್ಕೃತಿಯು ಇಂದು ಭಿನ್ನವಾಗಿದೆ. ಜೈನ ಸಮಾಜದವರು ಸ್ವಾವಲಂಬಿಗಳಗಿದ್ದರಿಂದ ರಾಜಕೀಯ ಕ್ಷೇತ್ರವೆಂದರೆ ಅಷ್ಟಕ್ಕಷ್ಟೆ. ಅಲ್ಪಸಂಖ್ಯಾಕರಾಗಿರುವ ಇವರು ರಾಜಕೀಯ ಕ್ಷೇತ್ರಕ್ಕೆ ಧುಮುಕಿದ್ದು ತುಂಬಾ ವಿರಳ. ಅಲ್ಲಲ್ಲಿ ಗ್ರಾಮ, ನಗರ ಮಟ್ಟದಲ್ಲಿ ರಾಜಕೀಯ ಚಟುವಟಿಕೆಗಳಲ್ಲಿ ಭಾಗವಹಿಸಿದ್ದರ ಬಗ್ಗೆ ಕಂಡುಬಂದರೂ ರಾಜ್ಯ, ರಾಷ್ಟ್ರ ಮಟ್ಟದಲ್ಲಿ ಗದಗ ಜೈನ ಸಮಾಜದ ನಾಯಕರು ಯಾರೂ ಇಲ್ಲವೆನ್ನುವದು ವಾಸ್ತವ. ಸ್ವಾವಲಂಬನೆಯಿಂದಲೇ ಮುಂದೆ ಬಂದಿರುವ ಈ ಸಮಾಜದವರು ರಾಜಕೀಯ ನಾಯಕರೊಂದಿಗೆ ಪಕ್ಷಾತೀತವಾಗಿ ಸಾಮರಸ್ಯದೊಂದಿಗೆ ಸಾಗುತ್ತಿದ್ದಾರೆ.

ಹೀಗೆ ಗದಗ ಪರಿಸರದ ಆಧುನಿಕ ಜೈನ ಸಮಾಜವು ಧಾರ್ಮಿಕ, ಶೈಕ್ಷಣಿಕ, ಆರ್ಥಿಕ, ಸಾಮಾಜಿಕ ಮತ್ತು ರಾಜಕೀಯ ಕ್ಷೇತ್ರಗಳಲ್ಲಿ ತಮ್ಮನ್ನು ತಾವು ತೊಡಗಿಸಿಕೊಂಡು ಸಮಗ್ರವಾದ ಪ್ರಗತಿಯನ್ನು ಕಾಣುತ್ತಿದೆ. ಇಡೀ ಸಮಾಜಕ್ಕೆ ಅಹಿಂಸಾ ತತ್ವ, ಸ್ವಾವಲಂಬನೆ ತತ್ವ, ಕಾರ್ಯತತ್ಪರತೆ, ಶಿಸ್ತು, ಶ್ರದ್ಧೆ, ಸಮಯಪ್ರಜ್ಞೆ ಮತ್ತು ಸಹಕಾರ ಮನೋಭಾವಗಳನ್ನು ಅಳವಡಿಸಿಕೊಳ್ಳುವಂತೆ ಈ ಭಾಗದ ಜೈನ ಸಮಾಜವು ಯಶಸ್ಸನ್ನು ಪಡೆದಿದೆ ಎನ್ನಬಹುದು. ಅನ್ಯಮತೀಯರೊಂದಿಗೆ ಸಾಮರಸ್ಯತೆ, ಸಹಕಾರದಿಂದ ಬದುಕನ್ನು ಸಾಗಿಸಿಕೊಂಡು ಹೋಗುವಲ್ಲಿ ಜೈನ ಸಂಸ್ಕೃತಿಯ ಆಸ್ತಿಕ-ನಾಸ್ತಿಕ ಮನೋಭಾವದ ತತ್ವಗಳನ್ನು ಸಾಕಾರಗೊಳಿಸುವಲ್ಲಿಯೂ ಜೈನ ಸಮಾಜವು ದಾಪುಗಾಲಿಟ್ಟಿದೆ. ಅನ್ಯಮತೀಯರೊಂದಿಗೆ ವಿರಸವನ್ನು ಮಾಡದೆ, ಅನ್ಯರನ್ನು ಕೇಡನ್ನು ಬಯಸದೆ, ಅನ್ಯರ ಅಭಿವೃದ್ಧಿಯಲ್ಲಿ ತಾವು ಸಹಾಯ ಹಸ್ತ ಚಾಚುತ್ತಿರುವುದು ಜೈನ ಸಮಾಜದಲ್ಲಿ ಕಂಡುಬರುತ್ತದೆ. ಜೈನ ಧರ್ಮದ ಸಂಸ್ಕೃತಿಯನ್ನು ಉಳಿಸಿ-ಬೆಳೆಸಿಕೊಂಡುಹೋಗುವುದರೊಂದಿಗೆ ಅನ್ಯಧರ್ಮದವರ ಸಂಸ್ಕೃತಿಯನ್ನು ಗೌರವಿಸುವ ಜೈನರು ಹಲವಾರು ರೀತಿಯ ಸಹಾಯ-ಸಹಕಾರಗಳನ್ನು ಮಾಡುತ್ತಿರುವುದು ಈ ಭಾಗದ ಜೈನ ಸಮಾಜದಲ್ಲಿ ಕಂಡುಬರುತ್ತಿದೆ.

ಯಾರನ್ನು ಅವಲಂಬಿಸದೆ ಯಾವುದೇ ತರದ ಸಂಬಂಧಗಳನ್ನು ಬಳಸಿಕೊಳ್ಳದೆ ಜೈನಧರ್ಮದ ಮೂಲ ಉದ್ದೇಶವನ್ನು ಮುಟ್ಟಬೇಕೆಂದು ಮಹಾವೀರನು ಹೇಳಿಕೊಂಡು ಬಂದನು. ಅವನ ತರುವಾಯದಲ್ಲಿ ಜೈನ ಮುನಿಗಳೂ ತಮ್ಮ ಧರ್ಮ ಸಂಸ್ಥಾಪಕರು ನಡೆದ ಮಾರ್ಗದಲ್ಲಿ ಸಂಚಾರ ಕೈಕೊಂಡು ಬಂದರು. ವಸ್ತು ಸ್ಥಿತಿ ಹೀಗಿದ್ದರೂ ಜೈನರ ಸಮಾಜ ಬ್ರಾಹ್ಮಣ ವ್ಯವಸ್ಥೆಯ ವಿರುದ್ಧ ಸ್ಪರ್ಧಿಸುತ್ತ ತನ್ನ ಅಸ್ತಿತ್ವವನ್ನು ರಕ್ಷಿಸಿಕೊಂಡು ಬರುವುದಷ್ಟೆ ಅಲ್ಲ ಕ್ರಿಯಾಶೀಲವನ್ನು ಅಭಿವೃದ್ಧಿಯನ್ನು ಬೆಳೆಸಿಕೊಂಡು ಬಂದಿದೆ. ಇಂತಹ ಸ್ಥಿತಿಯನ್ನು ಸಾಧಿಸುವಲ್ಲಿ ಮುನಿಧರ್ಮದ ಹಾಗೂ ಮುನಿಯ ಪಾತ್ರವೇನೆಂಬ ಪ್ರಶ್ನೆ ಸಹಜವಾಗಿ ಉದ್ಭವಿಸುತ್ತದೆ.

ಜೈನರ ಸಾಮಾಜಿಕ ಸಮುದಾಯವು ಧಾರ್ಮಿಕವಾಗಿ ಗಣಗಚ್ಛ ಸಂಘ ಮತ್ತು ಶಾಖಾಗಳಲ್ಲಿ ವಿಂಗಡಿತವಾಗಿದ್ದು ಅವು ಶ್ವೇತಾಂಬರ, ದಿಗಂಬರರಲ್ಲಿ ಕಂಡು ಬರುತ್ತವೆ. ಮುನಿಗಳ ವ್ಯವಸ್ಥಿತ ಗುಂಪನ್ನು ಸಂಘವು ಸೂಚಿಸುವುದು. ಅದರ ಸದಸ್ಯತ್ವವನ್ನು ಹೊಂದಿದ ಮುನಿಗಳು ಗಣ, ಗಚ್ಛ ಮತ್ತು ಶಾಖಾ ಗುಂಪುಗಳ ಯಾವೊಂದು ಗುಂಪಿಗೆ ಸದಸ್ಯರಾಗಿರುತ್ತಾರೆ. ಅವರು ತಮ್ಮ ಸಮುದಾಯದ ಧಾರ್ಮಿಕ ಆಚಾರ ವಿಚಾರಗಳಿಗೆ ಹೊಣೆಗಾರರಾಗಿರುವರು. ದಿಗಂಬರ ಪಂಗಡವು ೬ನೆಯ ಶತಮಾನದಲ್ಲಿ ಉದಯವಾಗಿ ಮೂಲಸಂಘವು ಕ್ರಮೇಣ ಸಂಸ್ಥೆಯಾಗಿ ಬೆಳೆದುದಲ್ಲದೆ ಅದು ಮುಂದೆ ಸಿಂಹ, ನಂದಿ, ಸೇನಾ ಮತ್ತು ದೇವಾ ಎಂಬ ಹೆಸರಿನಲ್ಲಿ ೪ ಸಂಘಗಳಲ್ಲಿ ವಿಭಜಿತವಾಯಿತು. ಐತಿಹಾಸಿಕವಾಗಿ ಪರಸ್ಪರ ಗುಂಪುಗಳಲ್ಲಿ ಆಚಾರ ವಿಚಾರಗಳಲ್ಲಿ ವಿನಿಮಯ ಹೆಚ್ಚುತ್ತ ನಡೆದಂತೆ ನಿಷ್ಕ್ರೀಯಾತ್ಮಕವಾದವುಗಳು ಕಣ್ಮರೆಯಾಗುತ್ತ ಹೋದವು. ಉಪಗುಂಪುಗಳು ಮೂಲ ಗುಂಪುಗಳಿಗೆ ಸೇರಿದ ವ್ಯತ್ಯಾಸಗಳು ಉಳಿದು ಬಂದಿರುವುದಲ್ಲದೆ ಅವುಗಳನ್ನು ನಿರ್ಮೂಲನ ಮಾಡಿ ಜೈನ ಸಮುದಾಯಗಳಲ್ಲಿ ಐಕ್ಯತೆಯನ್ನು ಸಾಧಿಸಬೇಕೆನ್ನುವ ಸಾರ್ವತ್ರಿಕವಾಗಿ ನೆಲೆಗೊಂಡಿದ್ದು ಕಂಡು ಬರುತ್ತದೆ.

ಸಂಘದ ರಚನೆಯು ಸಾಮಾಜಿಕ, ಧಾರ್ಮಿಕ ನಿಲುವು ಮತ್ತು ವಿಚಾರಗಳ ಮೇಲೆ ರಚಿತವಾಗಿದೆ. ಮುನಿಗಳ ಗುಂಪಿನ ರಚನೆಯು ತರತಮ ಭಾವದ ಮೇಲೆ ನಿರ್ಮಿತವಾಗಿದ್ದು ಅದರಲ್ಲಿ ಸಣ್ಣವರು, ದೊಡ್ಡವರು, ಶ್ರೀಮಂತರು ಬಡವರೆಂಬುವರು ನೋಡಲು ಸಿಗುತ್ತಾರೆ. ಅವರ ಧಾರ್ಮಿಕ ಶ್ರೇಣಿ ಪದ್ಧತಿಯಲ್ಲಿ ಎಲ್ಲಕ್ಕೆ ಕೆಳಗಿನವನು ಉಪಾಧ್ಯಾಯ. ಮುನಿಗಳ ಸಮುದಾಯದಲ್ಲಿ ಆಚಾರ್ಯನು ಎಲ್ಲರಿಗಿಂತಲೂ ಶ್ರೇಷ್ಠನಾಗಿರುವನು. ತನ್ನ ಕೆಳಗಿನವರು ಏನಾದರೂ ತಪ್ಪು ಮಾಡಿದರೆ ಅವರು ಆಚಾರ್ಯನ ಬಳಿಗೆ ಹೋಗಿ ತಪ್ಪನ್ನು ಒಪ್ಪಿಕೊಂಡು ಪ್ರಾಯಶ್ಚಿತ್ತ ಪಡೆಯಬೇಕಾಗುತ್ತದೆ. ದೈನಂದಿನ ಧಾರ್ಮಿಕ ಆಚರಣೆಯಲ್ಲಿ ಕೆಳಗಿನವರು ಏನಾದರೂ ಚಿಕ್ಕಪುಟ್ಟ ಬದಲಾವಣೆಗಳನ್ನು ಮಾಡಿಕೊಂಡರೆ ಅಂತಹ ಬದಲಾವಣೆಗಳಿಗೆ ಆಚಾರ್ಯರ ಪರವಾನಿಗೆ ಪಡೆಯಬೇಕಾಗುವುದು. ಒಬ್ಬಂಟಿಗನಾಗಿ ಪ್ರವಾಸ ಮಾಡುವುದಕ್ಕೆ ಹೆಚ್ಚಿನ ಧಾರ್ಮಿಕ ಸ್ಥಾನಕ್ಕೆ ಅಪೇಕ್ಷೆ ಪಟ್ಟರೆ, ಸಲ್ಲೇಖನದಂತಹ ಮಹತ್ವದ ವ್ರತವನ್ನು ಕೈಗೊಳ್ಳುವುದಕ್ಕೆ ಇಚ್ಚಿಸಿದರೆ ಅವನು ಆಚಾರ್ಯರ ಒಪ್ಪಿಗೆಯನ್ನು ಕಡ್ಡಾಯವಾಗಿ ಪಡೆಯಬೇಕಾಗುವುದು. ಅಷ್ಟರ ಮಟ್ಟಿಗೆ ಚಿಕ್ಕ ಮುನಿಯು ಧಾರ್ಮಿಕ ಜೀವನದಲ್ಲಿ ಮುನಿಯ ರಾಜಕೀಯ ಪ್ರಭಾವಕ್ಕೆ ಒಳಗಾಗಿರುತ್ತಾನೆ. ಅಂತಹ ರಾಜಕೀಯ ಪ್ರಭಾವವನ್ನು ಗಳಿಸಿಕೊಂಡ ಜೈನ ಮುನಿಗಳ ಹೆಸರುಗಳು ಧಾರ್ಮಿಕ ಇತಿಹಾಸದಲ್ಲಿ ಸಿಗುತ್ತವೆ. ನಿಯಂತ್ರಿತವಲ್ಲದ ಅಧಿಕಾರವು ದುರುಪಯೋಗಕ್ಕೆ ಕಾರಣವಾಗುತ್ತದೆ. ಜೀವನವು ಜಟಿಲವಾಗುತ್ತ ನಡೆದಂತೆ ಹೊರಗಿನಿಂದ ಬಂದ ಹೆದರಿಕೆಗಳನ್ನು ಎದುರಿಸಲಿಕ್ಕಾಗದೆ ಆಚಾರ್ಯರು ಸಂನ್ಯಾಸ್ಥದ ಕಡೆಗಿನ ದೃಷ್ಟಿಯನ್ನು ಕಡಿಮೆ ಮಾಡುತ್ತ ತಮ್ಮ ಸಂಸ್ಥೆಗಳ ಹಾಗೂ ಲೌಕಿಕದ ಮೇಲೆ ಕೈಯೂರಿಸಿಕೊಂಡು ಅವಲಂಬಿತರಾದರೆಂದು ೧೨-೧೩ನೆಯ ಶತಮಾನದ ವಿವರಗಳಿಂದ ತಿಳಿದು ಬರುತ್ತದೆ.[೯]

---

೯. ಬ್ರಹ್ಮಶಿವನ ಸಮಯ ಪರೀಕ್ಷ-ಕೃತಿಯಿಂದ ತಿಳಿದುಬರುತ್ತದೆ.

ಅನುಯಾಯಿಗಳ ಸಂಖ್ಯೆಯೂ ಅವರಿಂದ ದಾನವಾಗಿ ಬರುವ ಹಣವೂ ಹೆಚ್ಚಾದಂತೆ ಆಚಾರ್ಯರ ಹೆಚ್ಚು ವೇಳೆಯು ಆಡಳಿತ ವ್ಯವಸ್ಥೆಯಲ್ಲಿಯೂ ಆಸ್ತಿಯ ರಕ್ಷಣೆ ಇನ್ನಷ್ಟು ಹಣದ ಶೇಖರಣೆಯಲ್ಲಿಯೂ, ಖಜಾನೆಯನ್ನು ಜೋಪಾನ ಮಾಡುವಲ್ಲಿಯೂ ಕಳೆಯತೊಡಗಿತು. ಹೀಗಾಗಿ ತಪಸ್ಸಿಗೆ ಧ್ಯಾನಕ್ಕೆ ವೇಳೆಯು ಅವರಿಗೆ ಸಿಗದಾಯಿತು. ಸಂನ್ಯಾಸಿಗಳಿಗೆ ಮೋಸ ವಂಚನೆಗಳನ್ನು ಕಲಿಸಿ ಅವರನ್ನು ಸಮಾಜಕ್ಕೆ ಅಂಟಿಕೊಂಡ ಜಗಳೆ (Parasite)ಯಂತೆ ೧೬ನೆಯ ಶತಮಾನದ ಹೊತ್ತಿಗೆ ಮುನಿಗಳು ಕಾಣಿಸಿಕೊಂಡಿದ್ದರೆನ್ನುವುದನ್ನು ಆ ಕಾಲದ ದಾಖಲೆಗಳಿಂದ ತಿಳಿದು ಬರುತ್ತದೆ.[೧೦]

ಸಮಕಾಲೀನ ಸಂನ್ಯಾಸಿಗಳ ಪ್ರಪಂಚದಲ್ಲಿ ಎಲ್ಲೆಲ್ಲಿ ಬೃಹತ್ ದೇವಾಲಯಗಳು ಅವುಗಳಿಗೆ ಹೊಂದಿಕೊಂಡು ಬೆಳೆದ ಸಂಸ್ಥೆಗಳು ಸಿಗುತ್ತವೆಯೋ ಅಲ್ಲಲ್ಲಿ ದ್ವೇಷ, ಕದನ, ವ್ಯಾಜ್ಯಗಳು ಕಾಣಿಸಿಕೊಂಡಿದ್ದು ಅವುಗಳಲ್ಲಿ ಆಚಾರ್ಯರೂ ಶ್ರಾವಕರೂ ಪಾಲುಗಾರರಾಗಿದ್ದರೆನ್ನುವ ಆಪಾದನೆಗಳು ಕೇಳಿ ಬರುತ್ತವೆ. ಆದ್ದರಿಂದ ಗದಗ ಪರಿಸರದಲ್ಲಿನ ಜೈನ ದೇವಾಲಯಗಳು, ಸಂಸ್ಥೆ ಸಂಘಗಳಲ್ಲಿ ಈಗಲೂ ಹಲವಾರು ವಿಷಯಗಳಿಗೆ ಸಂಬಂಧಿಸಿದ ವ್ಯಾಜ್ಯವು ನ್ಯಾಯಾಲಯದ ಕಟ್ಟೆಗಳನ್ನು ಏರಿದೆ. ಪರಿಸ್ಥಿತಿ ಹೀಗಿದ್ದರೂ ಆಚಾರ್ಯರೂ ದೇವಾಲಯಗಳ ಸ್ಥಾಪನೆಯನ್ನು ಪ್ರೋತ್ಸಾಹಿಸುತ್ತಿರುವರೆಂದೂ ಅವರ ಪ್ರೋತ್ಸಾಹನೆಗೆ ತಕ್ಕಂತೆ ಶ್ರಾವಕರು ಕಟ್ಟುತ್ತಿರುವುದೂ ನಡೆದಿದೆ. ಇದರ ಪರಿಣಾಮವಾಗಿ ದೇವಾಲಯಗಳ ನಗರಗಳು ಈ ಪರಿಸರದಲ್ಲಿ ಹೆಚ್ಚಾಗುತ್ತಾ ಬೆಳೆದಿರುವುದನ್ನು ನೋಡಬಹುದಾಗಿದೆ.

ಮುನಿಧರ್ಮವು "ಹೃದಯವಿಲ್ಲದ, ಕ್ರೂರ ದಂಡನೆಗಳಿಂದೊಡಗೂಡಿದ ಧರ್ಮವಾಗಿದೆ." ಉಪವಾಸ ಆರಾಧನೆ, ಸಂನ್ಯಾಸ, ಸಮಾಧಿ, ತ್ಯಾಗಮಯ ವ್ರತಗಳಿಂದ ಮರಣವನ್ನು ಆಹ್ವಾನಿಸುವ ಮುನಿಧರ್ಮವು ಜೈನ ಧರ್ಮೀಯರಲ್ಲದವರ ದೃಷ್ಟಿಯಲ್ಲಿ ಆತ್ಮಘಾತುಕ (Suicidal) ಧರ್ಮವಾಗಿ ಕಾಣಲು ಸಾಧ್ಯವಿದೆ. ಅಂತಹ ಧರ್ಮವನ್ನು ಜೈನ ಪುರುಷ, ಸ್ತ್ರೀಯರು ಏಕೆ ಹುಡುಕಿಕೊಂಡು ಹೋಗುತ್ತಾರೆ?

ಮುನಿಧರ್ಮವನ್ನಪ್ಪಿಕೊಳ್ಳುವ ಅರ್ಹತೆಗಳು ಆದರ್ಶ ಮಟ್ಟದಲ್ಲಿ ಎಲ್ಲರಿಗೂ ಇರುತ್ತವೆಯಾದರೂ ಏಕಜರಿಗೂ, ಶೂದ್ರರಿಗೂ ಅವು ನಿರಾಕೃತವಾಗಿವೆ. ಯಾರಿಗೆ ಅರ್ಹತೆ ಇರುತ್ತದೆಯೋ ಅವರು ಅದರ ಆಧಾರವೊಂದರ ಮೇಲೆಯೇ ಮುನಿತ್ವವನ್ನು ಪಡೆಯಲಾರರು ಏಕೆಂದರೆ ಅಣುವ್ರತ, ಮಹಾವ್ರತಗಳು ಕ್ಷುಲ್ಲಕ ಐಲ್ಲಕ ಹಂತಗಳನ್ನು ಒಂದೊಂದಾಗಿ ದಾಟಿ, ಗುರುವಿನ ನೆರವಿನಿಂದ ಮುನಿ ದೀಕ್ಷೆಯನ್ನು ಪಡೆದನಂತರವೇ ಅವರು ಮುನಿಯಾಗಬಲ್ಲರು. ಆದ್ದರಿಂದ ಮುನಿ ಸಂಸ್ಥೆಯ ಬಾಗಿಲು ಎಲ್ಲಾರಿಗೂ ತೆರೆದಿದೆ. ಅದರಲ್ಲಿ ಪ್ರವೇಶಿಸುವುದಕ್ಕೆ ಎಲ್ಲಾರಿಗೂ ಸ್ವಾತಂತ್ರ್ಯವಿದೆಯೆಂಬ ಪ್ರಮೇಯವು ಸಂಪೂರ್ಣ ಸತ್ಯವಾಗಿಲ್ಲ. ಹೀಗಿದ್ದರೂ ಮುನಿಜೀವನವು ಜೈನರಿಗೆ ಏಕೆ ಆದರ್ಶವಾಗಿದೆ?

ಪರಂಪರೆಯ ನೆರಳಿನಲ್ಲಿ ಬೆಳೆದು ಬಂದ ಜೈನ ಕುಟುಂಬಗಳಲ್ಲಿ ಹುಟ್ಟಿದ ಮಗುವಿಗೆ ಬಾಲ್ಯದಿಂದಲೂ ಒದಗಿದ ಧಾರ್ಮಿಕ ಪರಿಸರವು ಅತ್ಯಂತ ಮೋಹಕವೂ, ಆಕರ್ಷಕವೂ ಆದ ಶಕ್ತಿಯಾಗಿದೆ. ಅದರಲ್ಲಿ ಕಾಣಿಸಿಕೊಂಡ

---

೧೦. ಕರ್ನಾಟಕ ಮತ್ತು ಜೈನ ಧರ್ಮ–ಹಂಪನಾ ಕೃತಿಯಲ್ಲಿ ಉಲ್ಲೇಖವಿದೆ.

ಎರಡು ಪ್ರಬಲ ಶಕ್ತಿಗಳಲ್ಲಿ ಕುಟುಂಬದ ನಿಯೋಗಿಗಳು, ಅದರಲ್ಲೂ ಪ್ರಮುಖರಾದವರು ತಂದೆ, ತಾಯಿ ಇಲ್ಲವೆ ಸಂಯುಕ್ತ ಕುಟುಂಬದ ಪ್ರತಿನಿಧಿಯೂ ಮತ್ತು ಮುನಿಗಳು ಆಗಿರುವರು. ಕುಟುಂಬದಿಂದ ಉಪವಾಸ, ಧ್ಯಾನ, ಪ್ರಾರ್ಥನೆಗಳ ಅಭ್ಯಾಸವು ಮುನಿಯ ದರ್ಶನದಿಂದ ಉಪದೇಶದಿಂದ ಧರ್ಮದ ಅರಿವು, ಸಂನ್ಯಾಸ್ಥದ ಕಲ್ಪನೆಗಳು ಸಾಮಾಜಿಕರಣದ ಫಲವಾಗಿ ವ್ಯಕ್ತಿಗೆ ಪ್ರಾಪ್ತವಾಗುತ್ತದೆ.

ಶ್ರಾವಕ ಮತ್ತು ಮುನಿ ಸಮುದಾಯವು ಆವೃತ ವ್ಯವಸ್ಥೆಗೆಗೊಳಗಾಗಿದೆ. ಅವರ ನಡುವೆ ಭದ್ರವಾಗಿ ಸ್ಥಾಪಿತವಾಗಿರುವ ಅನ್ಯೋನ್ಯತೆಯು ಸುತ್ತಣ ಪ್ರಪಂಚದಲ್ಲಿ ಹರುಹಿದ ಬದಲಾವಣೆಗಳಿಂದ ರಕ್ಷಿಸಿಕೊಂಡು ಬಂದಿದೆ. ಜೈನಧರ್ಮವು ಮತಾಂತರವನ್ನು ಪ್ರೋತ್ಸಾಹಿಸುವುದಿಲ್ಲ. ಎಲ್ಲಾ ಜೀವಿಗಳನ್ನು ಸರಿಸಮಾನರನ್ನಾಗಿ ಕಾಣಬೇಕೆಂದು ಹೇಳುವ ಜೈನಧರ್ಮದ ತತ್ವವನ್ನು ಮತಾಂತರದ ಪ್ರಶ್ನೆ ಬಂದಾಗ ಜೈನರು ಅವರ ಮುನಿಗಳೂ ಸಾಂಪ್ರದಾಯಿಕ ನಂಬುಗೆಯನ್ನು ಬಲವತ್ತಾಗಿ ಅನುಭವಿಸುವರು. ತಮ್ಮ ಧರ್ಮದ ಬಾಗಿಲನ್ನು ಇತರರಿಗೆ ತೆರೆಯುವಲ್ಲಿ ಶ್ವೇತಾಂಬರರು ಹಿನ್ನೇಟು ಹಾಕಿದರೆ ದಿಗಂಬರರೂ ಕೆಳಗಿನ ಜಾತಿಯ ಜನರಿಗೆ ನೇರವಾಗಿ ನಿರಾಕರಿಸುವರು. ಮುನಿ ಸಂಸ್ಕೃತಿಯು ದೇವರ ಅಸ್ತಿತ್ವವನ್ನು ಅಲ್ಲಗಳೆಯುತ್ತದೆ. ಸೃಷ್ಟಿಯ ನಿರ್ಮಾಣವು ದೇವರಿಂದ ಆಯಿತು ಎಂದೆನ್ನುವವರಿಗೆ ಅದು ಹುಟ್ಟುವ ಪೂರ್ವದಲ್ಲಿ ದೇವರೆನ್ನುವವನು ಇದ್ದರೆ ಅವನನ್ನು ಹುಟ್ಟಿಸಿದವರು ಯಾರು? ಎಂದು ಜೈನ ದಾರ್ಶನಿಕರು ಕೇಳುವ ಪ್ರಶ್ನೆಯಲ್ಲಿ ದೇವರ ಅಸ್ತಿತ್ವವನ್ನೆ ನಿರಾಕರಿಸುವ ಅವರ ಮನೋಭಾವನೆಯು ಸ್ಪಷ್ಟವಾಗಿ ಕಂಡು ಬರುತ್ತದೆ. ದೇವರು ಹುಟ್ಟುವ ಪೂರ್ವದಲ್ಲಿ ಜೈನಧರ್ಮವು ಅಸ್ತಿತ್ವದಲ್ಲಿತ್ತೆಂದು ಹೇಳುವ ಅವರು ಪರಮೋತ್ತಮ ದೈವೀಶಕ್ತಿಯೆಂಬುದು ಅದರ ಉತ್ಪತ್ತಿಗೆ ಕಾರಣವಾಯಿತೆಂದು ಹೇಳುವ ಜೈನರು ದೇವರ ಅಸ್ತಿತ್ವವನ್ನು ಅಲ್ಲಗಳೆಯುವ ಮುನಿಧರ್ಮವು ಪರಮೋತ್ತಮ ದೈವೀಶಕ್ತಿಯನ್ನು ಒಪ್ಪಿಕೊಳ್ಳುತ್ತದೆಯಲ್ಲದೆ ಆ ಶಕ್ತಿಯನ್ನೇ ದೇವತ್ವವೆಂದು ಕರೆದು ಅದನ್ನು ತೀರ್ಥಂಕರರಲ್ಲಿ ಕಾಣಬಯಸುತ್ತದೆ.

ಪ್ರಸ್ತುತದಲ್ಲಿ ಜೈನರು ಏಕದೈವವೊಂದನ್ನೆ ಅಲ್ಲ ಬಹುದೈವತಾ ವಾದವನ್ನು ಮನ್ನಿಸಿಕೊಂಡು ಬಂದಿರುವರು. ಯಕ್ಷ ಯಕ್ಷಣಿಯರೇ ಮುಂತಾದವರ ಮೂರ್ತಿಗಳನ್ನು ತೀರ್ಥಂಕರರ ಹೆಸರಿನಲ್ಲಿ ಕಟ್ಟಿದ ದೇವಾಲಯಗಳಲ್ಲಿ ಸ್ಥಾಪಿಸಿ ಅವರನ್ನು ಪೂಜಿಸಿಕೊಂಡು ಬರುತ್ತಿರುವುದು ಬಹುದೈವತಾ ವಾದವನ್ನು ಸೂಚಿಸುತ್ತದೆ. ಎಲ್ಲ ದೇವರಿಗಿಂತ ಪಂಚಪರಮೇಷ್ಠಿಗಳು ಶ್ರೇಷ್ಠರಾದವರೆಂಬ ವಾದಕ್ಕೂ ಜೈನ ಧರ್ಮವು ಪರಿಚಿತವಾಗಿದೆ. ಬ್ರಾಹ್ಮಣೀಕರಣದ ಪ್ರಭಾವಕ್ಕೀಡಾದ ಜೈನ ಧರ್ಮಕ್ಕೆ ನಾಸ್ತಿಕವಾದದಿಂದ ಬಹುದೈವತಾವಾದಕ್ಕೆ ತಿರುಗುವುದಕ್ಕೆ ಸಾಧ್ಯವಾಯಿತು.

ವೈಯಕ್ತಿಕ ಆತ್ಮೋನ್ನತಿಯನ್ನು ಸಾಧಿಸುವದಕ್ಕೊಂದು ಹುಟ್ಟಿಬಂದ ಜೈನ ಧರ್ಮವು ಸಮಾಜ, ಸಮುದಾಯ ಚಿಂತನೆಗಳಿಗೆ ಬೆನ್ನುತೋರಿಸಿದ ಧರ್ಮವಾಗಿದೆ. ಸ್ವಂತ ಶ್ರೇಯವನ್ನು ಸಾಧಿಸುವುದಕ್ಕೆ ಹುಟ್ಟಿಬಂದ ಅದನ್ನು 'ಸ್ವಾರ್ಥ ಪ್ರೇರಿತ ಧರ್ಮ'ವೆಂದು ಕರೆಯಬಹುದಾಗಿದೆ. ಸಮಾಜ ಸೇವೆಯಲ್ಲಿ ದೇವತ್ವದ ಅನುಭವವನ್ನು ಪಡೆಯಬಯಸಿದ ಜಂಗಮರ ಆಚಾರವನ್ನು ಕರ್ಮಬಂಧನಗಳನ್ನು ಕಳಚಿ ಆತ್ಮನ ಅರಿವನ್ನು ಉನ್ನತಿಯನ್ನು ಮುಟ್ಟಬಯಸಿದ ಮುನಿಗಳ

ಆಚಾರಕ್ಕೆ ಹೋಲಿಸಿ ನೋಡಿದಾಗ ಅವುಗಳ ನಡುವಿನ ಅಂತರ ಪೂರ್ವ ಪಶ್ಚಿಮಗಳ ನಡುವಿನ ಅಂತರವೆ ಆಗಿದೆ. ಮುನಿಧರ್ಮಕ್ಕೆ ಸಹಜವಾದ ನೀತಿ ತತ್ವಗಳನ್ನಾಧರಿಸಿ ರಚಿತವಾದ ಜೈನಧರ್ಮವನ್ನು ವೇಬರ್ ಅವರು ಪಲಾಯನಧರ್ಮವೆಂದು ಕರೆದುದನ್ನು ಇಲ್ಲಿ ನೆನೆಯಬಹುದು.[೧೧]

ಮೂಲತಃ ಮುನಿತ್ವವು ಹುಟ್ಟಿನಿಂದ ಬರುತ್ತದೆಯಂದು ಹೇಳುವ ಮುನಿಧರ್ಮವು ಉತ್ತಮವಾದವನ್ನು ಪ್ರತಿಪಾದಿಸಿಕೊಂಡು ಬಂದಿದೆ. ಅದಕ್ಕೆ ಸೇರಿದ ಉತ್ತಮವಾದವು ಕುಲಶ್ರೇಷ್ಠತಾ ವಾದದ ಪ್ರಭಾವಕ್ಕೆ ಒಳಗಾಗಿದೆ. ಹುಟ್ಟಿನ ಜೊತೆಗೆ ತೃಪ್ತಿಕರವೂ ಪರಂಪರಾ ಪ್ರಿಯವೂ ಆದ ಕೌಟುಂಬಿಕ ಪರಿಸರ ಮತ್ತು ಮುನಿಗಳ ಸತ್‌ಸಂಗದ ಪ್ರಭಾವಗಳೂ ಸೇರಿಕೊಂಡು ಮುನಿತ್ವದ ನಿರ್ಮಾಣಕ್ಕೂ, ಯಶಸ್ಸಿಗೂ ಕಾರಣವಾಗುತ್ತದೆ. ದಂಡ ಮತ್ತು ಕಮಂಡಲುಗಳ ಸಾಂಕೇತಿಕ ಕೊಡುಗೆಗಳಿಂದ ಮುಕ್ತಾಯವಾಗುವ ಮುನಿದೀಕ್ಷೆಯ ನಂತರ ಮುನಿ ಜೀವನವು ಔಪಚಾರಿಕವಾಗಿ ಆರಂಭವಾಗುತ್ತದೆ. ಮುನಿಜೀವನವು ಹಕ್ಕು ಕಾರ್ಯಭಾರಗಳನ್ನು ಒಳಗೊಂಡಿದ್ದು ಹಕ್ಕುಗಳು ಆತನ ಅಧಿಕಾರವನ್ನು ಕಾರ್ಯಭಾರಗಳು ಆತನು ಮಾಡಲೇಬೇಕಾದ ಕರ್ತವ್ಯವನ್ನು ಸೂಚಿಸುತ್ತವೆ. ಮುನಿವೃಂದದ ಮೇಲ್ವಿಚಾರಣೆಯನ್ನು ಅವರು ತಪ್ಪಿದಲ್ಲಿ ಮಾರ್ಗದರ್ಶನ ಮಾಡುವುದನ್ನು ಅಧಿಕಾರವೂ ಸೂಚಿಸಿದರೆ ಅದು, ಕಾರ್ಯಭಾರಗಳನ್ನು ಅದರಲ್ಲೂ ಮುಖ್ಯವಾಗಿ ಸಾಮಾಯಿಕದಿಂದ ಆರಂಭವಾಗುವ ಆತನ ಕಾರ್ಯಾವನ್ನು ವಿವರಿಸುತ್ತದೆ. ಅಧಿಕಾರ ಮತ್ತು ಕಾರ್ಯಭಾರಗಳು, ಪಾರಮಾರ್ಥಿಕದ ಕಲ್ಯಾಣವನ್ನು ಸುತ್ತುವರೆದು ನಿಂತಿವೆ.

ಪ್ರಸ್ತುತ ಗದಗ ಪರಿಸರದಲ್ಲಿ ಮುನಿ ಸಂಸ್ಕೃತಿಯು ತೀರಾ ಕಡಿಮೆ ಮಟ್ಟದಲ್ಲಿ ಇದ್ದರೂ ಜೈನ ಧರ್ಮೀಯರು ತಮ್ಮ ಪರಂಪರೆಯನ್ನು ಗದಗ, ಲಕ್ಷ್ಮೇಶ್ವರ, ಮುಳಗುಂದ, ಹರ್ತಿ, ಸೊರಟೂರು, ಮುಂತಾದ ಸ್ಥಳಗಳಲ್ಲಿ ಬೆಳೆಸಿಕೊಂಡು ಬಂದಿದ್ದಾರೆ. ಜೈನ ಪರಂಪರೆಯ ನೆಲೆಬೀಡಾಗಿರುವ ಬಸದಿಗಳಲ್ಲಿ ಪೂಜೆ ಪುರಸ್ಕಾರಗಳನ್ನು ಮಾಡಿಕೊಂಡು ಹೋಗುತ್ತಿದ್ದಾರೆ. ಜೈನ ಧರ್ಮೀಯರು ಅಲ್ಲದೆ ಜೈನೇತರರು ಜೈನ ಧರ್ಮದ ಪರಂಪರೆಯನ್ನು ಗೌರವದಿಂದ ಕಾಣುತ್ತಾ ಸಾಗಿದ್ದಾರೆ ಎಂಬುದನ್ನು ಪ್ರಸ್ತುತ ಅಧ್ಯಯನದಿಂದ ಕಂಡುಕೊಳ್ಳಲಾಗಿದೆ. ಇಂದಿನ ಸಮಾಜಕ್ಕೆ ಬಹು ಅಮೂಲ್ಯವಾದ ತತ್ತ್ವಗಳನ್ನು ನೀಡಿದ ಜೈನ ಧರ್ಮವು ಪ್ರಸ್ತುತ ಸಮಾಜಕ್ಕೆ ಅವಶ್ಯಕವೆನಿಸಿದ ತತ್ತ್ವಗಳನ್ನು ನೀಡಿದ ಜೈನಧರ್ಮವು ಪ್ರಸ್ತುತ ಸಮಾಜಕ್ಕೆ ಅವಶ್ಯಕವೆನಿಸಿದ ಅಹಿಂಸೆ, ಪ್ರೀತಿ, ಅನುಕಂಪಗಳ ಅವಶ್ಯಕತೆಯನ್ನು ಅರಿಯಬಹುದಾಗಿದೆ. ಇದೆಲ್ಲವನ್ನು ಗಮನದಲ್ಲಿಟ್ಟುಕೊಂಡು ಮುನಿಗಳು ಸಮಾಜಮುಖಿಯಾಗಿ ಮುಂದುವರಿಯಲು ಆ ಮೌಲ್ಯಗಳನ್ನು ಇಂದಿನ ಸಮಾಜದಲ್ಲಿ ಮಾದರಿಯಾಗುವಂತೆ ಅನುಸರಿಸಿಕೊಂಡು ಕಾರ್ಯಗತಗೊಳಿಸುವಲ್ಲಿ ಮುನಿಗಳ ಪಾತ್ರ ಬಹುಮುಖ್ಯವಾಗಿದೆ. ಹೀಗೆ ಹಿಂದಿನ ಕಾಲದಿಂದ ಇಂದಿನವರೆಗೂ ತಮ್ಮ ವ್ಯಕ್ತಿತ್ವವನ್ನು ರೂಪಿಸಿಕೊಂಡು ಬಂದಿರುವ ಮುನಿ ಸಂಸ್ಕೃತಿಯು ಜೈನ ಪರಂಪರೆಯ ಪ್ರತೀಕವಾಗಿದ್ದಾರೆ.

***

---

೧೧. Max Weber, Religions of India. The Free Press, Glencoe Illinois 1958, pp.192-204.

ಅಧ್ಯಾಯ ೮

# ಸಮಾರೋಪ

ಬೆಳವೊಲ-೩೦೦ ಕುಂತಲ ದೇಶದಲ್ಲಿ ೩೦೦ ಗ್ರಾಮಗಳನ್ನೊಳಗೊಂಡ ಒಂದು ವಿಸ್ತಾರವಾದ ಆಡಳಿತ ವಿಭಾಗ ಈ ನಾಡಿನ ಮಧ್ಯವರ್ತಿ ಪ್ರದೇಶವಾದ ಗದಗ ಪರಿಸರವು ರಾಜಕೀಯ, ಧಾರ್ಮಿಕ, ಸಾಮಾಜಿಕ ಹಾಗೂ ಸಾಂಸ್ಕೃತಿಕ ಚಟುವಟಿಕೆಗಳ ಕೇಂದ್ರವಾಗಿದ್ದು. ಈ ಆಡಳಿತ ವಿಭಾಗದ ಉಪವಿಭಾಗಗಳಾದ ಜಿಣ್ಣೆದಡಿ-೭೦, ಚಿಂಚಲಿನಾಡು-೫೦, ಮುಳಗುಂದ ನಾಡು-೧೨, ಬೆಳ್ವಣಿಕೆ-೧೨, ನೆರೆಯಿಂಗಲ್ಲ-೧೨, ಕೂಳನೂರು-೮೦, ಕುಕನೂರು-೩೦, ಮಾಸವಾಡಿ-೧೪೦, ಪುಲಿಗೇರಿ-೩೦೦, ನವಲಗುಂದ-೪೦ ಇವುಗಳಲ್ಲಿ ಈಗಿನ ಗದಗ ಜಿಲ್ಲೆಯ ವ್ಯಾಪ್ತಿಯಲ್ಲಿ ನವಲಗುಂದ-೪೦, ಕುಕನೂರು-೩೦ ಪ್ರದೇಶಗಳನ್ನು ಹೊರತುಪಡಿಸಿ ಉಳಿದೆಲ್ಲ ಪ್ರದೇಶಗಳು ಈಗೀನ ಗದಗ ಜಿಲ್ಲೆಯ ವ್ಯಾಪ್ತಿಯೊಳಗೆ ಬರುತ್ತವೆ. ಪುಲಿಗೇರಿ-೩೦೦ರ ಕೆಲವು ಪ್ರದೇಶಗಳು ಹಾವೇರಿ ಹಾಗೂ ಧಾರವಾಡ ಜಿಲ್ಲೆಯ ವ್ಯಾಪ್ತಿಗೆ ಸೇರುತ್ತವೆ. ಆದ್ದರಿಂದ ಅಧ್ಯಯನದ ವ್ಯಾಪ್ತಿಯು ಪ್ರಾಚೀನ ಪರಿಸರದಿಂದ ಇಂದಿನ ಗದಗ ಜಿಲ್ಲೆಯ ಗ್ರಾಮಗಳಲ್ಲಿ ಹರಡಿಕೊಂಡಿವೆ. ಈ ಪರಿಸರದಲ್ಲಿ ಜೈನ ಪರಂಪರೆಯು ಬೆಳೆದ ಪರಿ ಹಾಗೂ ಸಾಂಸ್ಕೃತಿಕ ಹಿರಿಮೆಯನ್ನು ಕುರಿತು ಅಂದಿನಿಂದ ಇಂದಿನವರೆಗೆ ಜೈನ ಸಮುದಾಯಕ್ಕೆ ಆಶ್ರಯ ನೀಡಿದ ಅರಸರು, ದಾನಿಗಳು, ಮುನಿಗಳು ಹಾಗೂ ಶ್ರಾವಕ ವರ್ಗದಲ್ಲುಂಟಾದ ಏರಿಳಿತಗಳನ್ನು ಕುರಿತು ಅಧ್ಯಯನ ಕೈಗೊಳ್ಳಲಾಗಿದೆ.

ಭಾರತೀಯ ಸಂಸ್ಕೃತಿಕ ಪರಂಪರೆಯಲ್ಲಿ ಅವೈದಿಕವಾದ ಧರ್ಮವೊಂದು ಧಾರ್ಮಿಕ, ರಾಜಕೀಯ, ಸಾಮಾಜಿಕ ಹಾಗೂ ಸಾಂಸ್ಕೃತಿಕ ಪರಿಸರದಲ್ಲಿ ತನ್ನ ಪರಂಪರೆಯನ್ನು ಬೆಳೆಸಿದ ಕೀರ್ತಿಗೆ ಜೈನ ಧರ್ಮ ಪಾತ್ರವಾಗಿದೆ. ಉತ್ತರ ಭಾರತದಲ್ಲಿ ಜನಿಸಿ ದಕ್ಷಿಣದಲ್ಲಿ ಹೆಚ್ಚು ಪ್ರಚಾರವನ್ನು ಪಡೆದುಕೊಂಡ ಜೈನ ಧರ್ಮವು ಕ್ರಿ.ಪೂ. ಕಾಲದಲ್ಲೇ ಹೆಚ್ಚು ಪ್ರಚಾರವನ್ನು ಪಡೆದುಕೊಂಡ ಜೈನ ಧರ್ಮವು ಕ್ರಿ.ಪೂ. ಕಾಲ್ಲದಲೇ ಕರ್ನಾಟಕಕ್ಕೆ ಪ್ರವೇಶವಾಗಿ ಕಾಲಾನಂತರದಲ್ಲಿ

ಗದಗ ಪರಿಸರಕ್ಕೆ ಹಬ್ಬಿಕೊಂಡಿತ್ತು ಎಂಬುದು ಪ್ರಬಂಧದ ಮೊದಲ ಅಧ್ಯಾಯದಲ್ಲಿ ಮೂಲ ಆಕರಗಳಾದ ಶಾಸನಗಳು, ಸಾಹಿತ್ಯ ಕೃತಿಗಳ ಮೂಲಕ ದೃಢಪಡಿಸಲಾಗಿದೆ. ಕ್ರಿ.ಶ. ೪ನೇ ಶತಮಾನದಲ್ಲೆ ಗದಗ ಪರಿಸರದಲ್ಲಿ ಪ್ರವೇಶವಾದ ಜೈನಧರ್ಮ ೫ನೇ ಶತಮಾನದಿಂದ ೧೨ನೆಯ ಶತಮಾನದವರೆಗೆ ಹೆಚ್ಚು ಪ್ರಭಾವ ಹೊಂದಿತ್ತು. ಎಂಬುದನ್ನು ಈ ಭಾಗದಲ್ಲಿರುವ ಜೈನ ಸ್ಮಾರಕಗಳಾದ ಬಸದಿಗಳಿಂದಲೇ ಸ್ಪಷ್ಟವಾಗುತ್ತದೆ. ಕರ್ನಾಟಕ ಹೆಚ್ಚಿನ ಪ್ರಮಾಣದ ಜೈನ ಸಮುದಾಯ ಗದಗ ಪರಿಸರದಲ್ಲಿ ಅಂದಿನ ಕಾಲದಲ್ಲಿ ಇತ್ತು ಇಂದು ಅದರ ಪ್ರಮಾಣ ಕಡಿಮೆಯಾಗಿದೆ. ಯಾಕೆಂದರೆ ಅದಕ್ಕೆ ಈ ಭಾಗದಲ್ಲಂಟಾದ ಕಾರಣಗಳನ್ನು ಕುರಿತು ಪ್ರಸ್ತಾಪಿಸಲಾಗಿದೆ. ಈ ಹಿನ್ನೆಲೆಯಲ್ಲಿ ಗದಗ ಪ್ರದೇಶವನ್ನು ಸಂಶೋಧನೆಗೆ ಒಳಪಡಿಸಿದಾಗ ಇಲ್ಲಿ ಅನೇಕ ಅರಸುಮನೆತನಗಳು ಆಳಿ ಹೋಗಿದ್ದಾಗಿ ತಿಳಿದು ಬರುತ್ತದೆ. ಆ ಅರಸರನ್ನು ಆಶ್ರಯಿಸಿ ಹಲವಾರು ಜೈನ ಮಂತ್ರಿಗಳು, ವೀರರು, ಕವಿಗಳು, ಮುನಿಗಳು ಈ ಭಾಗದಲ್ಲಿ ಬಸದಿಗಳನ್ನು ಧಾರ್ಮಿಕ ಕೇಂದ್ರಗಳಾದ (ಬಸದಿ) ಜಿನಾಲಯಗಳ ನಿರ್ಮಾಣ ಮಾಡಿದ್ದಾರೆ. ಸಾಹಿತ್ಯ ಕೃತಿಗಳನ್ನು ರಚಿಸಿದ್ದಾರೆ. ಇವರೆಲ್ಲರನ್ನು ಕುರಿತು ಈ ಪ್ರಬಂಧದಲ್ಲಿ ಹೊಸ ಬೆಳಕು ಚೆಲ್ಲಲಾಗಿದೆ. ಇಲ್ಲಿ ಬಸದಿಗಳ ನಿರ್ಮಾಣ, ದಾನ ದತ್ತಿಗೆ ಪ್ರೇರಣೆ ನೀಡಿ ಸ್ವತಃತಾವೇ ವಾಡಿ ಬಹುದೊಡ್ಡ ಮುನಿಗಳ ಸಮುದಾಯ ಬೆಳೆದು ಬರುವಂತೆಯೂ ಅವರು ಪ್ರೋತ್ಸಾಹಿಸಿದ್ದಾರೆ. ಗದಗ ಪರಿಸರದಲ್ಲಿರುವ ಜೈನ ಧರ್ಮ ನೆಲೆಗಳನ್ನು ಕ್ಷೇತ್ರಾಧ್ಯಯನ ಮಾಡುವಾಗ ಚರಿತ್ರೆಯಲ್ಲಿ ದಾಖಲಾದ ಎಷ್ಟೋ ಜಿನಾಲಯಗಳು ಇಂದು ಕಾಣಸಿಗುವುದಿಲ್ಲ. ಇಲ್ಲವೆ ಆ ಸ್ಥಳದಲ್ಲಿ ಬೇರೆ ಧರ್ಮದ ದೇವಾಲಯಗಳು ನಿರ್ಮಾಣವಾಗಿವೆ.

ಇವುಗಳನ್ನೆಲ್ಲ ಸಂಶೋಧನೆಗೆ ಒಳಪಡಿಸಿದಾಗ ಹತ್ತು ಹಲವು ಕಾರಣಗಳು ಕಂಡು ಬಂದಿವೆ. ಅವುಗಳ ತುಲಾನಾತ್ಮಕವಾದ ವಿಶ್ಲೇಷಣೆಯನ್ನು ನನ್ನ ಈ ಪ್ರಬಂಧದಲ್ಲಿ ಕೈಗೊಂಡು ಈ ಭಾಗದಲ್ಲಿ ಜೈನ ಪರಂಪರೆಯ ಪ್ರಭಾವವನ್ನು ಕಂಡುಕೊಳ್ಳಲು ಪ್ರಯತ್ನಿಸಲಾಗಿದೆ. ಬೆಳವೊಲ-೩೦೦, ಪುಲಿಗೆರೆ-೩೦೦, ಮುಳಗುಂದ ನಾಡು-೧೨ ಈ ವಿಭಾಗ / ಉಪವಿಭಾಗಗಳ ನಕ್ಷೆ ಚಿತ್ರಗಳೊಂದಿಗೆ ಇಂದಿನ ಗದಗ ಜಿಲ್ಲೆ ನಕ್ಷೆ ಗದಗ ಜಿಲ್ಲೆಯ ಐದು ತಾಲೂಕುಗಳ ನಕ್ಷೆಗಳನ್ನು ಈ ಪ್ರಬಂಧದಲ್ಲಿ ಅಳವಡಿಸಿ ಅಧ್ಯಯನದ ವ್ಯಾಪ್ತಿಗೆ ಅನುಸಾರವಾಗಿ ಜೈನ ಧರ್ಮದ ನೆಲೆಗಳನ್ನು ಪರಿವರ್ತಿಸಲಾಗಿದೆ. ಈ ಸ್ಥಳಗಳ ಸ್ಥಳೀಯ ಇತಿಹಾಸದೊಂದಿಗೆ ಈ ಭಾಗಗಳಲ್ಲಿ ಆಳ್ವಿಕೆ ಮಾಡಿದ ಅರಸರು, ಅಧಿಕಾರಿಗಳು, ದಾನದತ್ತಿಗಳನ್ನು ನೀಡಿದರು, ಜಿನಾಲಯಗಳನ್ನು ನಿರ್ಮಿಸಿದವರನ್ನು ಸಾಹಿತ್ಯಿಕ ಹಾಗೂ ಐತಿಹಾಸಿಕ ದಾಖಲೆಗಳ ಮೂಲಕ ಸಂಗತಿಗಳನ್ನು ಪರಾಮರ್ಶಿಸಿ ವಿವರಣೆಗೊಳಪಡಿಸಲಾಗಿದೆ. ಕದಂಬರು, ಗಂಗರು, ಬದಾಮಿ ಚಾಲುಕ್ಯರು, ರಾಷ್ಟ್ರಕೂಟರು, ಕಲ್ಯಾಣದ ಚಾಲುಕ್ಯರು, ಕಲಚೂರಿಗಳು, ಹೊಯ್ಸಳರು, ವಿಜಯನಗರದ ಅರಸರು, ಜೈನ ಪರಂಪರೆಗೆ ಸಲ್ಲಿಸಿದ ಸೇವೆಯನ್ನು ಅವರು ನೀಡಿದ ದಾನ ದತ್ತಿಗಳನ್ನು ಪ್ರೋತ್ಸಾಹವನ್ನು ಇವರ ಕಾಲದಲ್ಲಿ ಈ ಪ್ರದೇಶದಲ್ಲಿ ಜೈನರ ಮೂಲಸಂಘ, ಯಾಪನೀಯ ಸಂಘ ಕೂರ್ಚಕ ಸಂಘ ಮತ್ತು ಶ್ವೇತ ಪಟ ಸಂಘಗಳು, ಗಣ ಗಚ್ಛ ಹಾಗೂ ಅನ್ವಯಗಳ ಮುನಿಗಳಿಗೆ ಆಚಾರ್ಯರಿಗೆ ನೀಡಿದ ಪ್ರೋತ್ಸಾಹಗಳನ್ನು ವಿವಿಧ ಆಕರಗಳ ಮೂಲಕ ಆಧಾರ ಸಹಿತ ವಿವರಿಸಿದೆ.

ಈ ಆಡಳಿತ ವಿಭಾಗದಲ್ಲಿ ಆಡಳಿತ ನಡೆಸಿದ ಗಂಗರು, ಬದಾಮಿ ಚಾಲುಕ್ಯರು, ಕಲ್ಯಾಣದ ಚಾಲುಕ್ಯರು, ರಾಷ್ಟ್ರಕೂಟರ ಕಾಲದಲ್ಲಿ ಗದಗ ಪರಿಸರದ ಹೆಚ್ಚು ಭಾಗವು ಇವರ ಆಳ್ವಿಕೆಗೆ ಒಳಪಟ್ಟಿತ್ತು ಇವರ ರಾಷ್ಟ್ರೀಯ ಧರ್ಮವಾದ ಜೈನ ಧರ್ಮವು ಹೆಚ್ಚು ಪ್ರಭಾವ ಹೊಂದಿತ್ತು ಎಂಬುದು ಕಂಡು ಬರುತ್ತದೆ. ಕಲ್ಯಾಣದ ಚಾಲುಕ್ಯರ ಹಾಗೂ ರಾಷ್ಟ್ರಕೂಟರ ಕಾಲದಲ್ಲಿದ್ದ ಆದಿಕವಿ ಪಂಪ, ಪೊನ್ನ, ಶಕ್ತಿಕವಿ ರನ್ನ, ಕನ್ನಡ ಸಾಹಿತ್ಯದ ಈ ಮೂರು ರತ್ನಗಳ ಕರ್ಮಭೂಮಿಯಾದ ಗದಗ ಪರಿಸರದ ಹೆಮ್ಮೆ. ಪುಲಿಗೇರಿಯ ತಿರುಳುಗನ್ನಡ ಭಾಷೆಯಲ್ಲಿ ಸಾಹಿತ್ಯ ರಚಿಸಿದ ಪಂಪನ ಜನ್ಮ ಮತ್ತು ಕರ್ಮ ಭೂಮಿಯಾಗಿ ಈ ಪರಿಸರವು ಜೈನ ಧರ್ಮದ ನೆಲೆಬಿಡಾಗಿತ್ತು ಎಂಬುದು ನಿರ್ವಿವಾದ ಅಜೀತಸೇನ ಆಚಾರ್ಯರ ಅನುಗ್ರಹ ರನ್ನ ಕವಿಯ ಕವಿತಾಶಕ್ತಿ ದಾನ ಚಿಂತಾಮಣಿ ಅತ್ತಿಮಬ್ಬೆಯು ಈ ಪರಿಸರಕ್ಕೆ ಹಾಗೂ ಜೈನ ಪರಂಪರೆಗೆ ಸಲ್ಲಿಸಿದ ಕೊಡುಗೆ ಅಪಾರ. ಅವರು ಹಾಕಿದ ಆ ಭದ್ರ ಪರಂಪರೆಯ ನೆರಳಿನಲ್ಲೇ ಇಂದಿಗೂ ಈ ಭಾಗದ ಜೈನ–ಜೈನೇತರರಲ್ಲಿ ಮೂಲ ಗುಣಗಳು ಹಾಸುಹೊಕ್ಕಾಗಿವೆ. ಎಂಬುದು ಕ್ಷೇತ್ರಕಾರ್ಯದ ಸಂದರ್ಭದಲ್ಲಿ ಕಂಡು ಬಂದಿತ್ತು. ಇಂಥಹ ನಾಡಿನಲ್ಲಿ ಜನಿಸಿ ಈ ಭಾಗದಲ್ಲಿ ಬೆಳೆದು ಬಂದ ಭವ್ಯ ಪರಂಪರೆಯು ಸಾರ್ವತ್ರಿಕ ಮೌಲ್ಯಗಳನ್ನು ತನ್ನ ಗರ್ಭದಲ್ಲಿಟ್ಟುಕೊಂಡು ಪ್ರಸ್ತುತ ಇಂದಿನ ಜಾಗತೀಕರಣಕ್ಕೆ ಸೆಡ್ಡು ಹೊಡೆದ ಅಹಿಂಸೆ, ಕರ್ಮಸಿದ್ಧಾಂತ, ಅಪರಿಗ್ರಹ ಮೌಲ್ಯಗಳ ಆಗರದ ಬೀಡು. ನಾನು ಗದಗ ಪರಿಸರದ ಜೈನ ಪರಂಪರೆಯ ಕುರಿತು ಸಂಶೋಧನೆ ಕೈಗೊಳ್ಳಲುತ್ತಿರುವಾಗ ಇಲ್ಲಿ ಕಂಡುಕೊಂಡ ಸತ್ಯಾಸತ್ಯತೆಗೆ ಬೆಳಕಾಗಿ ಇಲ್ಲಿ ಉಪಲಬ್ಧವಾದ ಮಾಹಿತಿಗಳಿಂದ, ವಿದ್ವಾಂಸರಿಂದ, ಮುಖಂಡರಿಂದ ಮಾಹಿತಿ ಸಂಗ್ರಹಿಸಿ ಅಧ್ಯಯನ ಕೈಗೊಂಡುದ್ದು ನನಗೆ ಸಂದ ಭಾಗ್ಯವೆನ್ನಬಹುದು.

ಕವಿಚರಿತೆಕಾರರು ವ್ಯಾಖ್ಯಾನಿಸಿದಂತೆ 'ಆದಿಕವಿ ಪಂಪನ ತಿರುಗನ್ನಡದ ಸೊಬುಗು, ಶಕ್ತಿಕವಿಯಾದ ರನ್ನನ ಋಣಭಾವ, ಶಾಸನಕವಿ ಮಲ್ಲಷೇಣನ ಶಾಸನದ ಸೊಗಸು, ನಯಸೇನ ಸೂರಿಯ ಧಾರ್ಮಿಕ ಪರಂಪರೆಯ ಆಚರಣೆಯ ನಿಷ್ಠೆ, ನಯಸೇನ ಕವಿಯ ಸಾಮಾಜಿಕ ಐತಿಹಾಸಿಕ ಒತ್ತಡಗಳ ಮನೋಭಾವ, ಶ್ರೀಧರಾಚಾರ್ಯರನು ಜ್ಯೋತಿಷ್ಯ ಶಾಸ್ತ್ರಕ್ಕೆ ನೀಡಿದ ಮೌಲ್ಯ ಕೃತಿಯ ನಿರ್ಮಾಣದ ಈ ಕರ್ಮಭೂಮಿಯು ಹಲವಾರು ವೈಶಿಷ್ಟ್ಯಗಳಿಂದ ಕೂಡಿತ್ತು' ಎಂಬುವುದನ್ನು ನನ್ನ ಮಹಾಪ್ರಬಂಧದಲ್ಲಿ ಅವರ ಐತಿಹಾಸಿಕ ದಾಖಲೆಗಳ ಮೂಲಕ ಚಿತ್ರಿಸಲಾಗಿದೆ. ಕನ್ನಡ ನಾಡಿಗೆ ಪುಸ್ತಕ ಪ್ರಕಾಶಕ್ಕೆ ೧೦ನೆಯ ಶತಮಾನದಲ್ಲಿ ಈ ಪರಿಸರವು ಮಾದರಿಯಾಗಿತ್ತು ಎಂಬುದನ್ನು ದಾನ ಚಿಂತಾಮಣಿ ಅತ್ತಿಮಬ್ಬೆಯ ಚರಿತ್ರೆಯನ್ನು ಇಲ್ಲಿ ಉಲ್ಲೇಖಿಸಲಾಗಿದ್ದು ಇಡೀ ಪ್ರಪಂಚಕ್ಕೆ ಮಾದರಿಯಾಗಿ ನಿಲ್ಲುವ ಪ್ರತಿಮೆ ಅತ್ತಿಮಬ್ಬೆಯದು. ಅಂಥಹ ಧೀರ ಅಪ್ರತಿಮಾ ವ್ಯಕ್ತಿತ್ವದ ಚೇತನಗಳ ಈ ಬೀಡಿನಲ್ಲಿ ಜೈನ ಪರಂಪರೆಯು ಬೆಳೆದು ಬಂದ ಬಗೆಯನ್ನು ಚಿತ್ರಿಸಲಾಗಿದೆ. ಮನಕ್ಕೆ ಮುದ ನೀಡುವ, ಮಿದುಳಿಗೆ ಜ್ಞಾನವನ್ನೊದಗಿಸುವ ನಮ್ಮ ಹೆಮ್ಮೆಯ ಗದಗ ಪರಿಸರದಲ್ಲಿ ಸಾಹಿತ್ಯಿಕವಾಗಿ ಸಂಪದ್ಭರಿತವಾಗಿತ್ತು ಎಂಬುದನ್ನು ಆದಿಕವಿಯಿಂದ ಇಂದಿನ ಆಧುನಿಕ ಕವಿಗಳು ಈ ಪರಿಸರಕ್ಕೆ ಜೈನ ಪರಂಪರೆಗೆ ಸಲ್ಲಿಸಿದ ಕೊಡುಗೆಗಳನ್ನು ಹಾಗೂ ಕನ್ನಡ ಸಾಹಿತ್ಯ ಕ್ಷೇತ್ರಕ್ಕೆ

ನೀಡಿದ ಅಪಾರ ಸೇವೆಯನ್ನು ಮಹಾಪ್ರಬಂಧದಲ್ಲಿ ಅಳವಡಿಸಿಕೊಂಡು ವಿಶ್ಲೇಷಣೆ ಮಾಡಲಾಗಿದೆ. ಇನ್ನು ಎಷ್ಟು ಕವಿಗಳು ಎಲೆಮರೆಯ ಕಾಯಿಯಂತೆ ಸಾಹಿತ್ಯಿಕ ಸೇವೆಯನ್ನು ಸಲ್ಲಿಸುತ್ತಿದ್ದಾರೆ. ಕಾಲಗರ್ಭದಲ್ಲಿ ಭೂಗರ್ಭದಲ್ಲಿ ಹೂತುಹೋದ ಇತಿಹಾಸ ಇಂದಿನ ಜೀವಂತ ಇತಿಹಾಸಗಳೆರಡನ್ನು ಕಟ್ಟಿಕೊಡಬೇಕಾದ ಸಾಧ್ಯತೆಯಿಂದ ಈ ಪ್ರಬಂದದಲ್ಲಿ ಎರಡು ಅಂಶಗಳಿಗೆ ಅನುಗುಣವಾಗಿ ಕವಿಗಳ ಹಾಗೂ ಕೃತಿಗಳ ವಿವರಣೆ ಕೈಗೊಳ್ಳಲಾಗಿದೆ. ಈ ಕೃತಿಗಳು ಆ ಸಾಧ್ಯತೆಗಳ ಕಡೆ ಕೈ ಮಾಡಿ ತೋರಿಸಬಲ್ಲುದೆಂಬುದೇ ಈ ಅಧ್ಯಯನದ ಸಾರ್ಥಕತೆ ಎನಿಸಿದೆ.

ಪ್ರಾಚೀನ ಕಾಲದಿಂದಲೂ ಕಲೆ-ಸಾಹಿತ್ಯ-ಸಂಸ್ಕೃತಿ-ಆಧ್ಯಾತ್ಮಿಕ ಹಾಗೂ ಔದ್ಯೋಗಿಕ ಕ್ಷೇತ್ರಗಳಲ್ಲಿ ತನ್ನದೇ ಆದ ವಿಶಿಷ್ಟ ಸ್ಥಾನ ಪಡೆದ ಈ ಪ್ರದೇಶವು ನಿಸರ್ಗ ಸೌಂದರ್ಯದ ನೆಲೆವಿಡು, ಶಿಲ್ಪಕಲೆಯ ತವರೂರು ಎಂಬುವುದಕ್ಕೆ ಈ ಭಾಗದಲ್ಲಿರುವ ದೇವಾಲಯ ಬಸದಿಗಳು ಆಧಾರಗಳನ್ನು ಒದಗಿಸುತ್ತವೆ. ಲಕ್ಕುಂಡಿಯ ಬ್ರಹ್ಮಜಿನಾಲಯ, ಮುಳಗುಂದದ ಚಂದ್ರಪ್ರಭ ಬಸದಿ, ಪಾರ್ಶ್ವನಾಥ ಬಸದಿ, ಲಕ್ಷ್ಮೇಶ್ವರದ ಶಂಖಜಿನಾಲಯ, ಅನಂತನಾಥ ಬಸದಿ ಸೊರಟೂರಿನ ಬಲದೇವ ಬಸದಿಗಳು ಪ್ರಾಚೀನ ಸ್ಮಾರಕಗಳೆನಿಸಿದ್ದು ಇಂದಿಗೂ ಸಹ ಜೈನ ಧರ್ಮೀಯರ ಪ್ರಮುಖ ಧಾರ್ಮಿಕ ಕೇಂದ್ರಗಳಾಗಿವೆಂಬುದನ್ನು ಕ್ಷೇತ್ರಕಾರ್ಯದ ಮೂಲಕ ಅಧ್ಯಯನ ಕೈಗೊಂಡು ಸಿಕ್ಕ ಮೂಲ ಆಕರಗಳಿಂದ ವಿವರಣೆ ಕೈಗೊಳ್ಳಲಾಗಿದೆ. ಸಂಸ್ಕೃತಿಯ ವೃತ್ತಿ ಸಂಪನ್ನರಾದ ಮುನಿಗಳು ಈ ಭಾಗದಲ್ಲಿ ಜೈನ ಪರಂಪರೆಯು ಪಸರಿಸುವುದಕ್ಕೆ ಮೂಲ ಕಾರಣಿಭೂತರೆಂಬುದನ್ನು ಅವರು ಅನುಸರಿಸಿಕೊಂಡು ಬಂದ ವ್ರತ ನಿಯಮ ಪರಿಪಾಲನೆ ಆಚರಣೆಗಳು ಹಾಗೂ ಜನಸಾಮಾನ್ಯರೊಂದಿಗಿನ ಒಡನಾಟ. ಆ ಕಾಲದ ಜೈನ-ಜೈನೇತರರ ಸಂವೇದನೆಗಳನ್ನು ಕುರಿತು ಜೈನ ಪರಂಪರೆಯನ್ನು ಬೆಳೆಸುವಲ್ಲಿ ಈ ಮುನಿಗಳ ಪ್ರಭಾವವನ್ನು ವಿವರಿಸಲಾಗಿದೆ. ಸಮಾಜ ಸುಧಾರಕರಾಗಿ ಜನರನ್ನು ಸನ್ಮಾರ್ಗದಲ್ಲಿ ಧರ್ಮಾಧಿಕಾರಿಗಳಾಗಿ ಈ ಮುನಿಗಳು ನಿರ್ವಹಿಸಿದ ಪಾತ್ರವನ್ನು ಕುರಿತು ವಿವೇಚಿಸಲಾಗಿದೆ. ಇಂಥಹ ಒಂದು ಪ್ರಾಚೀನ ಧರ್ಮವು ಇಂದಿಗೂ ತನ್ನ ಪಾರಮ್ಯವನ್ನು ಉಳಿಸಿಕೊಂಡು ಬರುವುದಕ್ಕೆ ಮೂಲ ಪ್ರೇರಣೆಯಾದ ಈ ಯತಿ ಮುನಿಗಳು ಈ ಪರಿಸರಕ್ಕೆ ಜೈನ ಪರಂಪರೆಗೆ ನೀಡಿದ ಅಪಾರ ಸೇವೆಯನ್ನು ತುಲನಾತ್ಮಕವಾಗಿ ಅಧ್ಯಯನಕ್ಕೆ ಒಳಪಡಿಸಲಾಗಿದೆ.

ಉಪಲಬ್ದ ಪ್ರಥಮ ಶಾಸನ ಕವಿ ನಾಗಮುದ್ದ (೩೯೯) ನೀಲಗುಂದದವನು. 'ಬರೆ ಪದಬಲ್ಮಗ' ಎನಿಸಿಕೊಂಡ ಸಾವಿಯಣ್ಣ (೯೭೯) ಮುಳಗುಂದದವನು. ಬಾಹುಬಲಿ (೧೦೦೭) ಲಕ್ಕುಂಡಿಯವನು. 'ಉಭಯ ಕವೀಂದ್ರ ಕವಿರಾಜ ವಲ್ಲಭ' ಬಿರುದಾಂಕಿತ ವೆಣ್ಣೆಯಭಟ್ಟ (೧೦೧೦) ಆಲೂರಿನವನು. 'ವಾಗ್ ಶ್ರೀ ಲಲಾಟಾಮಣಿಮಯ ಪಟ್ಟಂ' ಬಿರುದಾಂಕಿತ ಮಾಧವ ಭಟ್ಟ ಸೊರಟೂರಿನವನು. ಇತ್ಯಾದಿ ಖ್ಯಾತನಾಮರು ಈ ಪರಿಸರದ ಶಾಸನ ಕವಿಗಳು ಮಹಾದಾರ್ಶನಿಕ ಅನುಬಾವಿ ಅಲ್ಲಮ ಪ್ರಭುವಿನೊಡನೆ ಘನ ಗಂಭೀರ ತಾತ್ವೀಕ ವಿಷಯಗಳ ಕುರಿತು ಸಂವಾದ ನಡೆಯಿಸಿದ ವಚನಕಾರ್ತಿ ಮುಕ್ತಾಯಕ್ಕ ಆಕೆಯಣ್ಣ ಅಜಗಣ್ಣ, ರೂಪಕ ಸಾಮ್ರಾಜ್ಯದ ಚಕ್ರವರ್ತಿ ಕುಮಾರವ್ಯಾಸನ ಕರ್ಮಭೂಮಿ, ಚಾಮರಸನ ಜನ್ಮಭೂಮಿ, ದುರ್ಗಸಿಂಹ, ಅನುಭಾವಿ ಕವಿ ಬಾಲಲೀಲಾ

ಮಹಾಂತ ಶಿವಯೋಗಿಗಳು ಬೀಡು ಈ ಪರಿಸರ ಆಧುನಿಕದಲ್ಲಿ ಕರ್ನಾಟಕ ಏಕೀಕರಣಕ್ಕೆ ನಾಂದಿ ಹಾಡಿದ ನಾಡಗೀತೆಯ ರಚನೆಕಾರ ಕನ್ನಡದ ಕುಲಪುರೋಹಿತ ಆಲೂರು ವೆಂಕಟರಾಯರು, ಹುಯಿಲಗೋಳ ನಾರಾಯಣರಾಯರು ನಾಡೋಜ ಹಾಗೂ ಪಂಪ ಪ್ರಶಸ್ತಿ ಪುರಸ್ಕೃತರಾದ ಚಂಬೆಳಕಿನ ಕವಿ ಚನ್ನವೀರ ಕಣವಿ, ವಿಮರ್ಶಕರಾದ ಕೀರ್ತಿನಾಥ ಕುರ್ತಕೋಟಿ, ಜಿ. ಎಸ್. ಆಮೂರ, ಗಿರಡ್ಡಿ ಗೋವಿಂದರಾಜ, ಆರ್. ಸಿ. ಹಿರೇಮಠ, ಎಸ್. ಎಸ್. ಭೂಸನೂರಮಠ, ಎನ್ಕೆ ಕುಲಕರ್ಣಿ, ಸೋಮಶೇಖರ ಇಮ್ರಾಪೂರ, ಬಿ. ವಿ. ಮಲ್ಲಾಪುರ, ಎಂ. ಎಸ್. ಸುಂಕಾಪುರ ಮುಂತಾದ ಸಾಹಿತ್ಯ ಶ್ರೇಷ್ಠರಿಂದ ಈ ಭಾಗದಲ್ಲಿನ ಇನ್ನೂ ಹಲವಾರು ಕವಿಗಳು ತಮ್ಮ ಕೃತಿಗಳ ಮೂಲಕ ಕನ್ನಡ ಸಾಹಿತ್ಯಕ್ಕೆ ಅಮೂಲ್ಯ ಸೇವೆಯನ್ನು ಸಲ್ಲಿಸಿದ್ದಾರೆ. ಜೈನ ಜೈನೇತರರಿಂದಲೂ ಈ ಪರಿಸರದ ಸಾಹಿತ್ಯಿಕ ಸೊಗಡು ತನ್ನದೇ ಆದ ಪ್ರಭಾವವನ್ನುಂಟು ಮಾಡಿದೆ. ಜೈನ ಕವಿಗಳಂತೆ ಜೈನೇತರರ ಈ ಕೊಡುಗೆಯೂ ಅದ್ವಿತೀಯ ವೆನಿಸಿದೆ. ಈ ಮಹಾಪ್ರಬಂಧದ ವ್ಯಾಪ್ತಿಗೆ ಕೇವಲ ಜೈನ ಕವಿಗಳನ್ನು ಅವರ ಕೃತಿಗಳನ್ನು ಪರಿಗಣಿಸಲಾಗಿದ್ದು ಜೈನೇತರ ಕವಿಗಳನ್ನು ಸ್ಮರಿಸಲಾಗಿದೆ.

ಗದಗ ಪರಿಸರದಲ್ಲಿರುವ ಬಸದಿಗಳು, ವಿಗ್ರಹ, ಉಬ್ಬುಶಿಲ್ಪಗಳ ಮೂರ್ತಿಶಿಲ್ಪಗಳನ್ನು ಕುರಿತು ಮೂರ್ತಿ ಶಾಸ್ತ್ರಜ್ಞರು ಹಾಗೂ ಶಿಲ್ಪ ತಜ್ಞರನ್ನು ಅಧ್ಯಯನ ಮಾಡಲು ಪ್ರೇರೇಪಿಸುತ್ತವೆ. ಹೊಸ ಹೊಸ ಓದಿನೊಂದಿಗೆ ಯೋಚನೆಗಳೊಂದಿಗೆ ಇನ್ನಷ್ಟು ಅಂಶಗಳನ್ನು ಹೊರಚಲ್ಲಬಹುದು. ಈ ಭಾಗದಲ್ಲಿ ದೊರೆತಿರುವ ಮತ್ತು ದೊರೆತ ಅಪ್ರಕಟಿತ ಶಾಸನಗಳ ತಲಸ್ಪರ್ಶಿ ವಿಮರ್ಶೆ ನಡೆಯಬೇಕಿದೆ. ಇದರಿಂದ ಇನ್ನಷ್ಟು ಸಂಗತಿಗಳು ಹೊರಹೊಮ್ಮಬಹುದು. ಈ ಭಾಗದಲ್ಲಿನ ಜೈನ ಪರಂಪರೆಯ ಕುರಿತು ಬೆಳಕು ಚೆಲ್ಲಬಹುದು.

ಆಧುನಿಕ ಜಗತ್ತಿನ ಮಹತ್ವದ ಘಟನೆಗಳಲ್ಲೊಂದಾದ ನಮ್ಮ ದೇಶದ ಸ್ವಾತಂತ್ರ್ಯ ಸಂಗ್ರಾಮದಲ್ಲಿ ಗದಗ ಜಿಲ್ಲೆ ಮಹತ್ವದ ಪಾತ್ರ ನಿರ್ವಹಿಸಿದೆ. ಇಲ್ಲಿನ ಅನೇಕ ಜನ ತಮ್ಮ ತನು ಮನ ಧನ ತ್ಯಾಗ ಮಾಡಿದ್ದಾರೆ. ಅವರಲ್ಲಿ ಗದಗ ಪರಿಸರದ ಜನ ಸಾಮಾನ್ಯರೂ ಬಹಳ ಜನರಿದ್ದರೆಂಬುದು ಗಮನಾರ್ಹವಾಗಿದೆ. ಹೀಗೆ ಈ ಭಾಗದ ಜೈನರು-ಜೈನೇತರರು ತನು-ಮನ-ಧನದೊಂದಿಗೆ ತ್ಯಾಗ ದಾನ ಮೌಲ್ಯಗಳನ್ನು ಬೆಳೆಸಿಕೊಳ್ಳಲು ಇಲ್ಲಿನ ಧಾರ್ಮಿಕ ಪರಿಸರವು ಪ್ರಮುಖ ಕಾರಣವೆಂಬುದು ಇಂದಿನ ಈ ಭಾಗದ ಸಾಮಾಜಿಕ ವ್ಯವಸ್ಥೆಯನ್ನು ಕಂಡಾಗ ತಿಳಿದು ಬರುತ್ತದೆ. ದಾನಚಿಂತಾಮಣಿಯ ದಾನಮೌಲ್ಯ ತ್ಯಾಗ ಗುಣಗಳು ಇಲ್ಲಿನ ಜನ ಸಾಮಾನ್ಯರಲ್ಲಿ ಮೈದಳೆದಿವೆಂಬುದು ಅವರ ಮನೋಭಾವಗಳಿಂದ ಕಾರ್ಯಗಳಿಂದ ಕಂಡು ಬರುತ್ತದೆ. ಮಹಾಪ್ರಬಂಧ ಏಳನೆಯ ಅಧ್ಯಾಯವು ಈ ಪರಿಸರ ಆಧುನಿಕ ಸಾಮಾಜಿಕ ಚಿತ್ರಣ ನೀಡುತ್ತದೆ. ಅದರಲ್ಲಿಯೂ ಎಲ್ಲಾ ಧರ್ಮೀಯರೂ ಪ್ರೇರಣೆ ಪಡೆದ ಧರ್ಮವಾದ ಜೈನ ಧರ್ಮದ ಸಮಾಜ ವ್ಯವಸ್ಥೆಯಲ್ಲುಂಟಾದ ಸ್ಥಿತ್ಯಂತರಗಳನ್ನು ವಿವೇಚಿಸಲಾಗಿದೆ.

ಗದಗ ಪರಿಸರದಲ್ಲಿ ಜೈನ ಧರ್ಮವು ಆದಿಕದಂಬರ ಕಾಲದಿಂದ ವಿಜಯನಗರ ಅರಸರ ಆಳ್ವಿಕೆಯ ಕೊನೆಯವರೆಗೆ ಅನುಪಮ ಸಾಮರಸ್ಯದಿಂದ ಬೆಳೆಯುತ್ತ ಇಂದಿಗೂ ಉತ್ತಮ ಸ್ಥಿತಿಯಲ್ಲಿರುವುದು ಇತರ ಎಲ್ಲಾ ಧರ್ಮೀಯರಿಗೂ ಅನುಕರಣೀಯ ಮತ್ತು ಪ್ರಶಂಸನೀಯ. ವೃಷಭನಾಥನ ವರ್ಣ ವ್ಯವಸ್ಥೆಯಿಂದ.

ಕರ್ಮಸಿದ್ಧಾಂತದಿಂದ ಹಿಡಿದು ಇಂದಿನ ಸಂವಿಧಾನ ಬದ್ಧ ವ್ಯವಸ್ಥೆಯಲ್ಲಿ ಸಮಾಜದಲ್ಲಿ ಎಲ್ಲ ಧರ್ಮೀಯರೊಂದಿಗೆ ಸಾಮರಸ್ಯದಿಂದ ಬದುಕುತ್ತಿರುವ ಒಂದೇ ಒಂದು ಧರ್ಮ ಧರ್ಮೀಯರು ಎಂದರೆ ಜೈನರು. ಇದಕ್ಕೆ ಐತಿಹಾಸಿಕ ಪುರಾವೆಗಳು ಆಧಾರಗಳನ್ನು ಒದಗಿಸುತ್ತವೆ. ಜೈನ ಧರ್ಮದ ಪಂಥಗಳಾದ ದಿಗಂಬರ, ಶ್ವೇತಾಂಬರ, ಯಾಪನೀಯ ಪಂಥಗಳು ಈ ಭಾಗಗಳಲ್ಲಿ ಹೆಚ್ಚು ಪ್ರಚಲಿತ ಹೊಂದಿದ್ದವು. ಈ ಭಾಗದಲ್ಲಿ ಪ್ರಾರಂಭದಿಂದ ಇಂದಿನವರೆಗೆ ಹಚ್ಚು ರೂಢಿಯಲ್ಲಿರುವ ಪಂಥ ದಿಗಂಬರ ಪಂಥ, ಶ್ವೇತಾಂಬರರು ಬಹಳ ಕಡಿಮೆ ಇದ್ದಾರೆ. ದಿಗಂಬರ ಪಂಥದವರೇ ಹೆಚ್ಚಾಗಿರುವ ಗದಗ, ಮುಳಗುಂದ, ಬನ್ನಿಕೊಪ್ಪ, ಲಕ್ಷ್ಮೇಶ್ವರ, ಹರ್ತಿ, ಸೊರಟೂರು, ಶಿರಹಟ್ಟಿ, ಗಜೇಂದ್ರಗಡ, ರೋಣ ಮುಂತಾದ ಸ್ಥಳಗಳಲ್ಲಿ ಇಂದಿಗೂ ಈ ಪಂಥದ ಆಚರಣೆಗಳು ವ್ರತಗಳು ರೂಢಿಯಲ್ಲಿವೆ. ಗದಗ ಜಿಲ್ಲಾ ದಿಗಂಬರ ಸಂಘವು ರಚನೆಯಾಗಿದ್ದು ಇದರ ಮೂಲಕ ಜೈನರು ಒಗ್ಗಟ್ಟಿನಿಂದ ಮುನ್ನುಗ್ಗುತ್ತಿದ್ದಾರೆ. ಒಂದು ಕಾಲದಲ್ಲಿ ಈ ಭಾಗವು ಸಂಪೂರ್ಣವಾಗಿ ಯಾಪನೀಯ ಪಂಥವೂ ಆವರಿಸಿಕೊಂಡಿತ್ತು. ಅದು ನಶೀಸಿದ ಮೇಲೆ ಯಾಪನೀಯರೆಲ್ಲರು ಮತಾಂತರ ಹೊಂದಿ ಬಣಿಜಗರಾಗಿ, ಸಾದರು, ಒಕ್ಕಲಿಗರಾಗಿ ವೀರಶೈವ ಪಂಗಡಕ್ಕೆ ಸೇರಿಕೊಂಡು ಬಿಟ್ಟಿದ್ದಾರೆ. ಆದ ಕಾರಣ ಜೈನರು ಅಲ್ಪ ಸಂಖ್ಯಾತರಾಗಲು ಇದು ಒಂದು ಕಾರಣವೆನ್ನಬಹುದು.

ಕನ್ನಡ ನಾಡಿನ ಅರಿವಿನ ಕಣಜಕ್ಕೆ ಯಾಪನೀಯರ ದತ್ತಾಂಶ ಮಹತ್ವದ್ದಾಗಿದೆ. ಅವರು ವಿಚಾರವಾದಿಗಳು, ಉದಾರವಾದಿಗಳು, ಮಾನವೀಯ ಸ್ಪಂಧನವಿದ್ದ ಸಮನ್ವಯವಾದಿಗಳು. ಗದಗದ ಕರ್ನಾಟಕದ ಅಷ್ಟೇ ಏಕೆ ದಕ್ಷಿಣ ಭಾರತ ಚರಿತ್ರೆಯಲ್ಲಿ ಜೈನ ಧರ್ಮದ ಪ್ರಭಾವನೆ ಮತ್ತು ಪುನರುಜ್ಜೀವನದ ಉತ್ಥಾನಕ್ಕೆ, ಉಜ್ವಲವಾದ ಸ್ಥಾನಮಾನ ನಿರ್ದೇಶನಕ್ಕೆ ಯಾಪನೀಯರ ಪರಿಶ್ರಮ ಗಣನೀಯವಾಗಿ ಕಾಣುತ್ತದೆ. ಜೈನಧರ್ಮ, ಸಾಹಿತ್ಯ, ಕಲೆ, ಸಮಾಜ, ಸಂಸ್ಕೃತಿಯ ಅಧ್ಯಯನದಿಂದ ಯಾಪನೀಯರ ಕೊಡುಗೆ ಮತ್ತು ವಹಿಸಿದ ಪಾತ್ರವನ್ನು ಹೊರತುಪಡಿಸಿದರೆ ಉಳಿಯುವುದು ಬರಡಾಗಬಹುದು. ಕನ್ನಡ ಸಾಹಿತ್ಯದಿಂದ ಜೈನ ಸಾಹಿತ್ಯವನ್ನು ಹೊರಗಿಟ್ಟುನೋಡಿದಾಗ ಹೇಗೆ ಮಹತ್ವದ ಭಾಗವನ್ನು ಸುಲಿದಿಟ್ಟ ಅನುಭವ ಆಗುತ್ತದೋ ಹಾಗೆ ಗದಗದ ಜೈನ ಪರಂಪರೆಯ ಚರಿತ್ರೆಯಾದ ಯಾಪನೀಯರ ಭಾಗವನ್ನು ಪ್ರತ್ಯಕ್ಷಿಸಿದಾಗಲೂ ಕೊರತೆಯ ಅನುಭಾವ ಆಗುತ್ತದೆ. ಈ ವಿವರಣೆಯು ಗದಗ ಪರಿಸರದಲ್ಲಿ ಯಾಪನೀಯರ ಪ್ರಾಮುಖ್ಯವನ್ನು ಅಸ್ಖಲಿತವಾಗಿ ಸ್ಥಾಪಿಸುತ್ತದೆ. ಜೈನ ಮುನಿಗಳು, ಕವಿಗಳು, ಕಾವ್ಯಗಳು, ಬಸದಿಗಳು – ಎಲ್ಲೆಲ್ಲೂ ಯಾಪನೀಯರದೇ ಮೇಲುಗೈ. ಕ್ರಿ.ಶ. ೬ನೇ ಶತಮಾನದಿಂದ ೧೨ನೆಯ ಶತಮಾನದ ತನಕ ಈ ಭಾಗದಲ್ಲಿ ಅವರದೇ ಪಾಠ ಪ್ರವರಗಳು ಮಿನುಗುತ್ತವೆ. ಎಷ್ಟೇ ವಿಫುಲವಾದ ಮತ್ತು ವ್ಯವಸ್ಥಿತವಾದ ಲಿಖಿತ ಆಧಾರಗಳು ಯಾಪನೀಯರನ್ನು ಕುರಿತು ಉಪಲಬ್ಧ ಇದೆಯೆಂದರೆ 'ಯಾಪನೀಯ ಮತ್ತು ಕರ್ನಾಟಕ' ಎಂಬ ವಿಷಯವಾಗಿ ಮಹಾಪ್ರಬಂಧವನ್ನು ಸಿದ್ಧಪಡಿಸಬಹುದು.

ಬ್ರಹ್ಮಶಿವನು ಯಾಪನೀಯ ಲೇಖಕರ ಶಿರೋಮಣಿ ಸಮಯ ಪರೀಕ್ಷೆ ಎಂಬ ಹೆಸರಿನ ಆತನ ಕಾವ್ಯ ಯಾಪನೀಯ ಸಿದ್ಧಾಂತದ ಸಾರ ಸರ್ವಸ್ವ, ಯಾಪನೀಯರು ಸ್ತ್ರೀಪರ ಜನಪರ ನಿಲುವು, ಒಲವು, ಪ್ರವೃತ್ತಿಗಳಿಂದ

ಪ್ರವರ್ಧಮಾನಕ್ಕೆ ಬಂದವರು. ಅವರ ಜನಪರ ನಿಲುವನ್ನು ಕಾವ್ಯವಾಗಿಸಿ ಬರೆದವನು ಬ್ರಹ್ಮಶಿವ. ಅವರ ಸ್ತ್ರೀಪರ ಕಾಳಜಿಗಳನ್ನು ಕಾವ್ಯವಾಗಿಸಿ ಬರೆದವನು ರನ್ನ ತನಗೆ ಕವಿಚಕ್ರವರ್ತಿ ಪ್ರಸಸ್ತಿ ನೀಡಿದ ಚಕ್ರವರ್ತಿಗಳು ಇನ್ನೂ ಜೀವಿಸಿರುವ ಕಾಲದಲ್ಲಿಯೇ ದಾನಚಿಂತಾಮಣಿಯುಅವರೆಲ್ಲರಿಗೂ ಮೀರಿಸುತ ಹೈಮಾಚಲೋನ್ನತಳೆಂದು ನೂರಾರು ಪದ್ಯಗಳಲ್ಲಿ ಅತ್ತಿಮಬ್ಬೆಯ ಪುತ್ಥಳಿಯನ್ನು ನಿಲ್ಲಿಸುವುದಕ್ಕೆ ಸಾಧ್ಯವಾದದ್ದು. ಈ ಯಾಪನೀಯ ಪರಂಪರೆಯ ಪ್ರಭಾವ. ಪೊನ್ನರನ್ನರು ಯಾಪನೀಯಕ್ಕೆ ಸ್ಪಂದಿಸಿದರೂ ಅವರು ದಿಗಂಬರತ್ವದಲ್ಲಿ ಕಾಲೂರಿ ನಿಂತಿದ್ದರು. ಅತ್ತಿಮಬ್ಬೆಯ ತವರೂರು, ಗಂಡನೂರು ಎರಡೂ ಕಡೆ ಯಾಪನೀಯ ಪ್ರಭಾವವಿತ್ತು. ಪೊನ್ನ ರನ್ನ ಬ್ರಹ್ಮಶಿವ ಮೊದಲಾದ ಕವಿಗಳೂ ಅತ್ತಿಮಬ್ಬೆಯಂಥ ಮಂದರೋನ್ನತರೂ ಧರ್ಮ ಪ್ರಭಾವನೆ ಮಾಡುತ್ತ ಮುಂದಾಳುಗಳಾಗಿದ್ದುದರಿಂದ ಅವರ ಮೇಲಾಳಿಕೆಯಲ್ಲಿ ಯಾಪನೀಯ ಮತ್ತು ದಿಗಂಬರ ಪಂಥ ಸಂಘ ಸಮುದಾಯದಲ್ಲಿ ಸುಮಧುರ ಸಂಬಂಧ ಸ್ಥಾಪಿತವಾಗಿರಬಹುದು. ಜೈನ ಸಮುದಾಯದಲ್ಲಿ ಮುನಿಗಳಿಗೆ ಉನ್ನತ ಸ್ಥಾನವಿದೆ. ಜೈನಮುನಿಗಳಿಗೆ ಅಹಿಂಸೆಯ ಪಾಲನೆಗೆ ಕಟ್ಟುನಿಟ್ಟಾದ ಆದೇಶವಿದೆ. ಆದರೆ ಗ್ರಹಸ್ಥರು ವಿರೋಧಿ ಹಿಂಸೆ ಹಾಗೂ ಆರಂಭ ಹಿಂಸೆಗಳನ್ನು ಮಾಡಬಹುದು. ಅಂದರೆ ವೈರಿಗಳು ತನ್ನ ಮೇಲೆ ದೇಶದ ಮೇಲೆ, ತನ್ನ ಹೆಂಡತಿ ಆಸ್ತಿ ಮುಂತಾದವುಗಳ ಮೇಲೆ ಆಕ್ರಮಣವೆಸಗಿದಾಗ ರಕ್ಷಿಸಿಕೊಳ್ಳಲು ಗ್ರಹಸ್ಥರು ಪ್ರತಿಹಿಂಸೆಯಲ್ಲಿ ತೊಡಗಬಹುದು. ಇಲ್ಲಿ ಜೈನರು ಇಹಜೀವನದ ವಾಸ್ತವತೆಯನ್ನು ಅರಿತುಕೊಂಡು ಅದಕ್ಕೆ ತಕ್ಕಂತೆ ತಮ್ಮ ನೀತಿ ಸಂಹೀತೆಯನ್ನು ರಚಿಸಿದ್ದಾರೆ. ಹಾಗೆಯೇ ಆರಂಭ ಹಿಂಸೆ ಎಂದರೆ ವ್ಯವಸಾಯ ಮುಂತಾದ ಕಾರ್ಯಗಳನ್ನು ಮಾಡುವಾಗ ಗೃಹಸ್ಥನು ಆರಂಭದಲ್ಲಿ ಪಶುಗಳಿಗೆ ಕಿಂಚಿತ್ ಹಿಂಸೆ ನೀಡುವದು ಅನಿವಾರ್ಯವಾಗುತ್ತದೆ. ಹೀಗೆ ಅನಿವಾರ್ಯವಾದ ಜೀವನ ವ್ಯಾಪಾರಕ್ಕೆ ಅನುಕೂಲವಾದ ಸಂದರ್ಭಗಳಲ್ಲಿ ಮಾತ್ರ ಸಂಕಲ್ಪವಿಲ್ಲದೇ ಮಾಡಿದ ಹಿಂಸೆಗೆ ಪಾಪದ ತೀವ್ರ ಸ್ಪರ್ಶವಿಲ್ಲ ಆದರೆ ಯಾರೂ ಸಂಕಲ್ಪಪೂರ್ವಕವಾಗಿ ಅನ್ಯರ ಬದುಕಿಗೆ ಮಾರಕವಾಗುವ ಹಿಂಸಾಚಾರಣೆಯಲ್ಲಿ ತೊಡಗುವುದನ್ನು ಜೈನ ಧರ್ಮವು ತೀವ್ರವಾಗಿ ಖಂಡಿಸುತ್ತದೆ.

ಜೈನರ ಆದರ್ಶಗಳು ಜೀವನದ ವಾಸ್ತವಿಕ ಪ್ರಜ್ಞೆಯಿಂದ ದೂರವಾಗುವುದಿಲ್ಲ. ಬುದ್ಧನ ಹಾಗೂ ಜೈನರ ತತ್ತ್ವಗಳಲ್ಲಿರುವ ಅಂತರವೂ ಇದೇ ಆಗಿದೆ. ಬೌದ್ಧ ತತ್ತ್ವಗಳು ಕೆಲವು ಸಲ ಅವ್ಯವಹಾರಿಕವಾದ ಆದರ್ಶಗಳ ಸಮರ್ಥನೆಗೆ ಪ್ರವೃತ್ತವಾಗುತ್ತಿದೆ. ಜೈನರ ತತ್ತ್ವಗಳು ಆದರ್ಶವನ್ನು ಪ್ರತಿಪಾದಿಸಿಯೂ ಆ ಆದರ್ಶಗಳು ವಾಸ್ತವ ಜೀವನದ ಪ್ರವಾಹಕ್ಕೆ ವಿರುದ್ಧವಾಗಿ ಅವ್ಯವಹಾರಿಕವಾಗದಂತೆ ಪರಿಪೂರ್ಣ ಸಮನ್ವಯ ಸಾಧಿಸಿವೆ. ಈ ಸಮನ್ವಯ ಜೈನ ಮತದ ಹಿರಿಯ ವೈಶಿಷ್ಟ್ಯ ಸಲ್ಲೇಖನ ವ್ರತ-ಸಾಯುವವರೆಗೆ ಉಪವಾಸ ಮಾಡುವ ವ್ರತ. ಇದನ್ನು ಕೆಲವರು ಆತ್ಮಹತ್ಯೆ ಎಂದು ಕರೆದಿದ್ದಾರೆ. ಜೈನಧರ್ಮವು ಆತ್ಮಹತ್ಯೆಯನ್ನು ಬೋಧಿಸುವದೆಂದೂ ಹೇಳುತ್ತಾರೆ. ಆದರೆ ಇದು ಯುಕ್ತವಲ್ಲ. ಈ ವ್ರತವು ಯೋಗಿಗಳಿಗೆ ಮಾತ್ರ ಸಾಧ್ಯವಾಗುವುದು. ಆದ್ದರಿಂದ ಜೈನ ಧರ್ಮದ ಆಚರಣೆಗಳು ತಮ್ಮದೇ ಆದ ವೈಶಿಷ್ಟ್ಯಗಳಿಂದ ಇಂದಿಗೂ ಮಾದರಿಯಾಗಿ ನಿಂತಿವೆ. ಆಧುನಿಕ ಗದಗ ಪರಿಸರದಲ್ಲಿ ಜೈನ ಸಮಾಜವು ಈ ಎಲ್ಲಾ ಸ್ಥಿತ್ಯಂತರಗಳ ನಡುವೆಯೂ ಉತ್ತಮವಾದ ಒಂದು ಸಾಮಾಜಿಕ ಸಾಮರಸ್ಯ

ನಿರ್ಮಾಣ ಸಾಗುತ್ತಿದೆ. ಎಂಬುವುದನ್ನು ಕ್ಷೇತ್ರ ಅಧ್ಯಯನದ ಮೂಲಕ ಪ್ರತಿ ಕುಟುಂಬ ಸದಸ್ಯರ ಸಂದರ್ಶನದಿಂದ ಕಂಡು ಬಂದಿತ್ತು. ೧೨ನೆಯ ಶತಮಾನದ ಲಿಂಗ ಸಮಾನತೆ ಆಧುನಿಕತೆಯ ಸ್ತ್ರೀ ಸಮಾನತೆಗಳು ಜೈನ ಸಮಾಜದಲ್ಲಿ ಕಾಣುತ್ತಿರುವುದು ಸಮಾಧಾನದ ಸಂಗತಿ.

ಒಟ್ಟಿನಲ್ಲಿ ಗದಗ ಪರಿಸರವು ಜೈನ ಧರ್ಮಕ್ಕೆ ಕನ್ನಡ ಸಾಹಿತ್ಯಕ್ಕೆ ಆದಿಕವಿ, ಶಕ್ತಿಕವಿ, ವಿಡಂಬನಾ ಕವಿಗಳನ್ನು ನೀಡಿದೆ. ಆ ಕಾಲದಲ್ಲಿ ಕವಿಯಾಗಿ ಕಲಿಯಾಗಿ ತಮ್ಮದೇ ಆದ ಕೊಡುಗೆಯನ್ನು ಸಲ್ಲಿಸಿದ್ದಾರೆ. ಈ ಪ್ರದೇಶದಲ್ಲಿ ಉಪಲಬ್ಧವಿರುವ ಸು. ೨೫ ಜೈನ ಶಾಸನಗಳು ಮಲ್ಲಿಷೇಣರಂತಹ ಶಾಸನ ಕವಿಗಳು ಕನ್ನಡ ಲಿಪಿ-ಭಾಷಾ ಸಾಹಿತ್ಯಕ್ಕೆ ಅಪಾರವಾದ ಸೇವೆ ಸಲ್ಲಿಸಿದ್ದಾರೆ. ಹಲವಾರು ಜೈನ ಕವಿಗಳ ಕೃತಿಗಳು ಆ ಕಾಲದ ಸಾಮಾಜಿಕ, ಧಾರ್ಮಿಕ, ಆರ್ಥಿಕ ಸಾಂಸ್ಕೃತಿಕ ಹಾಗೂ ರಾಜಕೀಯ ಸ್ಥಿತಿಗತಿಗಳನ್ನು ಕಾವ್ಯ ಕೃತಿಗಳಲ್ಲಿ ಚಿತ್ರಿಸುತ್ತವೆ. ಇವುಗಳ ವಿಸ್ತೃತ ಅಧ್ಯಯನದೊಂದಿಗೆ ಈ ಪ್ರದೇಶದಲ್ಲಿ ಆಳ್ವಿಕೆ ನಡೆಸಿದ ಅರಸು ಮನೆತನಗಳು ಇವರು ಬೆಳೆಸಿದ ಜೈನ ಧರ್ಮದ ಬೆಳವಣಿಗೆಯನ್ನು ಗದಗ ಪರಿಸರದಲ್ಲಿ ಬೆಳೆದು ಬಂದ ಪರಿಯನ್ನು ಸಮಗ್ರ ಸಂಶೋಧನೆ ಅಧ್ಯಯನಕ್ಕೆ ಒಳಪಡಿಸಿದಾಗ ಗದಗ ಪರಿಸರ ಅಂದರೆ ಇಂದಿನ ಗದಗ ಜಿಲ್ಲೆಯಲ್ಲಿ ಜೈನ ಧರ್ಮದ ನೆಲೆಬಿಡಾಗಿತ್ತೆಂದು ಈ ಪ್ರಬಂಧದ ಮೂಲಕ ಸ್ಪಷ್ಟವಾಗುತ್ತದೆ. ಈ ಪ್ರಬಂಧದ ಪೂರಕವಾದ ಅಂಶಗಳನ್ನು ಹಾಗೂ ಅಧ್ಯಯನಕ್ಕೆ ಸಂಬಂಧಿಸಿದ ಪ್ರಮುಖ ಬಸದಿಗಳ ಛಾಯಾಪ್ರತಿಗಳನ್ನು ಕೊಡಲಾಗಿದೆ. ಈ ಪ್ರದೇಶದಲ್ಲಿ ಇನ್ನು ಹೆಚ್ಚಿನ ಜೈನಪರ ಅಧ್ಯಯನಕ್ಕೆ ಅವಕಾಶಗಳಿವೆ. ಗದಗ ಜಿಲ್ಲೆಯ ಜೈನ ಕವಿಗಳನ್ನು ಕುರಿತು ಗದಗ ಜಿಲ್ಲೆಯ ಜೈನ ಮುನಿಗಳನ್ನು ಕುರಿತು ಗದಗ ಜಿಲ್ಲೆಯ ಜೈನ ಶಾಸನಗಳ ಸಾಂಸ್ಕೃತಿಕ ಅಧ್ಯಯನ ಕುರಿತು ಅಧ್ಯಯನ ಕೈಕೊಳ್ಳಲು ವಿಫುಲವಾದ ಸಾಮಾಗ್ರಿ ದೊರೆಯುತ್ತದೆ.

***

# ಅನುಬಂಧಗಳು

೧. ನಕ್ಷೆಗಳು

೨. ಛಾಯಾಚಿತ್ರಗಳು

೩. ಮಾಹಿತಿದಾರರ ವಿವರ

೪. ಪರಾಮರ್ಶನ ಗ್ರಂಥಗಳು

ಅನುಬಂಧ-೧ : ನಕ್ಷೆಗಳು



ಗದಗ ಜಿಲ್ಲೆ ನಕ್ಷೆ


NARAGUND
ನರಗುಂದ
RON
ರೋಣ
GADAG
ಗದಗ
MUNDARGI
ಮುಂಡರಗಿ
SHIRAHATTI
ಶಿರಹಟ್ಟಿ



ಚಂದ್ರಪ್ರಭ ತೀರ್ಥಂಕರರ ಬಸದಿ (ತೀರ್ಥದ ಬಸದಿ) ಮುಳಗುಂದ



ಜಿನಮಂದಿರ, ಹೊಸೂರು



ಬ್ರಹ್ಮ ಜಿನಾಲಯ, ಲಕ್ಕುಂಡಿ



ಆನೆಸಜ್ಜೆ ಬಸದಿ, ಲಕ್ಷ್ಮೇಶ್ವರ



ಶಂಖ ಬಸದಿ, ಲಕ್ಷ್ಮೇಶ್ವರ



ಶ್ರೀ ಸೋಮೇಶ್ವರ ದೇವಸ್ಥಾನ (ಸುರಹೊನ್ನ ಬಸದಿ). ಲಕ್ಷ್ಮೇಶ್ವರ



ಶ್ರೀ ಪಾರ್ಶ್ವನಾಥ ದಿಗಂಬರ ಬಸದಿ, ಬನ್ನಿಕೊಪ್ಪ



ಶ್ರೀ ಪಾರ್ಶ್ವನಾಥ ಶ್ವೇತಾಂಬರ ಜಿನಮಂದಿರ, ಗದಗ



ಶ್ರೀ ಪಾರ್ಶ್ವನಾಥ ಶ್ವೇತಾಂಬರ ಮಂದಿರಮಾರ್ಗಿ. ಜಿನಮಂದಿರ ದಾದವಾಡಿ. ಗುರುದೇವ ನಗರ ಗದಗ



ಶ್ರೀ ತ್ರಿಮೂರ್ತಿ ಜಿನಮಂದಿರ ಮಲ್ಲಸಮುದ್ರ



ಶ್ರೀ ಶಾಂತಿನಾಥ ದಿಗಂಬರ ಜೈನಮಂದಿರ, ಕಳಸಾಪೂರ



ಶ್ರೀ ಪಾರ್ಶ್ವನಾಥ ಶ್ವೇತಾಂಬರ ಜಿನಮಂದಿರ, ಶಿರಹಟ್ಟಿ



ಶ್ರೀ ಪಾರ್ಶ್ವನಾಥ ದಿಗಂಬರ ಜಿನಮಂದಿರ, ರೋಣ



ಶ್ರೀ ನಾಗಶಿಲ್ಪಗಳು, ಚಿಂಚಲಿ



ಶ್ರೀ ನಾಗನಾಥ ದೇವಾಲಯದ ಮೂರ್ತಿ, ಲಕ್ಕುಂಡಿ



ಶ್ರೀ ನಾಗಮೂರ್ತಿ, ಮುಳಗುಂದ



ಧ್ಯಾನ ಮುದ್ರೆಯಲ್ಲಿ ಕುಳಿತ ತೀರ್ಥಂಕರರ ಮೂರ್ತಿ, ಮಲ್ಲಸಮುದ್ರ



ಭಗ್ನಗೊಂಡ ತೀರ್ಥಂಕರರ ಮೂರ್ತಿ, ಲಕ್ಕುಂಡಿ



ನಾಗಶಿಲ್ಪಗಳು, ಅಸುಂಡಿ



ಭಗ್ನಗೊಂಡ ತೀರ್ಥಂಕರರ ಮೂರ್ತಿಗಳು, ಲಕ್ಷ್ಮೇಶ್ವರ



ಅರ್ಧಕೆತ್ತಿದ ಬಾಹುಬಲಿಯ ಮೂರ್ತಿ. ಮುಳಗುಂದ



ಭಗ್ನಗೊಂಡಿರುವ ಜೈನ ಮೂರ್ತಿ ಹೊಸೂರು



ಭಗ್ನಗೊಂಡಿರುವ ತೀರ್ಥಂಕರರ ಮೂರ್ತಿಗಳು, ಛಬ್ಬಿ



ಭಗ್ನಗೊಂಡಿರುವ ತೀರ್ಥಂಕರರ ಮೂರ್ತಿಗಳು, ಬೆಳ್ಳಟ್ಟಿ



ಛಾಯಾ ಚಂದ್ರನಾಥ, ಚಿಂಚಲಿ



ಹಳೇ ಪಾರ್ಶ್ವನಾಥಮೂರ್ತಿ ಬನ್ನಿಕೊಪ್ಪ



ಸದ್ಯ ಪಾದ ಪೀಠದಲ್ಲಿ ಪ್ರತಿಷ್ಠಾಪನೆಗೊಂಡಿರುವ
ಪಾರ್ಶ್ವನಾಥಮೂರ್ತಿ ಬನ್ನಿಕೊಪ್ಪ



ಮಹಾವೀರಮೂರ್ತಿ ಬ್ರಹ್ಮಜಿನಾಲಯ ಲಕ್ಕುಂಡಿ



ಪದ್ಮಾವತಿ ಮೂರ್ತಿಶಿಲ್ಪ ಯಲ್ಲಮ್ಮ ದೇವಸ್ಥಾನ ಬೆಳ್ಳಟ್ಟಿ



ಜೈನ ಶಾಸನ ಮಲ್ಲಸಮುದ್ರ



ಪ್ರಥಮ ಉಪದೇಶ ತೀರ್ಥಂಕರನ ಶಿಲ್ಪ ಲಕ್ಷ್ಮೇಶ್ವರ



ಶಂಖ ಜಿನಾಲಯದ ಒಳಗೋಡೆಯ
ಎಡಬದಿಯಲ್ಲಿರುವ ಶಾಸನ ಲಕ್ಷ್ಮೇಶ್ವರ



ಶಂಖ ಜಿನಾಲಯದ ಒಳಗೋಡೆಯ
ಬಲಬದಿಯಲ್ಲಿರುವ ಶಾಸನ ಲಕ್ಷ್ಮೇಶ್ವರ



ಶಂಖ ಜಿನಾಲಯದ ಒಳಗೊಡೆಯ ಕಂಬದಲ್ಲಿರುವ ಶಾಸನ, ಲಕ್ಷ್ಮೇಶ್ವರ



ಉಡಚಮ್ಮನ ಗುಡಿ ಮುಂದೆ ಇರುವ ಶಾಸನ, ಅಸುಂಡಿ



ವೀರಭದ್ರೇಶ್ವರ ದೇವಾಲಯದ ಮುಂದೆ ಇರುವ ಶಾಸನ, ಸೊರಟೂರು



ಬಸದಿಯ ಮುಂದಿರುವ ಶಾಸನ ಸೊರಟೂರು



ಸೋಮೇಶ್ವರ ದೇವಸ್ಥಾನದಲ್ಲಿರುವ ಶಾಸನಗಳು, ಲಕ್ಷ್ಮೇಶ್ವರ



ಮಾರುತಿ ದೇವಸ್ಥಾನದ
ಮುಂದಿರುವ ಶಾಸನ, ಬೆಳ್ಳಟ್ಟಿ



ಮಾರುತಿ ದೇವಸ್ಥಾನದ ಒಳಗಿರುವ
ಜೋಗಿಬಂಡಿ ಶಾಸನ, ಬೆಳ್ಳಟ್ಟಿ



ಕ್ಷುಲ್ಲಕ ಸುರತ್ನ ಮುನಿಗಳು ಅನಂತನಾಥ ಬಸದಿ, ಲಕ್ಷ್ಮೇಶ್ವರ



ಸಲ್ಲೇಖನ ವ್ರತ ಕೈಗೊಂಡ, ಶ್ರೀ ರಾಯಪ್ಪ ಬರಗಾಲಿ ಲಕ್ಷ್ಮೇಶ್ವರ



ಮುನಿದೀಕ್ಷೆಯನ್ನು ತೆಗೆದುಕೊಂಡ ರಾಯಪ್ಪ ಬರಗಾಲಿಯವರ ಸಂಬಂಧಿಕರು ಲಕ್ಷ್ಮೇಶ್ವರ



ಆಚಾರ್ಯ ಮಹಾಶ್ರಮಣರ ಶಿಷ್ಯೆ ಸಾಧ್ವಿ ಹೇಮಪ್ರಭಾಜಿ, ಗದಗ





ಆಚಾರ್ಯ ಮಹಾಶ್ರಮಣರಿಂದ ಸಾಧ್ವಿ ದೀಕ್ಷೆ ಪಡೆದವರು, ಗದಗ



ದೆಹಲಿಯ ಆಚಾರ್ಯ ಶ್ರೀ ಮಹಾಶ್ರಮಣರು ಗದುಗಿಗೆ ಭೇಟಿ ನೀಡಿದ ಸಂದರ್ಭ






ರೇಲ್ವೆ ಹಾಗೂ ಬಸ್‌ನಿಲ್ದಾಣದಲ್ಲಿ ಜೈನ ಸಮಾಜದವರು ನಿರ್ಮಿಸಿದ ನೀರಿನ ಅರವಟಿಗೆ




ಶ್ರೀ ಸಿ.ಡಿ.ಓ. ಜೈನ ಆಂಗ್ಲ ಮಾಧ್ಯಮ ಶಾಲೆ, ಗದಗ



ಶ್ರೀ ಮಹಾವೀರ ಶಿಕ್ಷಣ ಸಂಸ್ಥೆಯ
ಶ್ರೀ ಪಾರ್ಶ್ವನಾಥ ಆಂಗ್ಲೋ ಮಾಧ್ಯಮ ಶಾಲೆ, ಗದಗ



ಶ್ರೀ ಆರ್. ಎನ್. ದೇಶಪಾಂಡೆ ಸರಕಾರಿ ಪ್ರಥಮ ದರ್ಜೆ ಕಾಲೇಜು, ಮುಳಗುಂದ

ಶ್ರವಣಬೆಳಗೊಳದ ಭಗವಾನ ಬಾಹುಬಲಿಯ ಮಹಾಮಸ್ತಕಾಭಿಷೇಕದ ನಿಮಿತ್ಯ ನಾಡಿನಾದ್ಯಂತ ಸಂಚರಿಸಿದ ಪ್ರಭಾವನಾ ಧಾರ್ಮಿಕ ರಥ ಗದಗ ನಗರಕ್ಕೆ ಬಂದಾಗ ಜಿಲ್ಲಾಧಿಕಾರಿಗಳು ಹಾಗೂ ಜೈನ ಶ್ರಾವಕರು ಬರಮಾಡಿಕೊಂಡು ಧರ್ಮಸಂಪನ್ನತೆ ಬೆಳೆಸಿಕೊಂಡರು.



ಗದಗ ಜಿಲ್ಲಾ ದಿಗಂಬರ ಸಂಘದ ವತಿಯಿಂದ ಹತಿ, ಸೊರಟೂರ, ಗದಗ, ಮಲ್ಲಸಮುದ್ರ ಗ್ರಾಮಗಳಲ್ಲಿ ಜರುಗಿದ ದಶಲಕ್ಷಣಪರ್ವ ಹಾಗೂ ಧಾರ್ಮಿಕ ಚಿಂತನ ಕಾರ್ಯಕ್ರಮಗಳು.














ಗದಗ ಜಿಲ್ಲಾ ದಿಗಂಬರ ಸಂಘದ ವತಿಯಿಂದ ಹತಿ, ಸೊರಟೂರ, ಗದಗ, ಮಲ್ಲಸಮುದ್ರ ಗ್ರಾಮಗಳಲ್ಲಿ ಜರುಗಿದ ದಶಲಕ್ಷಣಪರ್ವ ಹಾಗೂ ಧಾರ್ಮಿಕ ಚಿಂತನ ಕಾರ್ಯಕ್ರಮಗಳು.








ಗದಗ ಜಿಲ್ಲಾ ದಿಗಂಬರ ಸಂಘದ ವತಿಯಿಂದ ಹತಿ, ಸೊರಟೂರ, ಗದಗ, ಮಲ್ಲಸಮುದ್ರ ಗ್ರಾಮಗಳಲ್ಲಿ ಜರುಗಿದ ದಶಲಕ್ಷಣಪರ್ವ ಹಾಗೂ ಧಾರ್ಮಿಕ ಚಿಂತನ ಕಾರ್ಯಕ್ರಮಗಳು.













## ಅನುಬಂಧ ೩ : ಮಾಹಿತಿದಾರರ ವಿವರ

| ಕ್ರ.ಸಂ | ಮಾಹಿತಿದಾರರ ಹೆಸರು | ವೃತ್ತಿ | ವಯಸ್ಸು | ಜಾತಿ | ಊರು |
|---|---|---|---|---|---|
| ೧) | ಅಜಿತ ಪಿ. ಪಿಡ್ಡಿ | ಕೃಷಿಕರು | ೫೫ | ಜೈನರು | ಬನ್ನಿಕೊಪ್ಪ |
| ೨) | ಅನಂತಾಚಾರ್ಯರು | ಶ್ರಾವಕರು | ೬೦ | ಜೈನರು | ಲಕ್ಕುಂಡಿ |
| ೩) | ಆರ್. ಪಿ. ಕೋಲಾರ | ಶಿಕ್ಷಕರು | ೫೦ | ಇತರೆ | ಗದಗ |
| ೪) | ಆರ್. ಎನ್. ದೇಶಪಾಂಡೆ | ಸಮಾಜಸೇವಕರು | ೭೦ | ಜೈನರು | ಮುಳಗುಂದ |
| ೫) | ಕಲ್ಲನಗೌಡ ಪಾಟೀಲ | ಶಿಕ್ಷಕರು | ೬೫ | ಜೈನರು | ಮಲ್ಲಸಮುದ್ರ |
| ೬) | ಕ್ಷುಲ್ಲಕ ಸುರತ್ನ ಮುನಿಗಳು | ಕ್ಷುಲ್ಲಕ ಮುನಿ | ೬೦ | ಜೈನರು | ಲಕ್ಷ್ಮೇಶ್ವರ |
| ೭) | ಜೀವರಾಜ ಜೈನ | ಗೋಶಾಲೆ ವ್ಯವಸ್ಥಾಪಕರು | ೫೦ | ಜೈನರು | ಕಳಸಾಪುರ |
| ೮) | ದೇವೇಂದ್ರ ಜೈನರ | ಕೃಷಿಕರು | ೪೮ | ಜೈನರು | ಬೆಳ್ಳಟ್ಟಿ |
| ೯) | ದಿನೇಶ ಶಿರಹಟ್ಟಿ | ವ್ಯಾಪಾರಿಗಳು | ೪೫ | ಜೈನರು | ಶಿರಹಟ್ಟಿ |
| ೧೦) | ಪದ್ಮರಾಜ ಕುಲಕರ್ಣಿ | ಶಿಕ್ಷಕರು | ೫೫ | ಜೈನರು | ಗದಗ |
| ೧೧) | ಬಿ. ಎಸ್. ನಾವಳ್ಳಿ | ಕೃಷಿಕರು | ೬೫ | ಜೈನರು | ಹರ್ತಿ |
| ೧೨) | ಯಲ್ಲಪ್ಪ ಸೋಂಪುರ | ಶ್ರಾವಕರು | ೬೫ | ಜೈನರು | ಗಜೇಂದ್ರಗಡ |
| ೧೩) | ರಾಮಚಂದ್ರ ಬೆಂತೂರ | ಶ್ರಾವಕರು | ೪೦ | ಜೈನರು | ಸೊರಟೂರ |
| ೧೪) | ವಾಸನಗೌಡ ಪಾಟೀಲ | ಶ್ರಾವಕರು | ೬೫ | ಜೈನರು | ಲಕ್ಷ್ಮೇಶ್ವರ |
| ೧೫) | ಸುನೀಲ ಹಿರೇಗೌಡ್ರ | ವ್ಯಾಪಾರಿಗಳು | ೫೫ | ಜೈನರು | ಬೆಳ್ಳಟ್ಟಿ |
| ೧೬) | ಸುರೇಶ ಕೋಠಾರಿ | ವ್ಯಾಪಾರಿಗಳು | ೫೦ | ಜೈನರು | ಗದಗ |

# ಅನುಬಂಧ–೪

## ಪರಾಮರ್ಶನ ಗ್ರಂಥಗಳು


೧. ಆರನೆಯ ವಿಕ್ರಮಾದಿತ್ಯನ ಶಾಸನಗಳು – ಡಾ. ಜಿ. ಎಂ. ನಾಗಯ್ಯ, ವೀರಶೈವ ಅಧ್ಯಯನ ಅಕಾಡೆಮಿ ಶ್ರೀ ನಾಗನೂರು ರುದ್ರಾಕ್ಷಿ ಮಠ, ಬೆಳಗಾವಿ – ೧೯೮೭.

೨. ಆಧುನಿಕ ಕನ್ನಡ ಕಥಾ ಸಾಹಿತ್ಯದಲ್ಲಿ ಜೈನ ಸಂವೇದನೆ – ಡಾ. ಬಾಳಾಸಾಹೇಬ ಲೋಕಾಪುರ – ಕ.ವಿ.ವಿ. ಹಂಪಿ – ೨೦೦೪.

೩. ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ – ಡಾ. ಎಂ. ಚಿದಾನಂದ ಮೂರ್ತಿ – ಪ್ರಸಾರಾಂಗ ಮೈಸೂರು – ೧೯೬೬.

೪. ಕನ್ನಡ ಆದಿ ತೀರ್ಥಂಕರರ ಚರಿತ್ರೆಗಳು – ಡಾ. ಸರಸ್ವತಿ ವಿಜಯಕುಮಾರ – ಮೈಸೂರು ವಿ.ವಿ. – ೧೯೯೩.

೫. ಕನ್ನಡ ಸಾಹಿತ್ಯದಲ್ಲಿ ಬಾಹುಬಲಿ – ಡಾ. ಎಸ್. ಬಿ. ಪಾಟೀಲ – ಕ.ವಿ.ವಿ. ಧಾರವಾಡ –೧೯೯೭.

೬. ಕನ್ನಡ ಸಾಹಿತ್ಯದಲ್ಲಿ ಹಾಸ್ಯ, ಡಾ. ಎಂ. ಎಸ್. ಸುಂಕಾಪುರ, ಕ.ವಿ.ವಿ. ಧಾರವಾಡ – ೧೯೬೦.

೭. ಕನ್ನಡ ಜೈನ ಪರಂಪರೆಗಳು ಸಮಗ್ರ ಅಧ್ಯಯನ – ಡಾ. ಎಚ್. ಶಿವಾನಂದ – ಗುಲ್ಬರ್ಗಾ ವಿ.ವಿ. – ೨೦೦೩.

೮. ಕರ್ನಾಟಕದಲ್ಲಿ ಜೈನ ಧರ್ಮ, ಜೈನ ಶಾಸ್ತ್ರ ಮತ್ತು ಪ್ರಾಕೃತ ವಿಭಾಗ – ಡಾ. ಟಿ. ಜಿ. ಕಲಘಟಗಿ – ಮೈಸೂರು ವಿ.ವಿ. – ೧೯೭೬.

೯. ಕರ್ನಾಟಕ ಸಂಸ್ಕೃತಿ ಸಮೀಕ್ಷೆ – ಡಾ. ಎಚ್. ತಿಪ್ಪೇರುದ್ರಸ್ವಾಮಿ, ಡಿ. ವಿ. ಕೆ. ಮೂರ್ತಿ ಮೈಸೂರು – ೧೯೬೮.

೧೦. ಕರ್ನಾಟಕ ಮತ್ತು ಜೈನ ಧರ್ಮ – ಡಾ. ಹಂಪನಾ – ಆಯ್. ಬಿ. ಎಚ್. ಪ್ರಕಾಶನ ಬೆಂಗಳೂರು.

೧೧. ಜೈನ ಪರಂಪರೆಗೆ ಬೆಳಗಾವಿ ಜಿಲ್ಲೆಯ ಕೊಡುಗೆ – ಡಾ. ಬಾಹುಬಲಿ ಹಂದರೂ – ಕ.ವಿ.ವಿ. ಧಾರವಾಡ – ೨೦೦೧.

೧೨. ಜೈನ ಧರ್ಮ – ಡಾ. ಕಮಲಾ ಹಂಪನಾ – ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ ಬೆಂಗಳೂರು – ೧೯೯೭

೧೩. ಜೈನ ಧರ್ಮ, ಮಿರ್ಜಿ ಅಣ್ಣಾರಾಯರು, ಶೇಡಬಾಳ – ೧೯೫೫.

೧೪. ಜೈನ ಪಾರಿಭಾಷಿಕ ಪದ ವಿವರ ಕೋಶ – ಡಾ. ಸರಸ್ವತಿ ವಿಜಯಕುಮಾರ, ಬಾ. ವೇ. ಶ್ರೀಧರ – ೨೦೦೬.

೧೫. ಜೀವನ ಜೋಕಾಲಿ, ಸಂ. ಡಾ. ಎಂ. ಎಸ್. ಸುಂಕಾಪುರ, ಕ.ವಿ.ವಿ. ಧಾರವಾಡ – ೧೯೭೪.

೧೬. ತರ್ದವಾಡಿ ನಾಡು ಒಂದು ಅಧ್ಯಯನ – ಡಾ. ಎಸ್. ಕೆ. ಕೊಪ್ಪ – ಪ್ರತಿಭಾ ಪ್ರಕಾಶನ ಇಂಡಿ – ೧೯೯೦.

೧೭. ದಾನಚಿಂತಾಮಣಿ ಅತ್ತಿಮಬ್ಬೆ – ಶ್ರೀಮತಿ ಪಾರ್ವತೆವ್ವ ಪೂಜಾರ – ಕ.ವಿ.ವಿ. ಹಂಪಿ – ೨೦೦೪.

೧೮. ಧಾರವಾಡ ಪರಿಸರದಲ್ಲಿ ಜೈನ ಧರ್ಮ – ಡಾ. ಅಪ್ಪಣ್ಣ ಹಂಜೆ – ೨೦೦೮.

೧೯. ನಯಗಾರ ನಯಸೇನ – ಡಾ. ಎಂ. ಎಸ್. ಸುಂಕಾಪುರ, ಕ.ವಿ.ವಿ. ಪ್ರಸಾರಾಂಗ ಧಾರವಾಡ – ೧೯೭೬.

೨೦. ನಯಸೇನ – ಡಾ. ವಿಜಯಾ ಡಿ. – ಪ್ರಸಾರಾಂಗ ಮೈಸೂರು ವಿ.ವಿ. – ೧೯೭೭.

೨೧. ನಯಸೇನ ಮತ್ತು ಅವನ ಕೃತಿಗಳು, ಡಾ. ಬಿ. ವಿ. ಮಲ್ಲಾಪುರ, ಕ.ವಿ.ವಿ. ಧಾರವಾಡ – ೧೯೭೫.

೨೨. ನಮ್ಮ ಗದಗ–ಬೆಟಗೇರಿ, ಗದಗ–ಬೆಟಗೇರಿ ನಗರದ ವಿವರವಾದ ಇತಿಹಾಸ–ಮಾಹಿತಿ ಗ್ರಂಥ, ಸಂ. ಹ.ರಾ. ಕಿದಿಯೂರ, ಡೈರೆಕ್ಟರಿ ಪಬ್ಲಿಷರ್ಸ್, ಗದಗ –೧೯೭೫.

೨೩. ನಾಗರಖಂಡ–೭೦ – ಡಾ. ಭೋಜರಾಜ ಪಾಟೀಲ – ಮಲೆನಾಡ ವೀರಶೈವ ಅಕಾಡೆಮಿ, ಆನಂದಪೂರ – ೧೯೯೩.

೨೪. ಮಲಿಗೇರಿ ಐತಿಹಾಸಿಕ, ಸಾಹಿತ್ಯಿಕ ಮತ್ತು ಸಾಂಸ್ಕೃತಿಕ ಮಹತ್ವ – ಡಾ. ಆರ್. ಶರಣಮ್ಮ, ಕ.ವಿ.ವಿ. ಧಾರವಾಡ – ೧೯೭೪.

೨೫. ಪ್ರಸಾದ, ೪೩ನೇ ಕನ್ನಡ ಸಾಹಿತ್ಯ ಸಮ್ಮೇಳನಾಂಕ, ಗದಗ–ಬೆಟಗೇರಿ, ಸಂ. ಜಯರಾಮಾಚಾರ್ಯ ಮಳಗಿ – ೧೯೬೧.

೨೬. ಬೆಳ್ವೊಲ, ಡಾ. ಆರ್. ಸಿ. ಹಿರೇಮಠ ಅಭಿನಂದ ಗ್ರಂಥ, ಸಂ. ಡಾ. ಎಂ. ಎಸ್. ಸುಂಕಾಪುರ, ಡಾ. ಎಂ. ಎಂ. ಕಲಬುರ್ಗಿ, ಡಾ. ಆರ್. ಸಿ. ಹಿರೇಮಠ ಸನ್ಮಾನ ಸಮಿತಿ, ಕ.ವಿ.ವಿ. ಧಾರವಾಡ – ೧೯೮೧.

೨೭. ಬೆಳ್ವೊಲ ಬೆಳಕು, ಸ್ಮರಣ ಸಂಚಿಕೆ, ಅಖಿಲ ಭಾರತ ೭೬ನೇ ಕನ್ನಡ ಸಾಹಿತ್ಯ ಸಮ್ಮೇಳನ, ಗದಗ, ಸಂ. ಡಾ. ಬಿ. ಎಸ್. ಗೊರವರ ಮತ್ತು ಡಾ. ಅರ್ಜುನ ಗೊಳಸಂಗಿ – ೨೦೧೦.

೨೮. ಭಾರತೀಯ ಸಂಸ್ಕೃತಿಗೆ ಜೈನ ಧರ್ಮದ ಕೊಡುಗೆ – ಮೂಲ ಹೀರಾಲಾಲ ಜೈನ ಅನು : ಮಿರ್ಜಿ ಅಣ್ಣಾರಾಯರು

೨೯. ಮುಳಗುಂದನಾಡು, ಡಾ. ರಿತ್ತಿ ಶ್ರೀನಿವಾಸ, ಕ.ವಿ.ವಿ. ಪ್ರಸಾರಾಂಗ ಧಾರವಾಡ – ೧೯೬೯.

೩೦. ಮುಳಗುಂದ ಒಂದು ಸಾಂಸ್ಕೃತಿಕ ಅಧ್ಯಯನ – ಡಾ. ಆರ್. ಜಿ. ತುರಡಗಿ – ೧೯೯೬ (ಇತಿಹಾಸ ಎಂ.ಫಿಲ್. ಕೃತಿ)

೩೧. ಮುಳಗುಂದ ನಾಡು ಅಧ್ಯಯನ – ಡಾ. ಧನವಂತ ಹಾಜಿವಗೋಳ – ಕ.ವಿ.ವಿ. ಧಾರವಾಡ – ೨೦೦೫.

೩೨. ಯಾಪನೀಯ ಸಂಘ – ಡಾ. ಹಂಪನಾ – ಪ್ರಸಾರಾಂಗ ಕ.ವಿ.ವಿ. ಹಂಪಿ. – ೧೯೯೯.

೩೩. ರಂಗಭೂಮಿಗೆ ಗದುಗಿನ ಕೊಡುಗೆ – ಡಾ. ಸುರೇಶ ಅಂಗಡಿ– ಕ.ವಿ.ವಿ. ಧಾರವಾಡ – ೨೦೦೦

೩೪. ರಟ್ಟರ ಕಾಲದ ಸಾಂಸ್ಕೃತಿಕ ಅಧ್ಯಯನ – ಡಾ. ಎಸ್. ಬಿ. ಪಾಟೀಲ – ಕ.ವಿ.ವಿ. ಧಾರವಾಡ – ೧೯೮೬.

೩೫. ರನ್ನ ಮತ್ತು ಅವನ ಕೃತಿಗಳು – ಡಾ. ರಾಮಕೃಷ್ಣ ಎಂ. – ಮೈಸೂರು ವಿ.ವಿ. – ೧೯೮೦.

೩೬. ಶ್ರವಣಬೆಳಗೊಳ ರಾಜಕೀಯ ಹಾಗೂ ಸಾಂಸ್ಕೃತಿಕ ಮಹತ್ವ, ಡಾ. ಬಿ. ವಿ. ಶಿರೂರ – ಕ.ವಿ.ವಿ. ಧಾರವಾಡ – ೧೯೭೨.

೩೭. ಶಾಸನಗಳಲ್ಲಿ ಕರ್ನಾಟಕದ ಸ್ತ್ರೀ ಸಮಾಜ – ಡಾ. ಚನ್ನಕ್ಕ ಪಾವಟೆ – ಕ.ವಿ.ವಿ. ಧಾರವಾಡ – ೧೯೮೧.

೩೮. ಶಾಸನಗಳಲ್ಲಿ ಕರ್ನಾಟಕದ ವರ್ತಕರು – ಡಾ. ಬಿ. ಆರ್. ಹಿರೇಮಠ – ಕ.ವಿ.ವಿ. ಧಾರವಾಡ – ೧೯೮೨.

೩೯. ಶಿರಹಟ್ಟಿ ಫಕ್ಕೀರೇಶ್ವರ ಸಂಸ್ಥಾನ ಮಠ : ಒಂದು ಅಧ್ಯಯನ – ಡಾ. ಎಸ್.ಆರ್.ಶಿರಹಟ್ಟಿ – ಕ.ವಿ.ವಿ. ಧಾರವಾಡ–೨೦೦೦.

೪೦. ಸಮೀಕ್ಷೆ, ಸ್ಮರಣ ಸಂಪುಟ, ಸಂ. ಚಂದ್ರಶೇಖರ ವಸ್ತ್ರದ, ಸ್ವಾಗತ ಸಮಿತಿ, ಅಖಿಲ ಭಾರತ ೭೬ನೇ ಕನ್ನಡ ಸಾಹಿತ್ಯ ಸಮ್ಮೇಳನ, ಗದಗ ಜಿಲ್ಲಾ ಸಾಹಿತ್ಯ ಪರಿಷತ್ತು, ಗದಗ – ೨೦೧೦.

೪೧. ಕರ್ನಾಟಕ ಗೆಜೆಟೆರಿಯರ್.

೪೨. ಧಾರವಾಡ ಜಿಲ್ಲಾ ಗೆಜೆಟೆರಿಯರ್.

೪೩. ಗದಗ ಜಿಲ್ಲಾ ಗೆಜೆಟೆರಿಯರ್.

## ಪತ್ರಿಕೆಗಳು

೧. ಜಿನವಾಣಿ – ಜೈನಶಾಸ್ತ್ರ ಅಧ್ಯಯನ ವಿಭಾಗದ ಪ್ರಕಟಣೆ – ಕ.ವಿ.ವಿ. ಧಾರವಾಡ

೨. ತೀರ್ಥಂಕರರ ಮಾಸಪತ್ರಿಕೆ, ಶ್ರವಣಬೆಳಗೊಳ

೩. ಸಂಯುಕ್ತ ಕರ್ನಾಟಕ, ದಿನಪತ್ರಿಕೆ, ಹುಬ್ಬಳ್ಳಿ

೪. ವಿಜಯಕರ್ನಾಟಕ, ದಿನಪತ್ರಿಕೆ, ಹುಬ್ಬಳ್ಳಿ

೫. ವಿಜಯವಾಣಿ, ದಿನಪತ್ರಿಕೆ, ಹುಬ್ಬಳ್ಳಿ

೬. ನವೋದಯ, ದಿನಪತ್ರಿಕೆ, ಗದಗ.

೭. ನಾಗರಿಕ, ದಿನಪತ್ರಿಕೆ, ಗದಗ.